# ಪುಷ್ಪೋದ್ಯಮ

## ಮಲ್ಲಿಗೆ ಕೃಷಿ - ವರ್ತಮಾನ ಮತ್ತು ಭವಿಷ್ಯ

## ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳ ತುಲಾನಾತ್ಮಕ ಅಧ್ಯಯನ

ಅರ್ಥಶಾಸ್ತ್ರದಲ್ಲಿ ಪಿಎಚ್.ಡಿ. ಪದವಿಗಾಗಿ

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ

ಮಹಾಪ್ರಬಂಧ




ಮಾನ್ಯತೆ

ಕನ್ನಡ ವಿಶ್ವವಿದ್ಯಾಲಯ ಹಂಪಿ

ವಿದ್ಯಾರಣ್ಯ, ೫೮೩೨೭೬

ಜನವರಿ ೨೦೧೨

# ಪುಷ್ಪೋದ್ಯಮ

## ಮಲ್ಲಿಗೆ ಕೃಷಿ - ವರ್ತಮಾನ ಮತ್ತು ಭವಿಷ್ಯ

## ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳ ತುಲಾನಾತ್ಮಕ ಅಧ್ಯಯನ

ಅರ್ಥಶಾಸ್ತ್ರದಲ್ಲಿ ಪಿಎಚ್.ಡಿ. ಪದವಿಗಾಗಿ

ಹಂಪಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ

ಮಹಾಪ್ರಬಂಧ




ಮಾನ್ಯತೆ

ಕನ್ನಡ ವಿಶ್ವವಿದ್ಯಾಲಯ ಹಂಪಿ

ವಿದ್ಯಾರಣ್ಯ, ೫೮೩೨೭೬

ಜನವರಿ ೨೦೧೨.

## ಅನುಕ್ರಮಣಿಕೆ

# ಕೋಷ್ಟಕಗಳು

## ಚಿತ್ರಗಳು ಮತ್ತು ನಕ್ಷೆಗಳು

## ನಕ್ಷೆಗಳು

# ಅಧ್ಯಾಯ – ೧

# ಪ್ರಸ್ತಾವನೆ ಮತ್ತು ಸಂಶೋಧನ ವಿನ್ಯಾಸ

## ೧.೧. ಸಮಸ್ಯೀಕರಣ

ಅಲೆಮಾರಿ ಮಾನವ ಕುಟುಂಬ ವ್ಯವಸ್ಥೆಯನ್ನು ಒಪ್ಪಿಕೊಂಡು ಸ್ಥಾವರನಾದ ಮೇಲೆ ಕೃಷಿ ಚಟುವಟಿಕೆಗಳು ಜೀವನೋಪಾಯದ ಮಾರ್ಗಗಳೆನಿಸಿದವು. ಕೃಷಿಯ ಒಂದು ಭಾಗವಾಗಿ ಪುಷ್ಪ ಕೃಷಿ ಬೆಳೆಯಿತು. ಆಡಂಸ್ಮಿತ್‌ನಿಂದ ಬೆಳವಣಿಗೆ ಹೊಂದಿದ ಅರ್ಥವಿಜ್ಞಾನವು ಎಲ್ಲಾ ವಸ್ತುಗಳನ್ನು ಮಾರಾಟದ ಸರಕುಗಳಾಗಿ ಪರಿಭಾವಿಸತೊಡಗಿದ ಮೇಲೆ ಮತ್ತು ಇಂಗ್ಲೆಂಡಿನ ಕೃಷಿ ಕ್ರಾಂತಿಯ ಬಳಿಕ ಕೃಷಿಯು ಒಂದು ಉದ್ಯಮವಾಯಿತು. ಆ ಬಳಿಕ ಕೃಷಿ ಕ್ಷೇತ್ರದ ಒಂದು ಭಾಗವಾಗಿ ಪುಷ್ಪೋದ್ಯಮ ಪ್ರಗತಿಯನ್ನು ಕಂಡಿತು.

ಪುಷ್ಪೋದ್ಯಮದ ಪ್ರಧಾನ ಚಟುವಟಿಕೆಗಳು ಎರಡು: ಉತ್ಪಾದನೆ ಮತ್ತು ಮಾರಾಟ. ಇವೆರಡೂ ಪೂರೈಕೆಗೆ ಸಂಬಂಧಿಸಿದ ಚಟುವಟಿಕೆಗಳು. ಆಡಂಸ್ಮಿತ್ತನದ್ದು ಪೂರೈಕೆ ಭಾಗದ ಅರ್ಥಶಾಸ್ತ್ರ (Supply Side Economics). ಅಂದಿನಿಂದ ಇಂದಿನವರೆಗೂ ಅರ್ಥಶಾಸ್ತ್ರಜ್ಞರು ಪೂರೈಕೆಗೆ ಹೆಚ್ಚು ಮಹತ್ವ ನೀಡಿದ್ದಾರೆ. ಪೂರೈಕೆಯು ವಸ್ತುನಿಷ್ಠವಾಗಿರುವುದು (Objective) ಮತ್ತು ಮಾಪನಕ್ಕೆ ನಿಲುಕುವ ಚರ ಪರಿಮಾಣವಾಗಿರುವುದು (Variable) ಇದಕ್ಕೆ ಕಾರಣ. ಪೂರೈಕೆಯು ವೆಚ್ಚವನ್ನು ಕೂಡಾ ಅವಲಂಬಿಸಿಕೊಂಡಿರುತ್ತದೆ. ವೆಚ್ಚವೂ ಒಂದು ಮಾಪನಕ್ಕೆ ನಿಲುಕುವ ವಸ್ತುನಿಷ್ಠ ಚರ ಪರಿಮಾಣ. ಪೂರೈಕೆಯ ಮಹತ್ವವನ್ನು ಜೆ. ಬಿ ಸೇಯು ತನ್ನ ಮಾರುಕಟ್ಟೆ ನಿಯಮದಲ್ಲಿ "ಪೂರೈಕೆಯು ತನ್ನ ಮಾರುಕಟ್ಟೆಯನ್ನು ತಾನೇ ಸೃಷ್ಟಿಸಿಕೊಳ್ಳುತ್ತದೆ." ಎಂಬ ಹೇಳಿಕೆಯ ಮೂಲಕ ಪ್ರತಿಪಾದಿಸಿದ್ದಾನೆ. ಬೆಲೆ ನಿರ್ಣಯದಲ್ಲಿ ಬೇಡಿಕೆಗೆ ಪೂರೈಕೆಯಷ್ಟೇ ಮಹತ್ವ ಇರಬೇಕಾದುದು ಸಹಜ. ಆದರೆ ಬೇಡಿಕೆಯು ವಸ್ತುವಿನ ಉಪಯೋಗವನ್ನು ಅವಲಂಬಿಸಿದ್ದು, ಉಪಯೋಗವು ವ್ಯಕ್ತಿನಿಷ್ಠವಾದ ಮಾಪನಕ್ಕೆ ಅಸಾಧ್ಯವಾದ ಚರ ಪರಿಮಾಣವಾಗಿದೆ. ಹಾಗಾಗಿ ಬೇಡಿಕೆಯನ್ನು ವ್ಯಕ್ತಿನಿಷ್ಠ ಚರ ಪರಿಮಾಣವೆಂದು (Subjective Variable) ಪರಿಭಾವಿಸಿ ಅರ್ಥಶಾಸ್ತ್ರಜ್ಞರು ಪೂರೈಕೆಯ ಭಾಗಕ್ಕೆ ಒತ್ತು ನೀಡಿದ್ದಾರೆ.

ಪ್ರಸಕ್ತ ಅಧ್ಯಯನವು ಪೂರೈಕೆಯನ್ನು ಪ್ರಧಾನವಾಗಿರಿಸಿ ಮಲ್ಲಿಗೆಯ ಕೃಷಿಯ ವರ್ತಮಾನವನ್ನು ಮತ್ತು ಭವಿಷ್ಯವನ್ನು ವಿಶ್ಲೇಷಿಸುತ್ತದೆ. ಕರ್ನಾಟಕದಲ್ಲಿ ಮೈಸೂರು, ಹೂವಿನ

ಹಡಗಲಿ, ಮಂಗಳೂರು ಮತ್ತು ಉಡುಪಿ ಮಲ್ಲಿಗೆ ಬೆಳೆಯ ಪ್ರಧಾನ ಕೇಂದ್ರಗಳಾಗಿ ಹೆಸರು ಪಡೆದಿವೆ, ಕನ್ನಡ ಸಾಹಿತ್ಯದಲ್ಲಿ ಮತ್ತು ಚಲನಚಿತ್ರಗಳಲ್ಲಿ ಕಾಣಿಸಿಕೊಂಡಿವೆ. ಉಡುಪಿ ಮತ್ತು ದಕ್ಷಿಣ ಕನ್ನಡ (ದ.ಕ.) ಕರ್ನಾಟಕದ ಕರಾವಳಿ ಜಿಲ್ಲೆಗಳು. ದ.ಕ. ಜಿಲ್ಲೆಯಿಂದ ಉಡುಪಿ ಪ್ರತ್ಯೇಕಗೊಂಡರೂ ಜಿಲ್ಲೆಯಲ್ಲಿ ಮಲ್ಲಿಗೆ ಬೆಳೆಯ ಮಹತ್ವ ಕಡಿಮೆಯಾಗಿಲ್ಲ. ಪಿತ್ರಾರ್ಜಿತ ಆಸ್ತಿಯ ಹಕ್ಕು, ವಿಶೇಷ ಆರ್ಥಿಕ ವಲಯ ನಿರ್ಮಾಣ ಮತ್ತು ಕಟ್ಟಡ ಉದ್ಯಮಕ್ಕೆ ಈ ಜಿಲ್ಲೆಯಲ್ಲಿ ವಿಶೇಷ ಪ್ರಾಶಸ್ತ್ಯವಿರುವುದರಿಂದ ಭೂಮಿ ಛಿದ್ರೀಕರಣಗೊಳ್ಳುತ್ತಲೇ ಹೋಗುತ್ತಿದೆ. ಬಡಪಾಯಿ ರೈತ ಬದುಕಲು ಹೊಸ ಹೊಸ ಹಾದಿಗಳನ್ನು ಅನ್ವೇಷಿಸುವುದು ಅನಿವಾರ್ಯವಾಗಿದೆ. ದ.ಕ. ಜಿಲ್ಲೆಯ ವಿಶ್ವವಿಖ್ಯಾತ ಹೆಂಚು ಉದ್ದಿಮೆ ಅಪಕರ್ಷದ ಹಾದಿ ಹಿಡಿದಿದೆ. ರಬ್ಬರು ಬೆಳೆಯಿಂದಾಗಿ ಗೇರು ಹಾಡಿಗಳು ಕಡಿಮೆಯಾಗಿ ಗೇರು ಉದ್ದಿಮೆ ಹಿಂಜರಿತಕ್ಕೆ ಒಳಗಾಗಿದೆ. ಬೀಡಿ ಕಾರ್ಮಿಕರು ಅರ್ಬುದ ಮತ್ತು ಕ್ಷಯ ರೋಗಕ್ಕೆ ತುತ್ತಾಗುತ್ತಿರುವುದರಿಂದ ಬದಲಿ ವೃತ್ತಿಗಾಗಿ ಹಾತೊರೆಯುತ್ತಿದ್ದಾರೆ. ಇಂತಹ ಕಾಲದಲ್ಲಿ ಮಲ್ಲಿಗೆ ಪುಷ್ಪೋದ್ಯಮ ಜಿಲ್ಲೆಯಲ್ಲಿ ಚಿಗಿತುಕೊಳ್ಳುತ್ತಿದೆ. ಮಲ್ಲಿಗೆ ಪುಷ್ಪೋದ್ಯಮದ ವರ್ತಮಾನವನ್ನು ವಿಶ್ಲೇಷಿಸಿ ಭವಿಷ್ಯವನ್ನು ಮುಂಗಾಣಲು ಈ ಅಧ್ಯಯನವನ್ನು ಕೈಗೊಳ್ಳಲಾಗಿದೆ.

ಮಲ್ಲಿಗೆ ಕೃಷಿಗೆ ಸಂಬಂಧಿಸಿದ ಸಮಸ್ಯೆಗಳನ್ನು ಸ್ಥೂಲವಾಗಿ ಬೇಡಿಕೆಗೆ ಸಂಬಂಧಿಸಿದ ಸಮಸ್ಯೆಗಳು ಮತ್ತು ಪೂರೈಕೆಗೆ ಸಂಬಂಧಿಸಿದ ಸಮಸ್ಯೆಗಳೆಂದು ವರ್ಗೀಕರಿಸಲಾಗುತ್ತದೆ. ಬೇಡಿಕೆಗೆ ಸಂಬಂಧಿಸಿದ ಸಮಸ್ಯೆಗಳಲ್ಲಿ ಆಂತರಿಕ ಬೇಡಿಕೆ ಮತ್ತು ಬಾಹ್ಯ ಬೇಡಿಕೆಯ ಸಮಸ್ಯೆಗಳು ಒಳಗೊಂಡಿವೆ. ಪೂರೈಕೆಗೆ ಸಂಬಂಧಿಸಿದ ಸಮಸ್ಯೆಗಳಲ್ಲಿ ಪ್ರಧಾನವಾದವುಗಳು:

- ಬೆಲೆಯ ಏರಿಳಿತ ಮತ್ತು ಅನಿಶ್ಚಿತತೆ
- ಅಧಿಕ ಬಂಡವಾಳದ ಅಗತ್ಯ
- ಸಾಂಸ್ಥಿಕ ಹಣಕಾಸಿನ ಮೂಲಗಳ ಕೊರತೆ
- ಸಂಘಟನಾತ್ಮಕ ಮಾರುಕಟ್ಟೆಯ ಅಭಾವ
- ರಾಷ್ಟ್ರೀಯ ಸ್ಥಾನಮಾನದ ಕೊರತೆ
- ಸಂಗ್ರಹ ಮತ್ತು ಸಾಗಾಟ ಸೌಲಭ್ಯದ ಕೊರತೆ
- ಬೆಳೆಗೆ ಸಂಬಂಧಿಸಿದ ಸಂಶೋಧನೆಗಳ ಕೊರತೆ
- ನೈಸರ್ಗಿಕ ಅಂಶಗಳು ಸೃಷ್ಟಿಸುವ ಸಮಸ್ಯೆಗಳು.

ಈ ಸಮಸ್ಯೆಗಳನ್ನು ಪ್ರಧಾನವಾಗಿರಿಸಿಕೊಂಡು ಪ್ರಸಕ್ತ ಅಧ್ಯಯನವು ಅವಿಭಜಿತ ದ.ಕ. ಜಿಲ್ಲೆಯ ಮಲ್ಲಿಗೆ ಬೆಳೆಗಾರರ ಮತ್ತು ಮಾರಾಟಗಾರರ ಸಮಸ್ಯೆಗಳನ್ನು ಕ್ಷೇತ್ರಾಧ್ಯಯನದ ಆಧಾರದಲ್ಲಿ ವಿಶ್ಲೇಷಿಸಿ ಪರಿಹಾರಗಳನ್ನು ಸೂಚಿಸುವ ಪ್ರಯತ್ನವನ್ನು ಮಾಡುತ್ತದೆ.

ಮಾನವನ ಜೀವನದಲ್ಲಿ ಹೂಗಳಿಗೆ ಬಹಳ ಪ್ರಾಶಸ್ತ್ಯವಿದೆ. ಅವು ಸೌಂದರ್ಯದ ಪ್ರತೀಕ. ಭಕ್ತಿ ಮತ್ತು ಪ್ರೀತಿ ಸೌಂದರ್ಯ ಅಭಿವ್ಯಕ್ತಿಯ ಎರಡು ಸ್ವರೂಪಗಳು. ಆದುದರಿಂದ ಪೂಜೆಯ ಸಂದರ್ಭದಲ್ಲಿ ದೇವರಿಗೆ ಹೂಗಳ ಸಮರ್ಪಣೆಯಾಗುತ್ತದೆ. 'ಪತ್ರಂ, ಪುಷ್ಪಂ, ಫಲಂ, ತೋಯಂ' ಇವು ಭಗವಂತನನ್ನು ಮೆಚ್ಚಿಸುವ ನಾಲ್ಕು ಸಾಧನಗಳು.[೧] ಭಕ್ತಿಯ ಇನ್ನೊಂದು ಮುಖವಾದ ಪ್ರೀತಿಯಲ್ಲೂ ಹೂಗಳಿಗೆ ಪ್ರಾಶಸ್ತ್ಯ. ತನ್ನ ಪ್ರಿಯತಮೆಯನ್ನು ಒಲಿಸಿಕೊಳ್ಳಲು ಪ್ರಿಯಕರನು ಹೂವನ್ನು ನೀಡುವುದು ಲಾಗಾಯ್ತಿನಿಂದ ನಡೆದು ಬಂದ ಒಂದು ಪದ್ಧತಿ. ಅತಿಥಿಗಳನ್ನು ಹೂ ಕೊಟ್ಟು ಗೌರವಿಸುವುದು ಒಂದು ಪರಿಪಾಠವಾಗಿ ಬೆಳೆದು ಬಂದಿದೆ.[೨] ಹೀಗೆ ಪುಷ್ಪಗಳು ಭಕ್ತಿ, ಪ್ರೀತಿ ಮತ್ತು ಗೌರವದ ಸಂಕೇತವಾಗಿವೆ.

ಹೂವು ಸೌಂದರ್ಯದ ಸಂಕೇತವೂ ಹೌದು. ಜನಪದ ಕಥೆಗಳಲ್ಲಿ ಬರುವ ರಾಜಕುಮಾರಿಯವರು ಏಳು ಮಲ್ಲಿಗೆ ತೂಕದವರು! ಮಲ್ಲಿಗೆ ಸ್ವಚ್ಛತೆಗೆ ಪ್ರತಿಮೆಯಾಗಿದೆ. ದಾಂಪತ್ಯ ಜೀವನದಲ್ಲೂ ಪ್ರೇಮಿಗಳನ್ನು ಜ್ವಾಜಲ್ಯಮಾನಗೊಳಿಸಿದ 'ಮೈಸೂರು ಮಲ್ಲಿಗೆ'ಯ ಕವಿತೆಗಳು ಎಂದೆಂದಿಗೂ ಪ್ರಸ್ತುತ. ಕೆ.ಯಸ್. ನರಸಿಂಹ ಸ್ವಾಮಿಗಳ ಸಮಗ್ರ ಕವಿತಾ ಸಂಪುಟ 'ಮಲ್ಲಿಗೆಯ ಮಾಲೆ' ಎಂಬ ಹೆಸರನ್ನು ಹೊತ್ತು ಹೊರಬಂದಿದೆ.[೩] ಹೆಣ್ಣುಮಕ್ಕಳಿಗೆ ಮಲ್ಲಿಕಾ, ಪುಷ್ಪ, ಗುಲಾಬಿ, ಪದ್ಮ, ಪಂಕಜ, ಜಲಜ, ನೀರಜ, ವಾರಿಜ ಇತ್ಯಾದಿ ಹೆಸರಿಡುವುದು ನಮ್ಮ ಜನಮಾನಸದಲ್ಲಿ ಹೂಗಳಿಗಿರುವ ಮಹತ್ವವನ್ನು ತಿಳಿಸುತ್ತದೆ. ದೇವಾಲಯಗಳ ಕಂಬಗಳಲ್ಲಿ, ಮಹಾದ್ವಾರಗಳಲ್ಲಿ, ಒಡವೆಗಳ ವಿನ್ಯಾಸದಲ್ಲಿ ಹೂವಿನ ಚಿತ್ರಗಳನ್ನು ಬಳಸಲಾಗಿದೆ. ಇತ್ತೀಚೆಗೆ 'ಪುಷ್ಪೋದ್ಯಮ' ಕೃಷಿ ಕ್ಷೇತ್ರದ ಒಂದು ಸಹ ಉದ್ಯಮವಾಗಿ ಆರ್ಥಿಕತೆಯಲ್ಲಿ ಮಹತ್ವವನ್ನು ಪಡೆದುಕೊಂಡಿದೆ.[೪]

ಕರ್ನಾಟಕದ ಕರಾವಳಿ ಜಿಲ್ಲೆ ಕ್ರಿ.ಪೂ. ಯುಗದಲ್ಲೇ ವಿದೇಶಿಯರನ್ನು ಆಕರ್ಷಿಸಿತ್ತು. ಪ್ರಾಚೀನ ಗ್ರೀಕರು ವ್ಯಾಪಾರ ಸಂಬಂಧಕ್ಕಾಗಿ ಈ ಜಿಲ್ಲೆಗೆ ಬರುತ್ತಿದ್ದುದು ಗೋವಿಂದ ಪೈಗಳ ಸಂಶೋಧನೆಯಿಂದ ಸ್ಪಷ್ಟವಾಗುತ್ತದೆ.[೫] ಏಳನೇ ಶತಮಾನದ ಮಧ್ಯಭಾಗದಲ್ಲಿ ಇಲ್ಲಿನ

ಆರ್ಥಿಕತೆಯು ಕೃಷಿ ಆಧಾರಿತವಾಗಿತ್ತು.[೬] ಆ ಕಾಲದಲ್ಲಿ ಈ ಪ್ರದೇಶದ ಮುಖ್ಯ ಬೆಳೆ ಭತ್ತವಾಗಿತ್ತು. ಭತ್ತದೊಂದಿಗೆ ಕಬ್ಬು, ದವಸಧಾನ್ಯಗಳು, ಕರಿಮೆಣಸು, ಏಲಕ್ಕಿ, ತೆಂಗು, ಅಡಿಕೆ, ಹಣ್ಣುಹಂಪಲು, ಪುಷ್ಪ, ತರಕಾರಿಗಳನ್ನು ಇಲ್ಲಿ ಬೆಳೆಯಲಾಗುತ್ತಿತ್ತು.[೭] ಭತ್ತ ಇಲ್ಲಿನ ಪ್ರಮುಖ ನಿರ್ಯಾತ ಸರಕಾಗಿತ್ತು. ಅರಬರು ಕರಾವಳಿ ಜಿಲ್ಲೆಯಿಂದ ಅಕ್ಕಿಯನ್ನು ಅರಬಸ್ಥಾನಕ್ಕೆ ಮತ್ತು ಯುರೋಪಿಗೆ ಒಯ್ಯುತ್ತಿದ್ದರು.[೮]

ವಿಜಯನಗರ ಸಾಮ್ರಾಜ್ಯದ ಆಡಳಿತ ಕಾಲದಲ್ಲಿ ಪೋರ್ಚುಗೀಸರು ಕರಾವಳಿ ಜಿಲ್ಲೆಯಲ್ಲಿ ಪರವಾನಿಗೆ ಪಡೆದೇ ವ್ಯಾಪಾರ ನಡೆಸುತ್ತಿದ್ದರು.[೯] ಕರಾವಳಿಯಲ್ಲಿ ವ್ಯಾಪಾರ ನಡೆಸುವ ಹಕ್ಕಿಗಾಗಿ ಬ್ರಿಟಿಷರ ಮತ್ತು ಟಿಪ್ಪು ಸುಲ್ತಾನನ ನಡುವೆ ಮೂರು ಸಂಗ್ರಾಮಗಳಾದವು.[೧೦] ಕ್ರಿ.ಶ. ೧೭೯೯ರಲ್ಲಿ ಟಿಪ್ಪು ಮಡಿದ ಮೇಲೆ ಕರಾವಳಿ ಕರ್ನಾಟಕ ಪೂರ್ತಿಯಾಗಿ ಬ್ರಿಟಿಷರ ತೆಕ್ಕೆಗೆ ಬಂತು. ಬ್ರಿಟಿಷರ ಕಂದಾಯ ನೀತಿಗೆ ವಿರುದ್ಧವಾಗಿ ಕರಾವಳಿ ಕರ್ನಾಟಕದ ಜನರು ಎರಡು ಬಾರಿ ದಂಗೆಯೆದ್ದರು.[೧೧] ಇವು ವಿಫಲವಾಗಿ ಬ್ರಿಟಿಷರ ಶೋಷಕ ಆರ್ಥಿಕ ನೀತಿಗಳು ಕರಾವಳಿ ರೈತರನ್ನು ಹಿಂಡಿ ಹಿಪ್ಪೆ ಮಾಡಿದವು.

ಕ್ರಿ.ಶ. ೧೯೪೭ರ ಬಳಿಕ ಕರಾವಳಿ ಕರ್ನಾಟಕದಲ್ಲಿ ಹೊಸ ಆರ್ಥಿಕ ಗಾಳಿ ಬೀಸಿತು. ಕೃಷಿ ವಲಯದಲ್ಲಿ ಉಂಟಾದ ಕೃಷಿ ಕ್ರಾಂತಿಯ ಬಳಿಕ ಅನೇಕ ಬದಲಾವಣೆಗಳಾದುವು. ಅಧಿಕ ಇಳುವರಿ ತಳಿಗಳಾದ IR8, ಜಯ, ಪದ್ಮ ಭತ್ತದ ತಳಿಗಳು, ಮಂಗಳ, ಮೋಹಿತ್‌ನಗರ ಮುಂತಾದ ಅಡಿಕೆ ತಳಿಗಳು, ಟಿXಡಿ ಯಂತಹ ಅಲ್ಪ ಗರ್ಭಾವಧಿಯ ತೆಂಗಿನ ತಳಿಗಳು, ಕೊಕ್ಕೋ, ರಬ್ಬರ್ ಮೊದಲಾದ ಇತರ ವಾಣಿಜ್ಯ ಬೆಳೆಗಳಿಂದಾಗಿ ಜನರ ಆರ್ಥಿಕ ಸ್ಥಿತಿಗತಿ ಬದಲಾಯಿತು.[೧೨] ಭೂ ಸುಧಾರಣೆಯ ಬಳಿಕ ಸಣ್ಣ ಹಿಡುವಳಿಗಳ ಸಂಖ್ಯೆ ಅಧಿಕವಾಯಿತು. ಉತ್ತರಾಧಿಕಾರದ ನಿಯಮವು ಅವಿಭಕ್ತ ಕುಟುಂಬ ಪದ್ಧತಿಯನ್ನು ಶಿಥಿಲಗೊಳಿಸಿತು. ಇದರಿಂದಾಗಿ ಭೂ ಹಿಡುವಳಿಯ ಗಾತ್ರ ಇನ್ನಷ್ಟು ಕಿರಿದಾಗುತ್ತಾ ಬಂತು. ಭೂ ಹಿಡುವಳಿ ಅನಾರ್ಥಿಕವಾದುದರಿಂದ ಕೃಷಿಕರು ಸಂಪಾದನೆಗೆ ಸಾಂಪ್ರದಾಯಿಕ ಕೃಷಿಯೊಂದಿಗೆ ಬಗೆ ಬಗೆಯ ಅನ್ಯ ಹಾದಿಗಳನ್ನು ಕಂಡುಕೊಳ್ಳುವುದು ಅನಿವಾರ್ಯವಾಯಿತು. ಮನೆಯಲ್ಲಿಯೇ ದಿನದ ಇಪ್ಪತ್ತನಾಲ್ಕು ಗಂಟೆಗಳನ್ನು ಕಳೆಯುವ ಮಹಿಳೆಯರು ತಮ್ಮ ಕುಟುಂಬಗಳ ಆರ್ಥಿಕ ಪರಿಸ್ಥಿತಿ ಸುಧಾರಿಸುವ ಚಿಂತನೆಗಳನ್ನು ಮಾಡಿದುದರ ಪರಿಣಾಮವಾಗಿ ಪುಷ್ಪೋದ್ಯಮ ಆರ್ಥಿಕ ವಲಯದಲ್ಲಿ ಪ್ರಾಶಸ್ತ್ಯ ಪಡೆಯಿತು. ಪುಷ್ಪೋದ್ಯಮದ ಒಂದು ಭಾಗವಾಗಿ ಮಲ್ಲಿಗೆ ಕೃಷಿಗೆ ಮಹತ್ವ ದೊರೆಯಿತು.

ಮಲ್ಲಿಗೆ ಈ ಜಿಲ್ಲೆಗೆ ಬಂದುದರ ಬಗ್ಗೆ ಒಂದು ಸ್ವಾರಸ್ಯಕರ ಐತಿಹ್ಯವಿದೆ.[೧೩] ಕ್ರಿ.ಶ. ೧೯೨೦ ಕ್ಕೆ ಮೊದಲು ಈ ಜಿಲ್ಲೆಯಲ್ಲಿ ಮಲ್ಲಿಗೆಯ ವಾಣಿಜ್ಯ ಬೆಳೆಗೆ ಪ್ರಾಧಾನ್ಯ ಲಭಿಸಿರಲಿಲ್ಲ. ಪೀಟರ್ ಮಥಾಯಿಸ್ ಎಂಬ ಉಡುಪಿ ಕಡೆಯ ಬ್ರಿಟಿಷರ ಸೇನೆಯಲ್ಲಿದ್ದ ಒಬ್ಬ ಸೈನಿಕ ಪ್ರಥಮ ವಿಶ್ವ ಸಮರ ಮುಗಿದ ಬಳಿಕ ತನ್ನ ತಾಯ್ನಾಡಿಗೆ ಬರುವ ಹಾದಿಯಲ್ಲಿ ಪೂನಾವನ್ನು ಸಂದರ್ಶಿಸಿದ. ಅಲ್ಲಿ ಆತ ಕೈಗಾರಿಕಾ ಜಗತ್ತಿನಲ್ಲಿ ಬಹಳ ಹೆಸರು ಮಾಡಿಕೊಂಡಿದ್ದ ಕೂಪರ್ ಕುಟುಂಬದ ಅತಿಥಿಯಾಗಿದ್ದ. ಅಲ್ಲಿನ ಹೂದೋಟದಲ್ಲಿನ ಮಲ್ಲಿಗೆಯ ಗಿಡಗಳನ್ನು ಕಂಡು, ಅದರ ಹೂಗಳ ಹಿಮಶ್ವೇತ ಬಣ್ಣ ಮತ್ತು ಸುಮಧುರ ಸುವಾಸನೆಯಿಂದ ಆಹ್ಲಾದಿತನಾದ. ಈ ಗಿಡಗಳು ಎಲ್ಲಿ ಸಿಗುತ್ತದೆ ಎಂದು ಆತ ಕೇಳಲು, ಕೂಪರ್ ಕುಟುಂಬ ಅವುಗಳನ್ನು ಉತ್ತರ ಕನ್ನಡ ಜಿಲ್ಲೆಯ ಭಟ್ಕಳದಿಂದ ತಂದುದಾಗಿ ಹೇಳಿತು. ಮಥಾಯಿಸ್ ಭಟ್ಕಳಕ್ಕೆ ಹೋಗಿ ಅಲ್ಲಿಂದ ಐದು ಮಲ್ಲಿಗೆ ಗಿಡಗಳನ್ನು ತಂದು ತನ್ನ ಮನೆಯಿರುವ ಸಾಲ್ಮರದ ಹೂದೋಟದಲ್ಲಿ ಬೆಳೆಸಿದ. ಸಾಲ್ಮರವು ಪ್ರಸಕ್ತ ಉಡುಪಿ ಜಿಲ್ಲೆಯ ಕಾರ್ಕಳ ತಾಲೂಕಿನ ಕಾರ್ಕಳ ಪೇಟೆಯಿಂದ ೨ಕಿ.ಮೀ. ದೂರದಲ್ಲಿದೆ. ಅಲ್ಲಿಗೆ ಬಂದಿದ್ದ ಆತನ ಬಂಧು ಶಂಕರಪುರದ[೧೪] ಬುಸ್ತು ಮೆಂಡೋನ್ಸಾ ಈ ಮಲ್ಲಿಗೆಯ ಮೋಹಕ ಸೌಂದರ್ಯ ಮತ್ತು ಸುಗಂಧಕ್ಕೆ ಮನಸೋತು ಭಟ್ಕಳಕ್ಕೆ ಹೋಗಿ ಇಪ್ಪತ್ತೈದು ಮಲ್ಲಿಗೆ ಗಿಡಗಳನ್ನು ತಂದ. ಅದು ಶಂಕರಪುರವನ್ನು ಮಲ್ಲಿಗೆಗೆ ಪರ್ಯಾಯ ನಾಮವನ್ನಾಗಿಸಿತು. ಕರಾವಳಿ ಕರ್ನಾಟಕದಲ್ಲಿ ಶಂಕರಪುರವನ್ನು ಮಲ್ಲಿಗೆಯ ತವರು ಮನೆಯೆಂದೇ ಪರಿಗಣಿಸಲಾಗುತ್ತದೆ. ಕಾಲ ಕ್ರಮೇಣ ಮಲ್ಲಿಗೆ ಕೃಷಿ ಆಸುಪಾಸಿನ ಗ್ರಾಮಗಳಲ್ಲಿ ಹರಡಿ, ಅನಂತರ ಅದು ಕರಾವಳಿ ಜಿಲ್ಲೆಯ ದಕ್ಷಿಣ ಕನ್ನಡ ಭಾಗಕ್ಕೂ ಪಸರಿಸಿತು.

ಕರಾವಳಿ ಜಿಲ್ಲೆಯ ಜನರು, ಅದರಲ್ಲೂ ಮುಖ್ಯವಾಗಿ ದಕ್ಷಿಣ ಕನ್ನಡ ಜಿಲ್ಲೆಯವರು, ಆವಿಷ್ಕಾರಿಕ ಸ್ವಭಾವದ ಸ್ಪಂದನ ಶೀಲ ಧೈರ್ಯಸ್ಥರು. ಒಂದು ಕಾಲದಲ್ಲಿ ಇಲ್ಲಿನ ಮಂಗಳೂರು ಹಂಚು ಜಗದ್ವಿಖ್ಯಾತಿ ಪಡೆದಿತ್ತು. ಅದೇ ತೆರನಾದ ಖ್ಯಾತಿ ದ.ಕ. ಜಿಲ್ಲೆಯ ಬೀಡಿ ಉದ್ಯಮಕ್ಕೂ ಲಭ್ಯವಾಗಿತ್ತು. ಈ ಜಿಲ್ಲೆಯಲ್ಲಿ ಮಹಿಳೆಯರು ಗಂಡಸರಿಗಿಂತ ಸಂಖ್ಯೆಯಲ್ಲಿ ಅಧಿಕವಿದ್ದು, ಮುನ್ನುಗ್ಗುವ ಸ್ವಭಾವದಲ್ಲಿ ಗಂಡಸರಿಗಿಂತ ಒಂದು ಕೈ ಮೇಲು ಎನ್ನುವುದಕ್ಕೆ ಸಾಂಪ್ರದಾಯಿಕ ಮೀನುಗಾರ್ತಿಯರು ಉದಾಹರಣೆಯಾಗಿದ್ದಾರೆ. ವಿಶುಕುಮಾರ್ ಅವರ ಕರಾವಳಿ ಎಂಬ ಕಾದಂಬರಿಯಲ್ಲಿ ಈ ಹೇಳಿಕೆಗೆ ಸಾಕಷ್ಟು ನಿದರ್ಶನ ದೊರೆಯುತ್ತದೆ. ಹಂಚಿನ ಉದ್ದಿಮೆ, ಮೀನುಗಾರಿಕೆ, ಗೇರು ಉದ್ದಿಮೆ ಮತ್ತು ಬೀಡಿ ಉದ್ದಿಮೆಗಳಲ್ಲಿ ತೊಡಗಿಸಿಕೊಂಡವರಲ್ಲಿ ಮಹಿಳೆಯರ ಪಾಲು ಶೇ.೭೦ಕ್ಕಿಂತಲೂ ಅಧಿಕ. ಜೀವನೋಪಾಯದ ವಿವಿಧ ಹಾದಿಗಳನ್ನು ಕೊನೆಗೂ ಅನ್ವೇಷಿಸಬೇಕಾದದ್ದು ಜನನಿಯೆಂಬ ಮೊದಲ ಗುರು. ಈ

ಮಾತಿಗೆ ಮಲ್ಲಿಗೆ ಕೃಷಿಯೂ ಹೊರತಲ್ಲ. ದ.ಕ. ಜಿಲ್ಲೆಯಲ್ಲಿ ಮಲ್ಲಿಗೆ ಕೃಷಿ ಈಗ ಇಷ್ಟೊಂದು ವ್ಯಾಪಿಸಿರುವುದರ ಹಿನ್ನಲೆಯಲ್ಲಿ ಇಲ್ಲಿನ ಶ್ರೀ ಸಾಮಾನ್ಯೆಯರ ಬೆವರ ಹನಿಗಳನ್ನು ಧಾರಾಳವಾಗಿ ಗುರುತಿಸಬಹುದು. ಹೆಚ್ಚುತ್ತಿರುವ ಜನಸಂಖ್ಯೆ, ದುಡಿಯುವ ಕೈಗಳಿಗಿಂತ ತಿನ್ನುವ ಬಾಯಿಗಳ ಸಂಖ್ಯೆಯ ಹೆಚ್ಚಳ, ವಿಘಟಿತ ಕುಟುಂಬಗಳಲ್ಲಿ ಹೆಣ್ಣು ದುಡಿಮೆಯ ಹೊಸ ಹಾದಿಗಳನ್ನು ಅನ್ವೇಷಿಸಬೇಕಾದ ಅನಿವಾರ್ಯತೆ, ಬದಲಿ ಲಾಭದಾಯಕ ವೃತ್ತಿಗಳ ಅಲಭ್ಯತೆ, ಸಣ್ಣ ಮತ್ತು ಅತಿ ಸಣ್ಣ ಹಿಡುವಳಿದಾರರನ್ನು ಮಲ್ಲಿಗೆಯ ಕೃಷಿಯತ್ತ ಆಕರ್ಷಿಸಿರುವುದರಲ್ಲಿ ಯಾವ ಆಶ್ಚರ್ಯವೂ ಇಲ್ಲವೆನ್ನುವುದು ಸ್ಫಟಿಕ ಸ್ಪಷ್ಟ.

ಆರ್ಥಿಕ ಅನಿವಾರ್ಯತೆಯಿಂದಾಗಿ ಮಲ್ಲಿಗೆ ಕೃಷಿಗೆ ಅನೌಪಚಾರಿಕವಾಗಿ ಒಂದು ಉದ್ಯಮದ ಸ್ಥಾನಮಾನ ದೊರೆಯಿತು. ಬೇಡಿಕೆಯಿರುವುದರಿಂದಾಗಿ ಪೂರೈಕೆ ಹೆಚ್ಚಾಯಿತು. ದಕ್ಷಿಣ ಕನ್ನಡ ಜಿಲ್ಲೆಯ ಪ್ರಸಿದ್ಧ ಪುಣ್ಯ ಕ್ಷೇತ್ರ ಕಟೀಲಿನಲ್ಲಿ 'ಪುಷ್ಪಪೂಜೆ' ಅತ್ಯಂತ ಜನಪ್ರಿಯವಾದುದು.[೧೫] ಕೆಲವು ಶ್ರೀಮಂತರು ಹೂವನ್ನು ತುಲಾಭಾರ ಸೇವೆಗೂ ಬಳಸುತ್ತಾರೆ.[೧೬] ಈ ರೀತಿಯಲ್ಲಿ ಹೂವಿನ ಬೇಡಿಕೆ ಹೆಚ್ಚಿರುವುದರಿಂದ ಮಲ್ಲಿಗೆ ಬೆಳೆಗಾರರ ಸಂಖ್ಯೆ ಅಧಿಕವಾಯಿತು. ಪೂರೈಕೆ ಮತ್ತು ಬೇಡಿಕೆಗಳೊಳಗೆ ಸಮತೋಲನ ತಪ್ಪಿ ಹೋಯಿತು. ಬೆಳೆಗಾರರೊಂದಿಗೆ ಮಾರಾಟಗಾರರೂ ಸಂಕಷ್ಟಕ್ಕೆ ಈಡಾದರು. ಮನೆಯಲ್ಲೇ ಇದ್ದು, ಸ್ವಾವಲಂಬಿ ಬದುಕಿಗೆ ತಕ್ಕಷ್ಟು ಆದಾಯ ಗಳಿಸಲು ಸಾಧ್ಯತೆಯಿರುವ ಮಲ್ಲಿಗೆ ಕೃಷಿ ಸಮಸ್ಯೆಗಳ ಗೂಡಾಗಿ ಹೋಯಿತು.

ಮಲ್ಲಿಗೆ ಕೃಷಿಗೆ ಸಂಬಂಧಿಸಿದ ಸಮಸ್ಯೆಗಳನ್ನು ಸ್ಥೂಲವಾಗಿ ಪೂರೈಕೆಯ ಭಾಗದ ಸಮಸ್ಯೆಗಳು ಮತ್ತು ಬೇಡಿಕೆಯ ಭಾಗದ ಸಮಸ್ಯೆಗಳು ಎಂದು ವರ್ಗೀಕರಿಸಲಾಗುತ್ತದೆ. ಪೂರೈಕೆಯ ಭಾಗದ ಸಮಸ್ಯೆಗಳು ಉತ್ಪಾದನೆ, ಸಂಗ್ರಹ, ಸಾಗಾಟ ಮತ್ತು ಮಾರಾಟಕ್ಕೆ ಸಂಬಂಧಿಸಿದವುಗಳು. ಬೇಡಿಕೆಯ ಭಾಗದ ಸಮಸ್ಯೆಗಳಲ್ಲಿ ಪ್ರಧಾನವಾದದ್ದು ಬೇಡಿಕೆಯ ಅನಿಶ್ಚಿತತೆ ಮತ್ತು ಋತುಮಾನತೆ[Seasonality]. ಮಲ್ಲಿಗೆ ಕೃಷಿಯಲ್ಲಿ ತೊಡಗಿಸಿಕೊಂಡಿರುವವರು ಬಹುತೇಕವಾಗಿ ತೀರಾ ಸಣ್ಣ ಹಿಡುವಳಿದಾರರು ಅಥವಾ ದರಖಾಸ್ತು ಭೂಮಿ ಹೊಂದಿರುವವರು. ಅವರಲ್ಲಿ ಒಗ್ಗಟ್ಟಿಲ್ಲ. ಮಲ್ಲಿಗೆ ಬೆಳೆಗಾರರನ್ನು ಒಗ್ಗೂಡಿಸುವ ಸಂಘಟನೆಗಳೂ ಇಲ್ಲ. ಮಲ್ಲಿಗೆ ಬೆಳೆಗಾರರಿಗೆ ಧನ ಸಹಾಯ ಒದಗಿಸಲು ನಬಾರ್ಡ್ ಯೋಜನೆಯೊಂದನ್ನು ರೂಪಿಸಿದೆಯಾದರೂ ಅದರ ಅರಿವು ಮಲ್ಲಿಗೆ ಬೆಳೆಗಾರರಿಗಿಲ್ಲ. ಅರಿವು ಮೂಡಿಸುವ ನಾಯಕರಾಗಲೀ, ಸರಕಾರೇತರ ಸಂಸ್ಥೆಗಳಾಗಲೀ ಮಲ್ಲಿಗೆ ಕ್ಷೇತ್ರದಲ್ಲಿ ಇಲ್ಲ. ಮಲ್ಲಿಗೆ ಕೃಷಿಯು ಅಲಕ್ಷಿತ, ರಕ್ಷಣಾರಹಿತ, ಅಸಂಘಟಿತ ವೃತ್ತಿಗಳ

ಸಾಲಿಗೆ ಸೇರಿರುವುದರಿಂದ ಸಮಸ್ಯೆಗಳ ಆಗರವಾಗಿದೆ. ಕ್ಷೇತ್ರಾಧ್ಯಯನದ ಮೂಲಕ ಈ ಸಮಸ್ಯೆಗಳ ನೈಜದರ್ಶನ ಪಡೆದು ಪರಿಹಾರಗಳನ್ನು ಕಂಡುಕೊಳ್ಳುವ ಒಂದು ವಿನಮ್ರ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ.

## ೧.೨ ಸಾಹಿತ್ಯದಲ್ಲಿ ಮಲ್ಲಿಗೆ

ಸಾಹಿತ್ಯದಲ್ಲಿ ಮಲ್ಲಿಗೆಯ ಬಳಕೆ ಬಹಳ ಹಿಂದಿನಿಂದಲೇ ಮಾಡಲಾಗಿದೆ. 'ಸುಭಾಷಿತ ಮಂಜರಿ'ಯಲ್ಲಿ[೧೭] ಮಲ್ಲಿಗೆಯ ಬಗ್ಗೆ ಈ ಉಲ್ಲೇಖವಿದೆ.

ಗುಣಾನಾ ಮಂತರಂ ಪ್ರಾಯಸ್ತಜ್ಞೊ ವೇತ್ತಿ ನ ಚಾ ಪರ:।
ಮಾಲತೀ ಮಲ್ಲಿಕಾ ಮೋದಂ ಘ್ರೌಣಂ ವೇತ್ತಿ ನ ಲೋಚನಂ॥

ಗುಣಗಳ ವ್ಯತ್ಯಾಸವನ್ನು ಗುಣಜ್ಞನು ತಿಳಿಯಬಲ್ಲನೇ ಹೊರತು ಇನ್ನೊಬ್ಬನಲ್ಲ. ಜಾಜಿ ಹೂ ಮಲ್ಲಿಗೆ ಹೂಗಳ ಸುಗಂಧ ವ್ಯತ್ಯಾಸವನ್ನು ಮೂಗು ತಿಳಿಯಬಲ್ಲುದೇ ಹೊರತು ಕಣ್ಣಲ್ಲ ಎಂದು ಸುಭಾಷಿತ ತಿಳಿಸುತ್ತದೆ. ಇಲ್ಲಿ ಗುಣವಂತರ ಗುಣಗಳನ್ನು ತಿಳಿಯಬಲ್ಲವರು ಯಾರು ಎಂಬ ಸನ್ನಿವೇಶದಲ್ಲಿ ಮಲ್ಲಿಗೆ ಹೂವಿನ ಉಲ್ಲೇಖವಿದೆ.

ಡಿ.ವಿ. ಗುಂಡಪ್ಪನವರು 'ಮಂಕುತಿಮ್ಮನ ಕಗ್ಗದಲ್ಲಿ'[೧೮]
'ಹುಲ್ಲಾಗು ಬೆಟ್ಟದಡಿ, ಮನೆಗೆ ಮಲ್ಲಿಗೆಯಾಗು,
ಕಲ್ಲಾಗು ಕಷ್ಟಗಳ ಮಳೆಯ ವಿಧಿ ಸುರಿಸೆ
ಬೆಲ್ಲ ಸಕ್ಕರೆಯಾಗು ದೀನ ದುರ್ಬಲರಿಂಗೆ
ಎಲ್ಲರೊಳಗೊಂದಾಗು ಮಂಕುತಿಮ್ಮ'

ಎಂದಿರುವುದು ಗಮನಾರ್ಹ. ಇಲ್ಲಿ ಮಲ್ಲಿಗೆಯು ಹೊಂದಾಣಿಕೆ ಗುಣಕ್ಕೆ ಮತ್ತು ಕೀರ್ತಿಯೆಂಬ ಪರಿಮಳಕ್ಕೆ ಸಂಕೇತವಾಗಿರುತ್ತದೆ.

ಕನ್ನಡ ನಾಡಿನ ಬಗ್ಗೆ ಕನ್ನಡದ ಮನಸ್ಸು ಒಂದು ಸಾವಿರ ವರ್ಷಗಳ ಹಿಂದೆ ಹೇಗೆ ಹೆಮ್ಮೆಪಟ್ಟಿದೆ ಎನ್ನುವ ಬಗ್ಗೆ ಕೆಲವು ಪ್ರಾಚೀನ ಕಾವ್ಯದ ತುಣುಕುಗಳು ಬೆಳಕು ಚೆಲ್ಲುತ್ತವೆ. ಅಂತಹ ಕಾವ್ಯಗಳಲ್ಲಿ ಮಲ್ಲಿಗೆ ಪುಷ್ಪವನ್ನು ಬಳಸಿ ವರ್ಣಿಸಿದ ಸನ್ನಿವೇಶಗಳು ಹಲವು ಇವೆ. ಇವುಗಳಿಗೆ ಸಾಕ್ಷಿಯೆಂಬಂತೆ ಪಂಪನ ವಿಕ್ರಮಾರ್ಜುನ ವಿಜಯದಲ್ಲಿನ ನಾಲ್ಕು ಸಾಲುಗಳನ್ನು ಇಲ್ಲಿ ಉಲ್ಲೇಖಿಸಲಾಗಿದೆ.[೧೯]

ತೆಂಕಣಗಾಳಿ ಸೋಂಕಿದೊಡಮೊಳ್ನುಡಿಗೇಳ್ದೊಡಬುಂಪನಾಳ್ದ ಗೇ
ಯಂ ಕಿವಿವೊಕ್ಕಡಂ ಬಿರಿದ ಮಲ್ಲಿಗೆಗಂಡೊಡಮಾದ ಕೆಂದಲಂ
ಪಂಗೆಡೆಗೊಂಡೊಡಂ ಮಧುಮಹೋತ್ಸವಮಾದೊಡಮೇನನೆಂಬೆನಾ
ರಂಕುಸಮಿಟ್ಟೊಡಂ ನೆನೆವುದೆನ್ನ ಮನಂ ಬನವಾಸಿ ದೇಶಮಂ

ಆಂಡಯ್ಯನ 'ಕಬ್ಬಿಗರ ಕಾವ' ದಲ್ಲಿ ಮಲ್ಲಿಗೆಯ ಮಹತ್ವದ ವರ್ಣನೆಯಿದೆ

ಮಲ್ಲಿಗೆಯಲ್ಲದೆ ಸಂಪಗೆ
ಯಲ್ಲದೆ ದಾಳಿಂಬಮಲ್ಲದೊಪ್ಪುವ ಚೆಂದೆಂ
ಗಲ್ಲದೆ ಮಾವಲ್ಲದೆ ಕೌಂ
ಗಲ್ಲದೆ ಗಿಡಮರಗಳೆಂಬುವಿಲ್ಲಾ ನಾಡೊಳ್

ಕೆ.ಎಸ್. ನರಸಿಂಹ ಸ್ವಾಮಿಯವರ 'ಮೈಸೂರು ಮಲ್ಲಿಗೆ' ದಾಂಪತ್ಯ ಪ್ರೇಮ ಗೀತೆಗಳಿಂದ ಕೂಡಿದೆ. ಸಂಸಾರವನ್ನೇ ಅವರು ಮಲ್ಲಿಗೆಯ ಮಾಲೆಯಾಗಿ ಪರಿಭಾವಿಸಿ ಕೊಂಡಿದ್ದಾರೆ. ಅದರಲ್ಲಿ ಬರುವ ಬಳೆಗಾರ ಚೆನ್ನಯ್ಯನ ಹಾಡಿನಲ್ಲಿ ಗರ್ಭಿಣಿಯಾದ ಮಡದಿಯ ಬಗ್ಗೆ 'ಮುಡಿದ ಮಲ್ಲಿಗೆ ಹರಳು ಬಾಡಿಲ್ಲ ರಾಯರೆ ಅಮ್ಮನಿಗೆ ಬಳೆಯ ತೊಡಿಸಿದರು' ಎಂಬ ಉಲ್ಲೇಖ ಬರುತ್ತದೆ. ಕುಪಿತ ಪತಿಯ ಕೋಪ ಶಮನಕ್ಕೆ ಬಳಸುವ ಈ ಸಾಲುಗಳು ತುಂಬಾ ಮನೋಜ್ಞವಾಗಿವೆ.

ತಿಪ್ಪೇರುದ್ರಸ್ವಾಮಿ 'ಜನಪದ ಸಾಹಿತ್ಯ' ದಲ್ಲಿ ಅಲ್ಲಲ್ಲಿ ಮಲ್ಲಿಗೆ ಮತ್ತಿತರ ಹೂವಿನ ಬಗ್ಗೆ ಉಲ್ಲೇಖ ಮಾಡುತ್ತಾರೆ.[೧೯]

ಬಾಗಿಲು ಮಲ್ಲಿಗೆ ಬಾಡಿ ಹೋದ್ಯಲ್ಲೆ

ನೋಡಿ ಕೊಯ್ವಂತ ಮಗಳಿಲ್ಲ। ಆ ಬಾಲಿ

ಹನ್ನೊಂದಕ್ಕೆ ಬಿಟ್ಟು ಅಗಲ್ಯಾಳ।

ಮನೆಯ ಮುಂದೆ ಹಬ್ಬಿರುವ ಬಳ್ಳಿಯಲ್ಲಿ ಅರಳಿರುವ ಮಲ್ಲಿಗೆಯನ್ನು ಕಂಡು, ಹನ್ನೊಂದರ ಹರೆಯದಲ್ಲೇ ಮದುವೆ ಮಾಡಿ ಕೊಟ್ಟ ತನ್ನ ಮಗಳನ್ನು ನೆನೆದು ತಾಯಿ ಆಡಿಕೊಳ್ಳುವ ಮಾತಿದು. ಇನ್ನೊಂದೆಡೆ ಕೆಳಗಿನ ಸಾಲುಗಳು ತನ್ನ ಮಗಳ ಅಗಲಿಕೆಯ ವಿಷಾದವನ್ನು ಸೂಚಿಸುತ್ತವೆ.

ಕಮಲದ ಹೂ ನಿನ್ನ ಕಾಣದೆ ಇರಲಾರೆ
ಮಲ್ಲಿಗೆ ಮಾಯಾ ಬಿಡಲಾರೆ । ಕೇದಿಗೆ
ಗರಿ ನಿನ್ನನಗಲಿ ಇರಲಾರೆ॥

ಚಲನ ಚಿತ್ರವೊಂದರಲ್ಲಿ[೨೦] ಬಳಕೆಯಾದ ಈ ಜಾನಪದ ಗೀತೆ ಒಗಟಿನಂತೆ ವಿಸ್ತರಿಸಿಕೊಳ್ಳುತ್ತದೆ.

ಮಾತಾಡ್ ಮಾತಾಡು ಮಲ್ಲಿಗೆ ।
ಸಂಪಿಗೆ ಶಾವಂತಿಗೆ, ಗುಂಪಿನಲ್ಲಿ ಕೇದಗೆ ॥
ಒಬ್ಬನಾ ಕಟ್ಟಿದ್ದೆ ಒಬ್ಬನಾ ಬಿಟ್ಟಿದ್ದೆ ।
ಒಬ್ಬನಾ ಕರಕೊಂಡು ಒಳಹೋದೆ ಮಲ್ಲಿಗೆ..................॥

ಹೀಗೆ ಮುಂದುವರಿಯುವ ಹಾಡಿನಲ್ಲಿ ಬರುವ 'ಮಲ್ಲಿಗೆ' ಹೆಣ್ಣೊಬ್ಬಳನ್ನು ಉಲ್ಲೇಖಿಸಿ ಮಾಡಿದ ಸಂಬೋಧನೆ. ಈ ಪ್ರಶ್ನೋತ್ತರ ರೂಪದಲ್ಲಿ ವಿಸ್ತರಿಸುವ ಹಾಡಿನ ವಿಧಾನ ಕಚಗುಳಿಯಿಡುವಂತಿದೆ. ಹೊಟ್ಟೆಗೆ ಹಿಟ್ಟಿಲ್ಲದಿದ್ದರೂ ಜುಟ್ಟಿಗೆ ಮಲ್ಲಿಗೆ ಎಂಬ ಮಾತು ಕನ್ನಡ ಸಾಹಿತ್ಯದಲ್ಲಿ ಬಹಳ ಜನಪ್ರಿಯ.

ಹೀಗೆ ಎಲ್ಲಾ ವಿಧದ ಸಾಹಿತ್ಯ ಪ್ರಕಾರಗಳಲ್ಲೂ ಮಲ್ಲಿಗೆಗೆ ಸ್ಥಾನ ದಕ್ಕಿರುವುದು ಅದರ ಮಹತ್ವಕ್ಕೆ ದೃಷ್ಟಾಂತವಾಗಿರುತ್ತದೆ.

## ೧.೩ ಅಧ್ಯಯನಗಳ ಸಮೀಕ್ಷೆ

ಪುಷ್ಪೋದ್ಯಮದ ಬಗ್ಗೆ ಕೆಲವು ಅಧ್ಯಯನಗಳಾದರೂ ಕರಾವಳಿ ಜಿಲ್ಲೆಗಳ ಪುಷ್ಪೋದ್ಯಮದ ಬಗ್ಗೆ ಮತ್ತು ಮಲ್ಲಿಗೆ ಕೃಷಿಯ ಬಗ್ಗೆ ನಡೆದ ಅಧ್ಯಯನಗಳು ತೀರಾ ಕಡಿಮೆ. ವರದರಾಜನ್ ಮತ್ತು ರವೀಂದ್ರನ್[೨೧] ತಮಿಳುನಾಡಿನ ಕೊಯಂಬುತ್ತೂರು ನಗರದ ಹೂ ಮಾರುಕಟ್ಟೆಯ ಅಧ್ಯಯನ ನಡೆಸಿದ್ದಾರೆ. ಈ ಅಧ್ಯಯನವು ಬಹುತೇಕ ಮಾರಾಟ ವೆಚ್ಚಕ್ಕೆ ಸಂಬಂಧಿಸಿರುತ್ತದೆ. ಕೊಯಂಬುತ್ತೂರಿನಲ್ಲಿ ಪುಷ್ಪ ಮಾರುಕಟ್ಟೆಯಲ್ಲಿ ಪುಷ್ಪಗಳ ಬೇಡಿಕೆ ಮತ್ತು ಪೂರೈಕೆಗಳು ಬೆಲೆ ನಿರ್ಣಯದಲ್ಲಿ ವಹಿಸುವ ಪಾತ್ರವನ್ನು ಅದು ಒಂದು ನಿರ್ದಿಷ್ಟ ಮಾರುಕಟ್ಟೆಗೆ ಅನ್ವಯವಾಗುವಂತೆ ವಿಶ್ಲೇಷಿಸುತ್ತದೆ.

ಸೂರ್ಯವಂಶಿ ಮತ್ತು ಕಹಗೆ[೨೨] ಪಶ್ಚಿಮ ಮಹಾರಾಷ್ಟ್ರದ ಪುಣೆ ಜಿಲ್ಲೆಯ ಗುಲಾಬಿ ಪುಷ್ಪದ ಉತ್ಪಾದನೆ ಮತ್ತು ಮಾರುಕಟ್ಟೆಯ ಬಗ್ಗೆ ಮಾಡಿದ ಅಧ್ಯಯನದಲ್ಲಿ ಉತ್ಪಾದನೆಗೆ ಸಂಬಂಧಿಸಿದ ಸ್ಥಿರ ಮತ್ತು ಚರ ವೆಚ್ಚಗಳ ಸಂಬಂಧವನ್ನು ವಿಶ್ಲೇಷಣೆ ಮಾಡಲಾಗಿದೆ. ಪುಷ್ಪೋದ್ಯಮವನ್ನು ಪೂರೈಕೆ ಭಾಗದಿಂದ ಅಧ್ಯಯನ ಮಾಡುವವರಿಗೆ ಇದು ನೆರವು ನೀಡುತ್ತದೆ. ಅವರು ಕ್ವಚಿತ್ತಾಗಿ ಮಾರುಕಟ್ಟೆಯ ಸಮಸ್ಯೆಗಳನ್ನು ವಿಶ್ಲೇಷಿಸಿರುತ್ತಾರೆ. ಆದರೆ ಅದು ವ್ಯಾಪಕವಲ್ಲದ ಕಾರಣ ಅದಕ್ಕೆ ಸಾರ್ವತ್ರಿಕತೆಯ ಸಮಸ್ಯೆ ಇದೆ.

ಪಾಟೀಲ್ ಮತ್ತು ಹಿರೇಮಠ್[೨೩] ಕರ್ನಾಟಕದ ಧಾರವಾಡ ಜಿಲ್ಲೆಯ ಸೇವಂತಿಗೆ ಹೂವಿನ ಉತ್ಪಾದನಾ ವೆಚ್ಚವನ್ನು ಮತ್ತು ಉತ್ಪನ್ನ ಮಾರುಕಟ್ಟೆಯಲ್ಲಿ ಕಮಿಷನ್ ಏಜಂಟರ ಪ್ರಾಬಲ್ಯವನ್ನು ವಿಶ್ಲೇಷಿಸಿರುತ್ತಾರೆ. ಇದು ಕೂಡಾ ಪೂರೈಕೆ ಭಾಗದ ಅಧ್ಯಯನವಾಗಿದ್ದು, ಇದರಲ್ಲೂ ಸಾರ್ವತ್ರಿಕತೆಯ ಕೊರತೆಯಿದೆ.

ಸುಬ್ರಹ್ಮಣ್ಯಂ[೨೪] ಇವರ ಅಧ್ಯಯನವು ಕರ್ನಾಟಕದಲ್ಲಿ ಸೇವಂತಿಗೆ ಹೂಗಳ ಉತ್ಪಾದನೆ ಮತ್ತು ಮಾರಾಟದ ವಿವಿಧ ಆಯಾಮಗಳನ್ನು ಪ್ರಸ್ತುತ ಪಡಿಸುತ್ತದೆ. ಅವರ ಅಧ್ಯಯನದ ಪ್ರಕಾರ ಉತ್ಪಾದನಾ ವೆಚ್ಚ ಎಲ್ಲಾ ಕಡೆ ಒಂದೇ ರೀತಿಯಾಗಿರುವುದಿಲ್ಲ. ಅದಕ್ಕೆ ಕೂಲಿಯ ವ್ಯತ್ಯಾಸ ಮತ್ತು ಮಣ್ಣಿನ ಫಲವತ್ತತೆ ಬಹು ಮುಖ್ಯ ಕಾರಣಗಳಾಗಿರುತ್ತವೆ. ಹೂವಿನ ಮಾರಾಟದ ಸಮಸ್ಯೆಯ ಬಗ್ಗೆಯೂ ಅವರು ಅಧ್ಯಯನ ಮಾಡಿರುತ್ತಾರೆ. ಇದು ಪೂರೈಕೆಗೆ ಹೆಚ್ಚಿನ ಮಹತ್ವ ನೀಡಿದರೂ ಮಾರಾಟಕ್ಕೂ ಮಹತ್ವ ನೀಡುವುದರಿಂದ ಹೆಚ್ಚಿನ ಅಧ್ಯಯನಶೀಲರಿಗೆ ನೆರವಾಗುತ್ತದೆ.

ಇದೇ ಲೇಖಕರ ಇನ್ನೊಂದು ಅಧ್ಯಯನದಲ್ಲಿ[೨೫] ಮಲ್ಲಿಗೆ, ಗುಲಾಬಿ, ಸೇವಂತಿಗೆ ಮತ್ತು ಚೆಂಡು ಹೂಗಳ ಮಾರಾಟ ಸಮಸ್ಯೆಗಳನ್ನು ವಿಶ್ಲೇಷಿಸಲಾಗಿದೆ. ಹೂಗಳು ಉತ್ಪಾದಕರಿಂದ ಕಮಿಷನ್ ಏಜೆಂಟರ ಮೂಲಕ ಚಿಲ್ಲರೆ ವ್ಯಾಪಾರಿಗೆ ತಲುಪುತ್ತದೆ. ಕೆಲವು ಹೂಗಳನ್ನು ಕಟಾವಿನ ಪೂರ್ವದಲ್ಲೇಯೇ ಗುತ್ತಿಗೆದಾರರಿಗೆ ನೀಡಲಾಗುತ್ತದೆ. ಗುತ್ತಿಗೆದಾರರು ಮತ್ತು ಕಮಿಷನ್ ಏಜೆಂಟುಗಳು ಮಾರುಕಟ್ಟೆಯಲ್ಲಿ ಉಂಟು ಮಾಡುವ ಸಮಸ್ಯೆಗಳ ಬಗ್ಗೆ ಈ ಅಧ್ಯಯನವು ಹೆಚ್ಚಿನ ಬೆಳಕನ್ನು ಚೆಲ್ಲುತ್ತದೆ. ಇದು ಮುಖ್ಯವಾಗಿ ಚೆಂಡು ಹೂವಿಗೆ ಮತ್ತು ಸೇವಂತಿಗೆಗೆ ಸಂಬಂಧಿಸಿದ ಅಧ್ಯಯನವಾಗಿರುತ್ತದೆ.

ಕೋಲಾರ ಜಿಲ್ಲೆಯಲ್ಲಿ ಕಾಕಡ ಹೂ ಉದ್ಯಮದಲ್ಲಿನ ಅಗತ್ಯ ಹೂಡಿಕೆಯ ಬಗ್ಗೆ ಸುಬ್ರಹ್ಮಣ್ಯಂ ಅವರ ಇನ್ನೊಂದು ಅಧ್ಯಯನ ಬೆಳಕು ಚೆಲ್ಲುತ್ತದೆ.[೨೬] ಅವರ ಅಧ್ಯಯನದ ಪ್ರಕಾರ ಕಾಕಡ ಹೂವಿನ ಉತ್ಪಾದನಾ ವೆಚ್ಚದಲ್ಲಿ ಗಿಡಗಳ ನಾಟಿ ಮಾಡುವ, ರಸಗೊಬ್ಬರ ನೀಡುವ, ನೀರುಣಿಸುವ, ಹೂಕೀಳುವ, ಸಂಸ್ಕರಿಸುವ ವೆಚ್ಚದಲ್ಲಿ ಶೇ.೮೫ ವೆಚ್ಚವು ಹೂ ಕೀಳುವ ಮತ್ತು ಸಂಸ್ಕರಿಸುವ ಶ್ರಮ ವೆಚ್ಚವಾಗಿರುತ್ತದೆ. ಉತ್ಪಾದನಾ ವೆಚ್ಚಕ್ಕೆ ಈ ಅಧ್ಯಯನ ಬಹಳ ಮಹತ್ವವನ್ನು ನೀಡಿದೆ.

ವೇಣುಗೋಪಾಲ ಮುಳ್ಳೇರಿಯ[೨೭] ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಮಲ್ಲಿಗೆ ಕೃಷಿಯ ಬಗ್ಗೆ ಮಾಡಿದ ಅಧ್ಯಯನದಲ್ಲಿ ಉತ್ಪಾದನೆ, ಸಂಸ್ಕರಣೆ, ಮಾರಾಟ, ಬೆಲೆ ನಿರ್ಧಾರ, ಬೆಳೆಗಾರರ ಆದಾಯ, ವೆಚ್ಚ ಮತ್ತು ಸಾಮಾಜಿಕ ಸ್ಥಿತಿಗತಿಗಳ ವಿವರ ದೊರೆಯುತ್ತದೆ. ಇದು ಜಾಗತೀಕರಣ ಪೂರ್ವದ ಅಧ್ಯಯನವಾಗಿದ್ದು, ಕಾಲಬದ್ಧತೆಯ ಮಿತಿಗೊಳಪಟ್ಟಿದೆ. ಪ್ರಸಕ್ತ ಅಧ್ಯಯನಕ್ಕೆ ಇದು ಮೂಲ ಪ್ರೇರಣೆ ಒದಗಿಸುತ್ತದೆ.

ರಮೇಶ್ ಕುಮಾರ್[೨೮] ತಮಿಳುನಾಡಿನ ಮಧುರೈ ಜಿಲ್ಲೆಯ ಮಲ್ಲಿಗೆ ಕೃಷಿಯ ಬಗ್ಗೆ ಅಧ್ಯಯನ ನಡೆಸಿದ್ದಾರೆ. ಅವರ ಅಧ್ಯಯನವು ಮಲ್ಲಿಗೆಯ ಉತ್ಪಾದನೆ ಮತ್ತು ಹೂಡಿಕೆಗೆ ಸಂಬಂಧಿಸಿದೆ. ಮಲ್ಲಿಗೆ ಕೃಷಿಯ ಒಟ್ಟು ಉತ್ಪಾದನಾ ವೆಚ್ಚದಲ್ಲಿ ಆರಂಭದ ವರ್ಷದಲ್ಲಿ ಶೇ.೩೧ ರಷ್ಟು ವೆಚ್ಚವು ಗಿಡಗಳ ನಾಟಿಗೆ ತಗಲುತ್ತದೆನ್ನುವ ಅವರ ಸಂಶೋಧನಾ ಫಲಿತವು ಉತ್ಪಾದನಾ ವೆಚ್ಚಕ್ಕೆ ಒಂದು ಸಮರ್ಪಕ ನಿಕಷವನ್ನು ಒದಗಿಸುತ್ತದೆ. ಅವರ ಅಧ್ಯಯನವು ದೇಶದ ಇತರ ಭಾಗಗಳ ಪುಷ್ಪ ಉತ್ಪಾದನಾ ವೆಚ್ಚದ ತುಲನಾತ್ಮಕ ವಿಶ್ಲೇಷಣೆಗೆ ನೆರವಾಗುತ್ತದೆ.

ನೀರಜ ದೇವಿಯವರ[೨೯] ಅಧ್ಯಯನವು ಕರ್ನಾಟಕ ರಾಜ್ಯದ ಬೆಂಗಳೂರು ಜಿಲ್ಲೆಯ ಕಾಕಡ ಹೂ ಉತ್ಪಾದನೆ ಮತ್ತು ಮಾರಾಟಕ್ಕೆ ಸಂಬಂಧಿಸಿದೆ. ಅವರ ಅಧ್ಯಯನದ ಪ್ರಕಾರ ಒಟ್ಟು ಉತ್ಪಾದನಾ ವೆಚ್ಚದಲ್ಲಿ ಶ್ರಮ ಮತ್ತು ಶ್ರಮೇತರ ವೆಚ್ಚಗಳ ನಡುವಿನ ಅನುಪಾತ ೫೧:೪೯ ಆಗಿರುತ್ತದೆ. ಇದನ್ನು ಗಮನಿಸಿದರೆ ಪುಷ್ಪೋದ್ಯಮದಲ್ಲಿ ಶ್ರಮಬಾಹುಳ್ಯ ತಂತ್ರಜ್ಞಾನದ ಮಹತ್ವ ಎಷ್ಟು ಎನ್ನುವುದು ಸ್ಪಷ್ಟವಾಗುತ್ತದೆ. ಈ ರಂಗವು ದುಡಿಯುವ ಕೈಗಳಿಗೆ ಉದ್ಯೋಗ ನೀಡುವುದರಿಂದ ನಿರುದ್ಯೋಗ ನಿವಾರಣೆಯಲ್ಲಿ ಇದಕ್ಕೆ ಮಹತ್ತರ ಪಾತ್ರವಿದೆ.

ಜಿಯಾವುಲ್ಲಾರ[೩೦] ಅಧ್ಯಯನದ ಪ್ರಕಾರ ಕೋಲಾರ ಜಿಲ್ಲೆಯಲ್ಲಿ ಸೇವಂತಿಗೆ ಹೂವಿನ ಉತ್ಪಾದನಾ ವೆಚ್ಚ ಎಕರೆಯೊಂದಕ್ಕೆ ರೂ.೧೦,೩೪೫ ಆಗಿರುತ್ತದೆ. ಸೇವಂತಿಗೆ ಹೂವಿನ ಮಾರಾಟ ವ್ಯವಸ್ಥೆಯಲ್ಲಿ ಅವರು ಎರಡು ಜಾಲಗಳನ್ನು ಗುರುತಿಸಿದ್ದು, ಉತ್ಪಾದಕರು ಕಮಿಷನ್ ಏಜಂಟರ ಮೂಲಕ ಮಾರಾಟ ಮಾಡಿದರೆ ಸಿಗುವ ಪ್ರತಿಫಲ ಕಡಿಮೆ; ಚಿಲ್ಲರೆ ಮಾರಾಟಗಾರರಿಗೆ ನೇರವಾಗಿ ಮಾರಾಟ ಮಾಡಿದರೆ ಸಿಗುವ ಪ್ರತಿಫಲ ಹೆಚ್ಚು ಎಂಬುದನ್ನು ಅವರು ಅಧ್ಯಯನದ ಮೂಲಕ ಕಂಡುಕೊಂಡಿದ್ದಾರೆ. ಉತ್ಪಾದಕ ಮತ್ತು ಅನುಭೋಗಿಗಳ ನಡುವೆ ನೇರ ಸಂಬಂಧವಿರಬೇಕೆಂಬುದನ್ನು ಇದು ಸೂಚಿಸುತ್ತದೆ.

ರಾಧಾಕೃಷ್ಣ ರಾವ್[೩೧] ಅವರ ಅಧ್ಯಯನವು ಭಾರತದ ಒಟ್ಟು ಪುಷ್ಪೋದ್ಯಮಕ್ಕೆ ಸಂಬಂಧಿಸಿದೆ. ಅದರ ವ್ಯಾಪ್ತಿ, ಹೂಡಿಕೆ, ತಂತ್ರಜ್ಞಾನಗಳ ಬಗ್ಗೆ ಅವರು ವಿವರಣೆ ನೀಡಿರುತ್ತಾರೆ. ಪುಷ್ಪೋದ್ಯಮ ಎದುರಿಸುತ್ತಿರುವ ತೊಡಕುಗಳು ಮತ್ತು ಅವುಗಳಿಗೆ ಪರಿಹಾರಗಳನ್ನು ಸೂಚಿಸಿರುತ್ತಾರೆ. ಇದೊಂದು ಸಮಗ್ರ ನೆಲೆಯ ಅಧ್ಯಯನವಾಗಿದ್ದು, ಪ್ರಕೃತ ಅಧ್ಯಯನಕ್ಕೆ ದಾರಿ ದೀಪವಾಗಿರುತ್ತದೆ.

ಪ್ರಕಾಶ್ ಮತ್ತು ಭಂಡಾರಿ[೩೨] ಪುಷ್ಪೋದ್ಯಮದ ತಂತ್ರಜ್ಞಾನ, ಅಂತಾರಾಷ್ಟ್ರೀಯ ಅವಕಾಶಗಳು ಮತ್ತು ಮುಂದಿನ ಪ್ರವೃತ್ತಿಗಳ ಬಗ್ಗೆ ವಿಶ್ಲೇಷಣೆ ನಡೆಸಿದ್ದಾರೆ. ಭಾರತದ ಪುಷ್ಪೋದ್ಯಮವನ್ನು ಇತರ ರಾಷ್ಟ್ರಗಳೊಂದಿಗೆ ಹೋಲಿಸಿ ದೇಶದ ಪುಷ್ಪೋದ್ಯಮದ ಸಾಧ್ಯತೆಗಳನ್ನು ಉಲ್ಲೇಖಿಸಿರುತ್ತಾರೆ. ಇದು ಪುಷ್ಪೋದ್ಯಮದ ಭವಿಷ್ಯದ ದೃಷ್ಟಿಯಿಂದ ಬಹಳ ಮಹತ್ವವನ್ನು ಪಡೆದುಕೊಳ್ಳುತ್ತದೆ.

ವಿಕಾಸ್ ಸಿಂಘಾಲ್‌ರವರು[೩೩] ಪುಷ್ಪೋದ್ಯಮದ ಮೇಲೆ ಸರಕಾರದ ನೀತಿಗಳ ಪ್ರಭಾವವನ್ನು ಕೃತಿಯಲ್ಲಿ ವಿಶ್ಲೇಷಿಸಿದ್ದಾರೆ. ಇವರ ವಿವರಣೆಯು ಪುಷ್ಪೋದ್ಯಮದಲ್ಲಿ ವಿದೇಶಿ ಸಹಯೋಗದ ಸಾಧಕ ಬಾಧಕಗಳನ್ನು ವಿಶ್ಲೇಷಿಸುತ್ತದೆ. ಜಾಗತೀಕರಣದ ಇಂದಿನ ಸಂದರ್ಭದಲ್ಲಿ ಎಲ್ಲಾ ರಂಗಗಳಲ್ಲಿ ವಿದೇಶಿ ಸಹಯೋಗಕ್ಕೆ ಆಸ್ಪದವಿರುವಾಗ ಪುಷ್ಪೋದ್ಯಮದಲ್ಲಿ ಈ ಸಾಧ್ಯತೆಗಳನ್ನು ಹೇಗೆ ಬಳಸಿಕೊಳ್ಳಬಹುದು ಎಂಬುದರ ಬಗ್ಗೆ ಒಳನೋಟವಿದೆ.

ಕೌಲ್ ಮತ್ತು ಡಡ್ಲಾನಿ[೩೪] ಭಾರತದ ತೋಟಗಾರಿಕೆ ಇಲಾಖೆಗಾಗಿ ಸಂಪಾದಿಸಿದ ಕೃತಿಯಲ್ಲಿ ಭಾರತದ ಪುಷ್ಪೋದ್ಯಮದ ಭವಿಷ್ಯದ ಬಗ್ಗೆ ಆಶಾವಾದ ವ್ಯಕ್ತವಾಗಿದೆ. ಹತ್ತೊಂಬತ್ತು ಸಂಶೋಧನಾ ಲೇಖನಗಳನ್ನು ಒಳಗೊಂಡ ಈ ಕೃತಿಯು ದೇಶದ ವಿಭಿನ್ನ ಪುಷ್ಪ ಬೆಳೆ ಮತ್ತು ಉತ್ಪನ್ನಗಳ ನಿರ್ವಹಣೆ ಹಾಗೂ ಮಾರಾಟ ವಿಧಾನಗಳನ್ನು ತಿಳಿಯಪಡಿಸುತ್ತದೆ. ಇದು ಪುಷ್ಪೋದ್ಯಮದಲ್ಲಿ ತೊಡಗಿಸಿ ಕೊಂಡವರಿಗೆ ಒಂದು ಮಾರ್ಗದರ್ಶಿ ಕೈಪಿಡಿಯಂತಿದೆ.

ಮಂಜುಳಾ ಮತ್ತು ಬೆಲ್ಲಿ[೩೫] ಕರ್ನಾಟಕದ ಒಣ ಭೂಮಿಯಲ್ಲಿ ಬೆಳೆಯಬಹುದಾದ ಪುಷ್ಪಗಳ ಅಧ್ಯಯನ ನಡೆಸಿ ಅದನ್ನು ಹೇಗೆ ಲಾಭದಾಯಕ ಉದ್ಯಮವಾಗಿ ಪರಿವರ್ತಿಸಬಹುದು ಎಂಬುದನ್ನು ಕಂಡುಕೊಂಡಿದ್ದಾರೆ. ಇವರ ಅಧ್ಯಯನವು ಒಣ ಭೂಮಿಯಲ್ಲಿ ಬೆಳೆಸಬಹುದಾದ ಕನಕಾಂಬರದ ಹೂವಿನ ಬಗ್ಗೆ ವಿವರಣೆ ನೀಡುತ್ತದೆ. ಒಣ ಭೂಮಿ ವ್ಯವಸಾಯಕ್ಕೆ ಹೆಚ್ಚಿನ ಪ್ರಾಮುಖ್ಯತೆ ದೊರೆತಿರುವ ಇಂದಿನ ದಿನಗಳಲ್ಲಿ ಇಂತಹ ಅಧ್ಯಯನಕ್ಕೆ ವಿಶೇಷ ಪ್ರಾಶಸ್ತ್ಯ ದೊರೆಯುತ್ತದೆ.

ಎಸ್. ಎಸ್. ಗುಳೇದಗುಡ್ಡ[೩೬] ಧಾರವಾಡ ಜಿಲ್ಲೆಯ ಮಲ್ಲಿಗೆ ಕೃಷಿಯ ಬಗ್ಗೆ ಮಾಡಿರುವ ಅಧ್ಯಯನವು ಈ ಬೆಳೆಯ ಪ್ರಾದೇಶಿಕ ಭಿನ್ನತೆಯನ್ನು ಅರಿತುಕೊಳ್ಳಲು ಸಹಾಯಕವಾಗಿದೆ. ಅವರು ಮಲ್ಲಿಗೆ ಕೃಷಿಗೆ ತಗಲುವ ವೆಚ್ಚ ಮತ್ತು ಬರುವ ಆದಾಯದ ಅಧ್ಯಯನ ನಡೆಸಿ ಪುಷ್ಪೋದ್ಯಮವು ಒಂದು ಲಾಭದಾಯಕ ವೃತ್ತಿ ಎನ್ನುವುದನ್ನು ತೋರಿಸಿ ಕೊಟ್ಟಿರುತ್ತಾರೆ. ಇದೇ ರೀತಿಯ ಅಧ್ಯಯನವನ್ನು ರಮೇಶ್[೩೭] ಅವರು ಕನಕಾಂಬರ ಹೂವಿನ ಬಗ್ಗೆ ಚಿತ್ರದುರ್ಗ ಜಿಲ್ಲೆಗೆ ಸಂಬಂಧಿಸಿದಂತೆ ಮಾಡಿದ್ದಾರೆ.

ಶಿವರಾಮನ್[೩೮]ರ ಅಧ್ಯಯನವು ತೀರಾ ವಿಭಿನ್ನವಾಗಿದ್ದು, ಅವರ ಛಾವಣಿಯಿರುವ ಪ್ರದೇಶದಲ್ಲಿನ ಗುಲಾಬಿ ಹೂಗಳ ಬೆಳೆ ಮತ್ತು ತೆರೆದ ಪ್ರದೇಶದಲ್ಲಿನ ಗುಲಾಬಿ ಹೂಗಳ ಬೆಳೆಗಳ ತುಲನಾತ್ಮಕ ಅಧ್ಯಯನದಲ್ಲಿ ಬೆಂಗಳೂರು ಜಿಲ್ಲೆಯ ಛಾವಣಿ ಪ್ರದೇಶದ ಪುಷ್ಪೋದ್ಯಮವು ಧರ್ಮಪುರಿ ಜಿಲ್ಲೆಯ ಛಾವಣಿ ರಹಿತ ಪುಷ್ಪೋದ್ಯಮಕ್ಕಿಂತ ಹೆಚ್ಚು ವೆಚ್ಚದಾಯಕ ಎನ್ನುವುದನ್ನು ತೋರಿಸಿ ಕೊಡುತ್ತಿದೆ.

ಅಜಾನ್ ಮತ್ತು ರವೀಂದ್ರನ್[೩೯] ಬಿಡಿ ಪುಷ್ಪಗಳ ಉತ್ಪನ್ನ ಮತ್ತು ಮಾರುಕಟ್ಟೆಯ ಬಗ್ಗೆ ತಮಿಳುನಾಡಿನ ನೀಲಗಿರಿ ಜಿಲ್ಲೆಯಲ್ಲಿ ನಡೆಸಿದ ಅಧ್ಯಯನದಲ್ಲಿ ಬಿಡಿ ಹೂಗಳ ವ್ಯವಹಾರವು ಲಾಭದಾಯಕ ಎಂಬ ಅಂಶ ಸಾಬೀತಾಗಿದೆ. ಇದು ಪುಷ್ಪ ಮಾರಾಟ ಕ್ಷೇತ್ರದಲ್ಲಿ

ಹೊಸ ಸಾಧ್ಯತೆಗಳಿಗೆ ಆಸ್ಪದ ನೀಡುತ್ತದೆ. ಈ ಅಧ್ಯಯನದಲ್ಲಿ ಬಿಡಿ ಹೂಗಳ ಉತ್ಪಾದನೆ ಮತ್ತು ಮಾರಾಟದ ವೆಚ್ಚ-ಪ್ರತಿಫಲವನ್ನು ವಿಶ್ಲೇಷಿಸಲಾಗಿದೆ.

ವಿದ್ಯಾವತಿ ಮತ್ತು ದೇಸಾಯಿ[೪೦] ಯವರು ಬೆಂಗಳೂರು ಮತ್ತು ಪುಣೆಯಲ್ಲಿನ ಪುಷ್ಪ ಬೆಳೆಯ ತುಲನಾತ್ಮಕ ಅಧ್ಯಯನವನ್ನು ಮಾಡಿರುತ್ತಾರೆ. ಅವರ ಪ್ರಕಾರ ಪುಷ್ಪರಂಗದಲ್ಲಿ ಹೂಡಿಕೆಯ ಪ್ರತಿಫಲವು ಪುಣೆಗಿಂತ ಬೆಂಗಳೂರಿನಲ್ಲಿ ಅಧಿಕವಾಗಿರುವುದರಿಂದ ಬೆಂಗಳೂರು ಪುಷ್ಪ ಉದ್ಯಮಕ್ಕೆ ಪುಣೆಗಿಂತ ಹೆಚ್ಚು ಉತ್ತಮವಾಗಿದೆ. ಇದು ಕರ್ನಾಟಕದಲ್ಲಿ ಪುಷ್ಪೋದ್ಯಮಕ್ಕೆ ಹೆಚ್ಚಿನ ಅವಕಾಶವಿರುವುದನ್ನು ವಿದಿತಪಡಿಸುತ್ತದೆ.

ದೆಬಾಶಿಶ್ ಸೇನ್ ಗುಪ್ತಾ ಮತ್ತು ರಾಜಕಮಲ್[೪೧] ತಮ್ಮ ಕೃತಿಯಲ್ಲಿ ಭಾರತದ ಪ್ರಮುಖ ಪುಷ್ಪ ಉತ್ಪನ್ನಗಳು, ಮಾರಾಟ ವಿಧಿವಿಧಾನಗಳು, ಪುಷ್ಪದ ಬಗೆಗಿರುವ ಗ್ರಾಹಕರ ವರ್ತನೆ, ಪುಷ್ಪ ಸಂಕುಲಗಳ ಬಗೆಗಿನ ಔಷಧೀಯ ಗುಣಗಳು, ಪುಷ್ಪ ಮಾರಾಟದಲ್ಲಿ ಶ್ರೇಣೀಕರಣದ ಪ್ರಾಮುಖ್ಯತೆ, ಶೀತಲ ಸರಪಳಿ ನಿರ್ವಹಣೆ, ಮತ್ತು ಭಾರತದಲ್ಲಿ ಪುಷ್ಪೋದ್ಯಮಕ್ಕಿರುವ ಭವಿಷ್ಯವನ್ನು ಚರ್ಚಿಸಲಾಗಿದೆ. ಭವಿಷ್ಯದ ಬಗೆಗಿನ ಮುನ್ನೋಟ ಈ ಕೃತಿಯ ಹೆಚ್ಚುಗಾರಿಕೆಯಾಗಿದೆ.

## ೧.೪ ಅಧ್ಯಯನದ ಮಹತ್ವ, ಉದ್ದೇಶಗಳು ಮತ್ತು ಪೂರ್ವಕಲ್ಪನೆ

### ೧.೪.೧ ಅಧ್ಯಯನದ ಮಹತ್ವ

ಬ್ರಿಟಿಷರ ಆಡಳಿತವಿದ್ದಾಗ ಕರಾವಳಿ ಕರ್ನಾಟಕವನ್ನು ಒಟ್ಟಾಗಿ 'ಕೆನರಾ ಜಿಲ್ಲೆ' ಎಂದು ಕರೆಯಲಾಗುತಿತ್ತು. ಇದರಲ್ಲಿ ಇಂದಿನ ಉತ್ತರ ಕನ್ನಡ, ಉಡುಪಿ, ದಕ್ಷಿಣ ಕನ್ನಡ ಮತ್ತು ಕಾಸರಗೋಡು ಜಿಲ್ಲೆಗಳು ಸೇರಿದ್ದವು. ಕರ್ನಾಟಕ ರಾಜ್ಯವಾಗಿ ರೂಪುಗೊಂಡಾಗ ಉತ್ತರ ಕನ್ನಡ ಮತ್ತು ಕಾಸರಗೋಡು ಪ್ರತ್ಯೇಕಗೊಂಡವು.[೪೨] ಕ್ರಿ.ಶ. ೧೯೯೭ರಲ್ಲಿ ದ.ಕ. ಜಿಲ್ಲೆಯನ್ನು ವಿಭಜಿಸಿ ಉಡುಪಿ ಜಿಲ್ಲೆ ಮತ್ತು ದಕ್ಷಿಣ ಕನ್ನಡ ಜಿಲ್ಲೆ ಎಂಬ ಎರಡು ಜಿಲ್ಲೆಗಳನ್ನು ರಚಿಸಲಾಯಿತು.[೪೩] ಮಲ್ಲಿಗೆ ಬೆಳೆಯುವ ಬಹುಮುಖ್ಯ ಪ್ರದೇಶವಾದ ಶಂಕರಪುರ ಉಡುಪಿ ತಾಲೂಕಿನ ಒಂದು ಭಾಗವಾಯಿತು.

ಶಂಕರಪುರ ಮಲ್ಲಿಗೆಯ ಆರ್ಥಿಕತೆಯ ಬಗ್ಗೆ ಕೆಲವು ಸಣ್ಣ ಪುಟ್ಟ ಅಧ್ಯಯನಗಳು ನಡೆದಿವೆ. ಇವು ಬಹುತೇಕವಾಗಿ ವಾರ್ತಾ ಪತ್ರಿಕೆಗಳ ಅಗತ್ಯವನ್ನು ಈಡೇರಿಸುವ ಉದ್ದೇಶದಿಂದ ನಡೆದ ಅಧ್ಯಯನಗಳು. ದಕ್ಷಿಣ ಕನ್ನಡ ಜಿಲ್ಲೆಯ ಐದು ತಾಲೂಕುಗಳಲ್ಲಿ ಈ ಬಗ್ಗೆ ಸಮಗ್ರ ಅಧ್ಯಯನ ನಡೆದಿಲ್ಲ. ದಕ್ಷಿಣ ಕನ್ನಡದಲ್ಲಿ ಧಾರ್ಮಿಕ ಸಂಸ್ಥೆಗಳ ಆಶ್ರಯದಲ್ಲಿ ಮಲ್ಲಿಗೆ ಬೆಳೆ ಪ್ರಾಶಸ್ತ್ಯವನ್ನು ಪಡೆದುಕೊಳ್ಳುತ್ತಿದೆ. ಕೆಲವು ಕಡೆ ಚರ್ಚುಗಳು ಮಲ್ಲಿಗೆ ಕೃಷಿಗೆ ಪ್ರೋತ್ಸಾಹ ನೀಡಿವೆ.[೪೪] ಇಗರ್ಜಿಯ ಹೊರಾಂಗಣದಲ್ಲಿನ ಮಲ್ಲಿಗೆ ಕೃಷಿಯಿಂದಾಗಿ ಆರ್ಥಿಕ ಪ್ರಯೋಜನದೊಂದಿಗೆ ಪರಿಸರದ ಸೌಂದರ್ಯವೂ ಹೆಚ್ಚಿದೆ.[೪೫] ಧರ್ಮಸ್ಥಳ ಗ್ರಾಮೀಣಾಭಿವೃದ್ಧಿ ಯೋಜನೆಯಲ್ಲಿ ಸ್ವಸಹಾಯ ಸಂಘಗಳ ಸದಸ್ಯರನ್ನು ಮಲ್ಲಿಗೆ ಬೆಳೆಯುವಂತೆ ಪ್ರೇರೇಪಿಸಲಾಗುತ್ತಿದೆ.[೪೬] ಇದರಿಂದಾಗಿ ಈ ಜಿಲ್ಲೆಯ ಆರ್ಥಿಕತೆಯು ಹೊಸ ಆಯಾಮವನ್ನು ಪಡೆದುಕೊಂಡಿದೆ. ಈ ಹಿನ್ನಲೆಯಲ್ಲಿ ಪ್ರಸಕ್ತ ಅಧ್ಯಯನಕ್ಕೆ ವಿಶೇಷ ಮಹತ್ವ ಪ್ರಾಪ್ತವಾಗುತ್ತದೆ.

ಅಧ್ಯಯನಕ್ಕೆ ಲಭ್ಯವಾಗಿರುವ ಸಂಶೋಧನಾ ಸಾಹಿತ್ಯದಲ್ಲಿ ಒಂದನ್ನು ಹೊರತುಪಡಿಸಿದರೆ ಉಳಿದವುಗಳು ಮಂಗಳೂರು ಮಲ್ಲಿಗೆಗೆ ಸಂಬಂಧ ಪಟ್ಟದ್ದಲ್ಲ. ಎಲ್ಲಾ ಅಧ್ಯಯನಗಳು ವೆಚ್ಚ ಅಥವಾ ಪೂರೈಕೆ ಭಾಗಕ್ಕೆ ಹೆಚ್ಚು ಮಹತ್ವವನ್ನು ಕೊಟ್ಟಿವೆ. ಮಲ್ಲಿಗೆ ಬೆಳೆಗಾರರ ಸಂಯೋಜನೆ, ಭೂ ಹಿಡುವಳಿಗಳ ಸಂಯೋಜನೆ, ವೆಚ್ಚ ಆದಾಯ ಅನುಪಾತ, ಲಿಂಗಾನುಪಾತ, ಸಂಗ್ರಹ ಮತ್ತು ಪರಿಷ್ಕರಣೆಗೆ ಪ್ರಾಶಸ್ತ್ಯವನ್ನು ಯಾವುದೂ ನೀಡಿಲ್ಲ. ಮಲ್ಲಿಗೆ ಬಗ್ಗೆ ನಡೆದಿರುವ ಒಂದು ಅಧ್ಯಯನ ಶಂಕರಪುರವನ್ನು ಮಾತ್ರ ಕೇಂದ್ರವಾಗಿರಿಸಿಕೊಂಡಿದೆ. ಅವಿಭಜಿತ ದ.ಕ. ಜಿಲ್ಲೆಯ ಇತರ ಭಾಗಗಳ ಮಲ್ಲಿಗೆ ಬೆಳೆಗಾರರ ಸಮಸ್ಯೆಗಳನ್ನು ಕಂಡು ಹಿಡಿಯುವಲ್ಲಿ ಅದು ವಿಫಲವಾಗಿದೆ. ಶಂಕರಪುರವು ಈಗಾಗಲೇ ಬಹಳ ಖ್ಯಾತಿಯನ್ನು ಪಡೆದ ಮಲ್ಲಿಗೆ ಉತ್ಪಾದನಾ ಕೇಂದ್ರವಾಗಿದ್ದು ಅಲ್ಲಿನ ಸಮಸ್ಯೆಗಳು ಮತ್ತು ಅವಿಭಜಿತ ದ.ಕ. ಜಿಲ್ಲೆಯ ಇತರ ಪ್ರದೇಶಗಳ ಸಮಸ್ಯೆಗಳು ಭಿನ್ನ ಭಿನ್ನವಾಗಿವೆ. ಇದುವರೆಗಿನ ಅಧ್ಯಯನಗಳು ಮಾರಾಟಗಾರರ ಸಮಸ್ಯೆಗಳನ್ನು ವಿಶ್ಲೇಷಣೆ ಮಾಡಿಲ್ಲ. ಉತ್ಪಾದಕರಿಗೆ ಮತ್ತು ಮಾರಾಟಗಾರರಿಗೆ ದೊರೆಯುವ ಸಂಘಟನಾತ್ಮಕ ನೆರವಿನ ಬಗ್ಗೆ ಮತ್ತು ಅದರ ಪರಿಣಾಮದ ಬಗ್ಗೆ ಚರ್ಚಿಸಿಲ್ಲ. ಆರ್ಥಿಕ ನೀತಿಯು ಮಲ್ಲಿಗೆ ಉತ್ಪಾದನೆ ಮತ್ತು ಮಾರಾಟದ ಮೇಲೆ ಬೀರುವ ಪ್ರಭಾವವನ್ನು ಗುರುತಿಸಿಲ್ಲ. ಮನೆಯಲ್ಲೇ ಇರುವ ಗೃಹಿಣಿಯರು ತಮ್ಮ ತುಂಡು ಭೂಮಿಯಲ್ಲಿ ಮಲ್ಲಿಗೆ ಬೆಳೆದು ಆದಾಯವನ್ನು ಹೆಚ್ಚಿಸುವ ಸಾಧ್ಯತೆಯನ್ನು ಗುರುತಿಸಿಲ್ಲ. ಪರಿಸರ ಸಖ್ಯ ಬೆಳವಣಿಗೆ ಮತ್ತು ಮಹಿಳಾ ಸಬಲೀಕರಣದ ಸಾಧ್ಯತೆಯನ್ನೂ ಚರ್ಚಿಸಿಲ್ಲ. ಸಹಕಾರ ಮತ್ತು ಧಾರ್ಮಿಕ ಸಂಸ್ಥೆಗಳ ಪಾಲ್ಗೊಳ್ಳುವಿಕೆಯಿಂದ ಮಲ್ಲಿಗೆಯ ಉತ್ಪಾದನೆಯನ್ನು ಹೆಚ್ಚಿಸಿ ಅದನ್ನೊಂದು ಲಾಭದಾಯಕ ಉದ್ಯಮವನ್ನಾಗಿ ಮಾಡುವ ಅವಕಾಶದ ಬಗ್ಗೆ ಬೆಳಕು ಚೆಲ್ಲಿಲ್ಲ. ಪ್ರಸಕ್ತ ಅಧ್ಯಯನವು ಈ ಎಲ್ಲಾ ಮಿತಿಗಳನ್ನು ಮೀರಲು ಯತ್ನಿಸುತ್ತದೆ.

### ೧.೪.೨ ಅಧ್ಯಯನದ ಉದ್ದೇಶಗಳು

೧. ಮಲ್ಲಿಗೆ ಬೆಳೆಯ ವೆಚ್ಚ ಉತ್ಪನ್ನ ಅನುಪಾತ, ನೀರಾವರಿ ಮೂಲಗಳು ಹಣಕಾಸಿನ ಮೂಲಗಳು, ಬೆಳೆಗೆ ತಗಲುವ ರೋಗಗಳು ಮತ್ತು ಮಾರಾಟ ವ್ಯವಸ್ಥೆಯ ಸಮಸ್ಯೆಗಳನ್ನು ಕಂಡು ಹಿಡಿಯುವುದು.

೨. ಮಲ್ಲಿಗೆ ಸಂಗ್ರಹಣೆಯ ಮಾರಾಟದ ಮತ್ತು ಬೆಲೆ ನಿರ್ಧಾರಕ್ಕೆ ಸಂಬಂಧಿಸಿದ ಸಮಸ್ಯೆಗಳನ್ನು ಕಂಡುಹಿಡಿಯುವುದು.

೩. ಮಲ್ಲಿಗೆ ಉತ್ಪಾದನೆ ಮತ್ತು ಮಾರಾಟಕ್ಕೆ ಸಂಬಂಧಿಸಿದ ಸಂಘಟನಾತ್ಮಕ ನೆರವಿನ ಸ್ವರೂಪ ಮತ್ತು ಸಮಸ್ಯೆಗಳನ್ನು ಕಂಡುಹಿಡಿಯುವುದು.

೪. ಮಲ್ಲಿಗೆ ಉತ್ಪಾದನೆ ಮತ್ತು ಮಾರಾಟದ ಮೇಲೆ ಆರ್ಥಿಕೇತರ ಅಂಶಗಳ ಪ್ರಭಾವವನ್ನು ಅಧ್ಯಯನ ಮಾಡುವುದು.

೫. ಮಲ್ಲಿಗೆ ಉತ್ಪಾದನೆ ಮತ್ತು ಮಾರಾಟದ ಮೇಲೆ ಇತ್ತೀಚಿನ ಆರ್ಥಿಕ ವಿದ್ಯಮಾನಗಳ ಪ್ರಭಾವವನ್ನು ವಿಶ್ಲೇಷಿಸುವುದು.

೬. ಮಲ್ಲಿಗೆ ಉತ್ಪಾದನೆ ಮತ್ತು ಮಾರಾಟಕ್ಕೆ ಸಂಬಂಧಿಸಿದ ಸಮಸ್ಯೆಗಳಿಗೆ ಪರಿಹಾರಗಳನ್ನು ಸೂಚಿಸುವುದು.

### ೧.೪.೩ ಅಧ್ಯಯನದ ಪೂರ್ವಕಲ್ಪನೆಗಳು

ಈ ಅಧ್ಯಯನವು ಮೂರು ಪೂರ್ವ ಕಲ್ಪನೆಗಳನ್ನು (Hypotheses) ಪರಿಶೀಲಿಸುತ್ತದೆ.

- ಆರ್ಥಿಕ ಅನಿವಾರ್ಯತೆ ಮಲ್ಲಿಗೆ ಪುಷ್ಪೋದ್ಯಮವನ್ನು ಲಾಭದಾಯಕವನ್ನಾಗಿಸಿದೆ.
- ಮಲ್ಲಿಗೆ ಕೃಷಿಯು ಹಿಡುವಳಿಗಳನ್ನು ಆರ್ಥಿಕವನ್ನಾಗಿಸುತ್ತದೆ.
- ಮಲ್ಲಿಗೆ ಕೃಷಿಯು ಬೀಡಿ, ಗೇರು, ಹಂಚುಗಳಿಗೆ ಬದಲಿ ಉದ್ಯಮವಾಗಿದೆ.

## ೧.೫ ಅಧ್ಯಯನ ವಿಧಾನ

ಪ್ರಸಕ್ತ ಅಧ್ಯಯನದ ವಸ್ತು ಮತ್ತು ವ್ಯಾಪ್ತಿ, ಅವಧಿ, ದತ್ತಾಂಶ ಮೂಲಗಳು, ದತ್ತಾಂಶ ಸಂಗ್ರಹ ವಿಧಾನ, ಮಾದರಿ ಸಮೀಕ್ಷಾ ಕ್ರಮ, ದತ್ತಾಂಶ ವಿಶ್ಲೇಷಣೆಯ ಸಲಕರಣೆಗಳು ಈ ಕೆಳಗಿನಂತಿವೆ.

### ೧.೫.೧ ಅಧ್ಯಯನದ ವಸ್ತು ಮತ್ತು ವ್ಯಾಪ್ತಿ

ಪ್ರಸಕ್ತ ಅಧ್ಯಯನವು ದ.ಕ. ಮತ್ತು ಉಡುಪಿ ಜಿಲ್ಲೆಗಳ ಮಲ್ಲಿಗೆ ಬೆಳೆಗಾರರ ಮತ್ತು ಮಾರಾಟಗಾರರ ಸಮಸ್ಯೆಗಳನ್ನು ತಲಸ್ಪರ್ಶಿಯಾಗಿ ವಿಶ್ಲೇಷಿಸುತ್ತದೆ. ಈ ಜಿಲ್ಲೆಗಳು ಮಂಗಳೂರು, ಬಂಟ್ವಾಳ, ಬೆಳ್ತಂಗಡಿ, ಪುತ್ತೂರು, ಸುಳ್ಯ, ಕಾರ್ಕಳ, ಕುಂದಾಪುರ ಮತ್ತು ಉಡುಪಿ ಎಂಬ ಎಂಟು ತಾಲೂಕುಗಳನ್ನು ಒಳಗೊಂಡಿವೆ. ಎಲ್ಲಾ ತಾಲೂಕುಗಳ ಬೆಳೆಗಾರರನ್ನು ಮತ್ತು ಮಾರಾಟಗಾರರನ್ನು ಅಧ್ಯಯನದಲ್ಲಿ ಸಾಂಕೇತಿಕವಾಗಿ ಒಳಪಡಿಸಲಾಗಿದೆ.

### ೧.೫.೨ ಅಧ್ಯಯನದ ಅವಧಿ

ಅಧ್ಯಯನದ ಒಟ್ಟು ಅವಧಿ ಐದು ವರ್ಷಗಳು. ಬಹಳ ಹಿಂದಿನ ಅಂಕಿ ಅಂಶಗಳು ಲಭ್ಯವಿಲ್ಲದ ಕಾರಣ ೨೦೦೬ ರಿಂದ ೨೦೧೦ರ ವರೆಗಿನ ಅಂಕಿ ಅಂಶಗಳನ್ನು ಒಳಪಡಿಸಲಾಗಿದೆ.

### ೧.೫.೩ ದತ್ತಾಂಶ ಮೂಲಗಳು

ಅಧ್ಯಯನಕ್ಕೆ ಅಗತ್ಯವಿರುವ ದತ್ತಾಂಶಗಳನ್ನು ಆನುಷಂಗಿಕ ಮತ್ತು ಪ್ರಾಥಮಿಕ ಮೂಲಗಳಿಂದ ಸಂಗ್ರಹಿಸಲಾಗಿದೆ. ಆನುಷಂಗಿಕ ಮೂಲಗಳು ಬಹುತೇಕವಾಗಿ ಪ್ರಕಟಿತ ಮತ್ತು ಅಪ್ರಕಟಿತ ಸಂಶೋಧನ ನಿಬಂಧಗಳಾಗಿವೆ. ಕೆಲವು ಕೃತಿಗಳನ್ನು ಮತ್ತು ನಿಯತಕಾಲಿಕೆಗಳಲ್ಲಿ ಬಂದ ಸಂಶೋಧನಾ ವರದಿಗಳನ್ನು ಹಾಗೂ ಪ್ರಬಂಧಗಳನ್ನು ವಿಶ್ಲೇಷಣೆ ಬಳಸಿಕೊಳ್ಳಲಾಗಿದೆ. ಪ್ರಾಥಮಿಕ ಮಾಹಿತಿಗಳನ್ನು ಮಲ್ಲಿಗೆ ಬೆಳೆಗಾರರಿಂದ, ಸಂಘ ಸಂಸ್ಥೆಗಳಿಂದ ಮತ್ತು ಮಲ್ಲಿಗೆ ಮಾರಾಟಗಾರರಿಂದ ಕ್ಷೇತ್ರಾಧ್ಯಯನದ ಮೂಲಕ ಸಂಗ್ರಹಿಸಲಾಗಿದೆ.

### ೧.೫.೪ ದತ್ತಾಂಶ ಸಂಗ್ರಹ ವಿಧಾನ

ಆನುಷಂಗಿಕ ದತ್ತಾಂಶಗಳನ್ನು ಪ್ರಕಟಿತ ಮೂಲಗಳಿಂದ ಪಡೆದುಕೊಳ್ಳಲಾಗಿದೆ. ಪ್ರಾಥಮಿಕ ದತ್ತಾಂಶಗಳನ್ನು ನೇರ ಸಂದರ್ಶನ ವಿಧಾನದ ಮೂಲಕ ಸಂಗ್ರಹಿಸಲಾಗಿದೆ. ಅದಕ್ಕಾಗಿ ಅಧ್ಯಯನ ಉದ್ದೇಶಗಳ ಆಧಾರದಲ್ಲಿ ಪ್ರಶ್ನಾವಳಿಗಳನ್ನು ರೂಪಿಸಿ ಮಾರಾಟಗಾರರಿಂದ ಮತ್ತು ಮಲ್ಲಿಗೆ ಬೆಳೆಗಾರರಿಂದ ಮಾಹಿತಿಗಳನ್ನು ಸಂಗ್ರಹಿಸಲಾಗಿದೆ.

ಸಮರ್ಪಕ ಮಾಹಿತಿಗಳು ದೊರೆಯದ ಸಂದರ್ಭಗಳಲ್ಲಿ ಬೆಳೆಗಾರರ ಮತ್ತು ಮಾರಾಟಗಾರರ ಅನುಭವ ಮತ್ತು ನೆನಪಿನ ಆಧಾರದಲ್ಲಿ ಮೌಖಿಕ ಮಾಹಿತಿಯನ್ನು ಕ್ರೋಢೀಕರಿಸಲಾಗಿದೆ.

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅಂದಾಜು ೧೨೨೫ ಮಲ್ಲಿಗೆ ಬೆಳೆಗಾರರಿದ್ದು, ಇವರು ಎಂಟು ತಾಲೂಕುಗಳಲ್ಲಿ ಹಂಚಿ ಹೋಗಿದ್ದಾರೆ. ಅಧ್ಯಯನದ ಉದ್ದೇಶದಿಂದ ಇವರನ್ನು ಅತಿ ಸಣ್ಣ ಬೆಳೆಗಾರರು, ಸಣ್ಣ ಬೆಳೆಗಾರರು ಮತ್ತು ದೊಡ್ಡ ಬೆಳೆಗಾರರೆಂದು ವರ್ಗೀಕರಿಸಲಾಗಿದೆ. ೧೦೦ ಕ್ಕಿಂತ ಕಡಿಮೆ ಗಿಡ ಹೊಂದಿರುವವರು ಅತೀ ಸಣ್ಣ ಬೆಳೆಗಾರರಾದರೆ ೧೦೦ ರಿಂದ ೫೦೦ ಗಿಡಗಳವರೆಗೆ ಗಿಡ ಹೊಂದಿರುವರು ಸಣ್ಣ ಬೆಳೆಗಾರರು, ೫೦೦ಕ್ಕಿಂತ ಹೆಚ್ಚು ಗಿಡ ಹೊಂದಿರುವವರು ದೊಡ್ಡ ಬೆಳೆಗಾರರಾಗಿರುತ್ತಾರೆ. ಮಲ್ಲಿಗೆ ಪುಷ್ಪೋದ್ಯಮದಲ್ಲಿ ಅತೀ ಸಣ್ಣ ಬೆಳೆಗಾರರದ್ದೇ ಪ್ರಾಬಲ್ಯ.

೮ ತಾಲೂಕುಗಳ ೮೦ ಅತಿ ಸಣ್ಣ ಬೆಳೆಗಾರರನ್ನು ४೦ ಸಣ್ಣ ಬೆಳೆಗಾರರನ್ನು ಮತ್ತು ೫ ದೊಡ್ಡ ಬೆಳೆಗಾರರನ್ನು ಅಧ್ಯಯನಕ್ಕೆ ಆರಿಸಿಕೊಳ್ಳಲಾಗಿದೆ. ಬೆಳ್ತಂಗಡಿ, ಉಡುಪಿ ಮತ್ತು ಬಂಟ್ವಾಳ ತಾಲೂಕುಗಳಲ್ಲಿ ಮಲ್ಲಿಗೆಯ ಬೆಳೆಗಾರರು ಅತ್ಯಧಿಕವಾಗಿರುವುದರಿಂದ ಇವೆರಡು ತಾಲೂಕುಗಳಿಗೆ ಅಧಿಕ ಪ್ರಾತಿನಿಧ್ಯ ನೀಡಲಾಗಿದೆ. ಕೆಲವು ಚರ್ಚುಗಳು ದೊಡ್ಡ ರೀತಿಯಲ್ಲಿ ಮಲ್ಲಿಗೆ ಬೆಳೆಯುತ್ತಿದ್ದು, ಪ್ರಾತಿನಿಧಿಕವಾಗಿ ಒಂದು ಚರ್ಚನ್ನು ಅಧ್ಯಯನಕ್ಕೆ ಆರಿಸಿಕೊಳ್ಳಲಾಗಿದೆ. ಇದು ಬೆಳೆಗಾರರ ಅಥವಾ ಉತ್ಪಾದನೆಯ ಸಮಸ್ಯೆಗಳನ್ನು ಕಂಡುಕೊಳ್ಳಲು ಸಹಕಾರಿಯಾಗಿದೆ. ಮಾರಾಟದ ಸಮಸ್ಯೆಗಳನ್ನು ಅರಿತುಕೊಳ್ಳಲು ತಾಲೂಕು ಕೇಂದ್ರಗಳ ೮೫ ವ್ಯಾಪಾರಿಗಳನ್ನು ಆರಿಸಿಕೊಳ್ಳಲಾಗಿದ್ದು ಇವರಲ್ಲಿ ಐವರು ರಖಂ ವ್ಯಾಪಾರಿಗಳಾಗಿರುತ್ತಾರೆ. ಅಧ್ಯಯನದ ಮಾದರಿಗಳನ್ನು ಆಯ್ದುಕೊಳ್ಳುವಾಗ ಎಲ್ಲಾ ಸಮುದಾಯಗಳಿಗೆ ಪ್ರಾತಿನಿಧ್ಯ ದೊರೆಯುವಂತೆ ನೋಡಿಕೊಳ್ಳಲಾಗಿದೆ.

### ೧.೫.೫ ಮಾದರಿ ಸಮೀಕ್ಷಾ ಕ್ರಮ

ಸಮೀಕ್ಷೆಯ ಮಾದರಿಗಳನ್ನು ಆಯ್ದುಕೊಳ್ಳಲು ಸರಕಾರದ ಕೃಷಿ ಇಲಾಖೆ, ಮಹಾನಗರ ಪಾಲಿಕೆ, ಪುರಸಭೆ ಮತ್ತು ಸ್ವಸಹಾಯ ಗುಂಪುಗಳ ನೆರವನ್ನು ಪಡೆದುಕೊಳ್ಳಲಾಗಿದೆ. ಮಾದರಿಯನ್ನು ಆಯ್ದುಕೊಳ್ಳುವಾಗ ಸಾಮಾಜಿಕ ಮತ್ತು ಆರ್ಥಿಕ ನ್ಯಾಯದ ದೃಷ್ಟಿಯಿಂದ ಎಲ್ಲಾ ಜಾತಿ ಮತ್ತು ವರ್ಗಗಳಿಗೆ ಪ್ರಾತಿನಿಧ್ಯ ನೀಡಲಾಗಿದೆ. ವ್ಯಾಪಾರಿಗಳನ್ನು ಆಯ್ದುಕೊಳ್ಳುವಾಗಲೂ ಈ ಕ್ರಮವನ್ನು ಅನುಷ್ಠಾನಗೊಳಿಸಲಾಗಿದೆ.

### ೧.೫.೬ ದತ್ತಾಂಶ ವಿಶ್ಲೇಷಣೆಯ ಸಲಕರಣೆಗಳು

ದತ್ತಾಂಶ ವಿಶ್ಲೇಷಣೆಗೆ ಸಂದರ್ಭಕ್ಕೆ ತಕ್ಕಂತೆ ಗಣಿತದ ಮತ್ತು ಸಂಖ್ಯಾಶಾಸ್ತ್ರದ ಸಾಧನಗಳನ್ನು ಬಳಸಿಕೊಳ್ಳಲಾಗಿದೆ. ಲಭ್ಯ ದತ್ತಾಂಶಗಳನ್ನು ಅಗತ್ಯಕ್ಕೆ ತಕ್ಕಂತೆ ಕೋಷ್ಟಕಗಳ ಮತ್ತು ಚಿತ್ರಗಳ ಸಹಾಯದಿಂದ ವಿಶ್ಲೇಷಿಸಲಾಗಿದೆ. ಸಂಕಲನ, ವ್ಯವಕಲನ, ಗುಣಾಕಾರ, ಭಾಗಾಕಾರ, ದಶಮಾಂಶಗಳ ಜತೆಯಲ್ಲಿ ಕಾರ್ಯಕಾರಣ ಸಂಬಂಧ, ಸೂತ್ರಗಳ ಸಹಾಯದಿಂದ ಖಚಿತ ಫಲಿತಾಂಶವನ್ನು ಪಡೆಯಲು ಯತ್ನಿಸಲಾಗಿದೆ.

### ೧.೫.೭ ಅಧ್ಯಾಯ ರೂಪೀಕರಣ

ಪ್ರಸಕ್ತ ಅಧ್ಯಯನವನ್ನು ಫಲಿತಗಳನ್ನು ಎಂಟು ಅಧ್ಯಾಯಗಳಲ್ಲಿ ಸಂಕ್ಷೇಪಿಸಲಾಗಿದೆ.

ಮೊದಲನೆಯ ಅಧ್ಯಾಯ : ಪ್ರಸ್ತಾವನೆ ಮತ್ತು ಸಂಶೋಧನ ವಿನ್ಯಾಸ. ಇದರಲ್ಲಿ ಸಮಸ್ಯೀಕರಣ, ಕನ್ನಡ ಸಾಹಿತ್ಯದಲ್ಲಿ ಮಲ್ಲಿಗೆ, ಹಿಂದಿನ ಅಧ್ಯಯನಗಳ ಸಮೀಕ್ಷೆ, ಪ್ರಸಕ್ತ ಅಧ್ಯಯನದ ಮಹತ್ವ, ಉದ್ದೇಶಗಳು ಮತ್ತು ಪೂರ್ವಕಲ್ಪನೆ ಹಾಗೂ ಅಧ್ಯಯನದ ವಿಧಾನಗಳನ್ನು ಸೇರಿಸಲಾಗಿದೆ. ಅಧ್ಯಯನದ ವಿಧಾನದಲ್ಲಿ ವ್ಯಾಪ್ತಿ, ಅವಧಿ, ದತ್ತಾಂಶ ಸಂಗ್ರಹದ ಮೂಲಗಳು ಮತ್ತು ವಿಧಾನ, ಸಮೀಕ್ಷೆಯ ಚೌಕಟ್ಟು ಮತ್ತು ಗಾತ್ರ, ಮಾದರಿ ಸಮೀಕ್ಷಾ ಕ್ರಮ, ದತ್ತಾಂಶ ವಿಶ್ಲೇಷಣೆಯ ಸಲಕರಣೆಗಳು ಇವುಗಳನ್ನು ವಿಶ್ಲೇಷಿಸಲಾಗಿದೆ.

ಎರಡನೆ ಅಧ್ಯಾಯ: ಭಾರತದ ಆರ್ಥಿಕತೆಯಲ್ಲಿ ಪುಷ್ಪೋದ್ಯಮ. ಈ ಅಧ್ಯಾಯದಲ್ಲಿ ಭಾರತದ ಕೃಷಿಯಲ್ಲಿ ಪುಷ್ಪೋದ್ಯಮದ ಪಾತ್ರ, ಭಾರತದ ಪುಷ್ಪ ವೈವಿಧ್ಯ, ಭಾರತದಲ್ಲಿ ಪುಷ್ಪ ಬೆಳೆಯುವ ಪ್ರದೇಶ, ಪುಷ್ಪೋದ್ಯಮದಲ್ಲಿ ಉದ್ಯೋಗಾವಕಾಶಗಳು, ದೇಶೀಯ ಪುಷ್ಪ ಮಾರುಕಟ್ಟೆ ಮತ್ತು ಅಂತಾರಾಷ್ಟ್ರೀಯ ಪುಷ್ಪ ಮಾರಾಟ ಮತ್ತು ಸಹಯೋಗದ ಬಗ್ಗೆ ವಿಶ್ಲೇಷಣೆ ಮಾಡಲಾಗಿದೆ.

ಮೂರನೆ ಅಧ್ಯಾಯ: ಕರ್ನಾಟಕದ ಆರ್ಥಿಕತೆಯಲ್ಲಿ ಪುಷ್ಪೋದ್ಯಮ. ಇದರಲ್ಲಿ ಕರ್ನಾಟಕದ ಆರ್ಥಿಕತೆಯ ಸ್ವರೂಪ, ಕರ್ನಾಟಕದಲ್ಲಿ ತೋಟಗಾರಿಕೆಯ ಪ್ರಗತಿ, ತೋಟಗಾರಿಕಾ ಬೆಳೆ ಪ್ರದೇಶ, ತೋಟಗಾರಿಕಾ ಬೆಳೆಗಳ ಉತ್ಪಾದನೆ ಮತ್ತು ಮೌಲ್ಯ, ಕರ್ನಾಟಕದ ಸಾಂಪ್ರದಾಯಿಕ ಪುಷ್ಪಗಳು, ಕರ್ನಾಟಕದ ಸಾಂಪ್ರದಾಯಿಕ ಪುಷ್ಪ ಬೆಳೆ ಪ್ರದೇಶ, ಕರ್ನಾಟಕದ ಸಾಂಪ್ರದಾಯಿಕೇತರ ಪುಷ್ಪಗಳು ಮತ್ತು ಪುಷ್ಪೋದ್ಯಮದ ಬೆಳವಣಿಗೆ ಇವುಗಳನ್ನು ವಿಶ್ಲೇಷಿಸಲಾಗಿದೆ.

ನಾಲ್ಕನೆ ಅಧ್ಯಾಯ: ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪುಷ್ಪೋದ್ಯಮ. ಈ ಅಧ್ಯಾಯದಲ್ಲಿ ಅವಿಭಜಿತ ದಕ್ಷಿಣ ಕನ್ನಡದ ಸಂಕ್ಷಿಪ್ತ ಇತಿಹಾಸ, ಅವಿಭಜಿತ ದಕ್ಷಿಣ ಕನ್ನಡದ ಆರ್ಥಿಕತೆ ಬೆಳೆಗಳು, ಭೂಮಿಯ ಬಳಕೆ, ವೃತ್ತಿಯ ಆದಾಯದ ಮೂಲಗಳು, ಅವಿಭಜಿತ

ದ.ಕ. ಜಿಲ್ಲೆಯ ಹಿಡುವಳಿಗಳು, ಅವಿಭಜಿತ ದಕ್ಷಿಣ ಕನ್ನಡದಲ್ಲಿ ಪುಷ್ಪ ಬೆಳೆ ಮತ್ತು ಅವಿಭಜಿತ ದ.ಕ. ಜಿಲ್ಲೆಯ ಪುಷ್ಪ ವೈವಿಧ್ಯ ಮೊದಲಾದ ವಿಷಯಗಳು ಒಳಗೊಂಡಿವೆ.

ಐದನೆ ಅಧ್ಯಾಯ: ಮಲ್ಲಿಗೆ ಬೆಳೆಗಾರರ ಸಮಸ್ಯೆಗಳು. ಇದು ಮಲ್ಲಿಗೆಯ ಉತ್ಪಾದನೆಗೆ ಸಂಬಂಧಿಸಿದ ಸಮಸ್ಯೆಗಳು, ಮಲ್ಲಿಗೆ ಸಂಗ್ರಹಣೆಯ ಸಮಸ್ಯೆಗಳು, ಮಲ್ಲಿಗೆ ವಿತರಣೆಯ ಸಮಸ್ಯೆಗಳು, ಮಲ್ಲಿಗೆ ಬೆಳೆಗಾರರ ಇತರ ಸಮಸ್ಯೆಗಳು ಮೊದಲಾದ ವಿಚಾರಗಳ ಬಗ್ಗೆ ಕ್ಷೇತ್ರಾಧ್ಯಯನ ಆಧರಿತ ವಿಶ್ಲೇಷಣೆಯಾಗಿದೆ.

ಆರನೆ ಅಧ್ಯಾಯ: ಮಲ್ಲಿಗೆ ಮಾರಾಟಗಾರರ ಸಮಸ್ಯೆಗಳು. ಇದರಲ್ಲಿ ಮಾರಾಟಗಾರರ ಸಂಗ್ರಹಣಾ ಸಮಸ್ಯೆ, ಮಾರಾಟಕ್ಕೆ ಸಂಬಂಧಿಸಿದ ಸಮಸ್ಯೆಗಳು, ಬೆಲೆ ನಿರ್ಧಾರಕ್ಕೆ ಸಂಬಂಧಿಸಿದ ಸಮಸ್ಯೆಗಳು, ಹಾಗೂ ಮಲ್ಲಿಗೆ ಮಾರಾಟಗಾರರ ಇತರ ಸಮಸ್ಯೆಗಳನ್ನು ಕ್ಷೇತ್ರಾಧ್ಯಯನದ ಆಧಾರದಲ್ಲಿ ವಿಶ್ಲೇಷಿಸಲಾಗಿದೆ.

ಏಳನೆ ಅಧ್ಯಾಯದಲ್ಲಿ ಸಮಗ್ರ ಅಧ್ಯಯನದ ಫಲಿತಗಳನ್ನು ದಾಖಲಿಸಲಾಗಿದೆ. ಇದರಲ್ಲಿ ಬೆಳೆಗಾರರ ಸಮಸ್ಯೆಗಳ ಅಧ್ಯಯನದ ಫಲಿತಗಳು, ಬೆಳೆಗಾರರ ಸಮಸ್ಯೆಗಳಿಗೆ ಪರಿಹಾರಗಳು, ಮಾರಾಟಗಾರರ ಸಮಸ್ಯೆಗಳ ಅಧ್ಯಯನದ ಫಲಿತಗಳು ಮತ್ತು ಮಾರಾಟಗಾರರ ಸಮಸ್ಯೆಗಳಿಗೆ ಪರಿಹಾರಗಳು- ಎಂಬ ನಾಲ್ಕು ಭಾಗಗಳಿವೆ. ಪ್ರಸಕ್ತ ಅಧ್ಯಯನದ ಫಲಿತಗಳ ಭಿನ್ನತೆಗಳನ್ನು ಈ ಅಧ್ಯಾಯದ ಕೊನೆಯ ಭಾಗದಲ್ಲಿ ವಿಶ್ಲೇಷಿಸಲಾಗಿದೆ.

ಎಂಟನೆ ಅಧ್ಯಾಯವು ಉಪಸಂಹಾರವಾಗಿದೆ. ಈ ಅಧ್ಯಾಯವು ಮಲ್ಲಿಗೆ ಬೆಳೆಗಾರರ ಮತ್ತು ಮಾರಾಟಗಾರರ ಸಮಸ್ಯೆಗಳನ್ನು ಕ್ಷೇತ್ರಾಧ್ಯಯನದ ಆಧಾರದಲ್ಲಿ ಬೆಳಕಿಗೆ ತಂದು, ಫಲಿತಗಳನ್ನು ಆಧರಿಸಿ ಮಲ್ಲಿಗೆ ಕೃಷಿ ಸಮಸ್ಯೆಗೆ ಪರಿಹಾರವನ್ನು ಸೂಚಿಸುವುದರಿಂದ ಮಲ್ಲಿಗೆ ಬೆಳೆಗಾರರಿಗೆ ಮತ್ತು ಮಾರಾಟಗಾರರಿಗೆ ಹೊಸ ಹಾದಿಗಳನ್ನು ಸೂಚಿಸುತ್ತದೆ. ಸರಕಾರಕ್ಕೆ ನೀತಿ ರೂಪಣೆಗೆ ಸಹಾಯಕವಾಗಿರುತ್ತದೆ; ಜಿಜ್ಞಾಸುಗಳಿಗೆ ಹೊಸ ಸಂಶೋಧನೆಯ ಪಥಗಳಿಗೆ ತೋರು ಬೆರಳಾಗಿರುತ್ತದೆಂದು ಭಾವಿಸಲಾಗಿದೆ.

## ಉಲ್ಲೇಖಗಳು ಮತ್ತು ಟಿಪ್ಪಣಿಗಳು

೧. 'ಪತ್ರಂ ಪುಷ್ಪಂ ಫಲಂ ತೋಯಂ ಯೋ ಮೇ ಭಕ್ತ್ಯಾ ಪ್ರಯಚ್ಛತಿ। ತದಹಂ ಭಕ್ತ್ಯುಪಹೃತಮಶ್ನಾಮಿ ಪ್ರಯತಾತ್ಮನ'. ಯಾವನು ನನಗೆ ಎಲೆಯನ್ನಾಗಲಿ, ಹೂವನ್ನಾಗಲಿ, ಹಣ್ಣನ್ನಾಗಲಿ, ನೀರನ್ನಾಗಲಿ, ಭಕ್ತಿಯಿಂದ ಕೊಡುವನೋ (ಅಂತಹ) ಶುದ್ಧ ಚಿತ್ತವುಳ್ಳವನು ಭಕ್ತಿಯಿಂದ ಸಮರ್ಪಿಸಿದ ಅದನ್ನು ನಾನು ಸ್ವೀಕರಿಸುತ್ತೇನೆ. [ಭಗವದ್ಗೀತೆ, ೯ನೆ ಅಧ್ಯಾಯ, ೨೬ನೇ ಶ್ಲೋಕ].

೨. ರೋಟರಿ, ಜೇಸೀ, ಲಯನ್ಸ್ ಇನ್ನಿತರ ಸಂಘ ಸಂಸ್ಥೆಗಳಲ್ಲಿ ನಡೆಯುವ ಸಭಾ ಕಾರ್ಯಕ್ರಮಗಳಲ್ಲಿ ಅತಿಥಿಗಳನ್ನು ಗೌರವಿಸುವ ರೀತಿ.

೩. ಕೆ.ಎಸ್. ನರಸಿಂಹ ಸ್ವಾಮಿ; ೧೯೮೬, ಮಲ್ಲಿಗೆಯ ಮಾಲೆ, ಬಾ.ಕಿ.ನ. ಆಪಿ ಪ್ರಕಾಶನ, ಬೆಂಗಳೂರು. ಪು.೩೬.

೪. Jayasheela; 'Southern Economist,' August 15, 2008, P:18.

೫. ತಿಂಗಳಾಯ ಎನ್.ಕೆ.; ೨೦೦೯, ಕರಾವಳಿ ಕರ್ನಾಟಕದ ಅರ್ಥವ್ಯವಸ್ಥೆ, ಮಂಗಳಾ ಪಬ್ಲಿಕೇಶನ್ಸ್, ಮಂಗಳೂರು, ಪು.೧೧.

೬. Himakara A.K.; 1987, The History of Agricultural Production in South Kanara during 18th Century, M. Phil Dissertation, JNU,P:44.

೭. Vigneshwara V.; 1986, Weekly Village Market & Rural Development, Ph.D. Thesis, Mangalore University, P-12.

೮. ಗಣಪತಿ ರಾವ್ ಐಗಳ್ ಎಂ.; ೧೯೨೩, ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ, ಶಾರದಾ ಪ್ರೆಸ್, ಮಂಗಳೂರು, ಪುಟ ೧೭.

೯. ಕೇಶವ ಕೃಷ್ಣ ಕುಡ್ವ; ೧೯೪೮, ದಕ್ಷಿಣ ಕನ್ನಡದ ಇತಿಹಾಸ, ತುಳುವ ಚರಿತ್ರೆ ಮಂಗಳೂರು, ಪುಟ- ೧೫.

೧೦. ಆಂಗ್ಲೋ ಮೈಸೂರು ಯುದ್ಧಗಳು: ೧೭೮೦, ೧೭೯೦ ಮತ್ತು ೧೭೯೯.

೧೧. ೧೮೩೦ರ ಕೂಟು ದಂಗೆ ಮತ್ತು ೧೮೩೭ ರ ಅಮರ ಸುಳ್ಯ ರೈತ ಬಂಡಾಯ.

೧೨. ಜಿ.ವಿ.ಜೋಷಿ ಮತ್ತು ನೋರ್ಬರ್ಟ್ ಲೋಬೋ; ೨೦೦೯, ಕರಾವಳಿ ಕರ್ನಾಟಕದ ಅರ್ಥವ್ಯವಸ್ಥೆ, ಹಿಂದಿನಿಂದ ಇಂದಿನವರೆಗೆ, ಮಂಗಳ ಪ್ರಕಾಶನ, ಮಂಗಳೂರು, ಪು-೩.

೧೩. ಕ್ಷೇತ್ರ ಅಧ್ಯಯನದ ಕಾಲದಲ್ಲಿ ದೊರೆತ ಮಾಹಿತಿ.

೧೪. ಉಡುಪಿ ಜಿಲ್ಲೆಯ ಕೇಂದ್ರ ಭಾಗದಿಂದ ೧೨ ಕಿ. ಮೀ. ದೂರದಲ್ಲಿರುವ ಒಂದು ಸಣ್ಣ ಪಟ್ಟಣ.

೧೫. ಕಟೀಲು ಶ್ರೀ ದುರ್ಗಾಪರಮೇಶ್ವರಿ ದೇವಸ್ಥಾನ ಮಂಗಳೂರಿನಿಂದ ೨೦ ಕಿ. ಮೀ. ದೂರದಲ್ಲಿದೆ. ಸ್ಥಳೀಯ ಭಾಷೆಯಲ್ಲಿ ಹೂವಿನ ಪೂಜೆಯನ್ನು 'ಪೂತಪೂಜೆ' ಎಂದು ಕರೆಯುತ್ತಾರೆ.

೧೬. ದೇವರಿಗೆ ಹರಕೆ ಹೇಳಿಕೊಂಡವ ತನ್ನದೇ ತೂಕದ ಹರಕೆ ಹೇಳಿಕೊಂಡ ವಸ್ತುವಿನಲ್ಲಿ ತೂಕ ಮಾಡಿಸಿ ಅದಕ್ಕೆ ನಿಗದಿಪಡಿಸಿದ ಹಣವನ್ನು ಪಾವತಿಸುವ ಸಂಪ್ರದಾಯ.

೧೭. ಸುಭಾಷಿತ ರತ್ನ ಸಮುಚ್ಚಯ; ೨೦೦೫, 'ಸುಭಾಷಿತ ಮಂಜರಿ', ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು. ಪುಟ-೩೪೬.

೧೮. ಕವಿತಾ ಕೃಷ್ಣ; ೨೦೦೩, ಡಿ.ವಿ.ಜಿ.ಯವರ ಮಂಕು ತಿಮ್ಮನ ಕಗ್ಗ; ತನುಮನ ಪ್ರಕಾಶನ, ಪುಟ-೨೪.

೧೯. ತಿಪ್ಪೇರುದ್ರ ಸ್ವಾಮಿ ಎಚ್; ೨೦೦೭, ಕರ್ನಾಟಕ ಸಂಸ್ಕೃತಿ ಸಮೀಕ್ಷೆ, ಪುಟ - ೪೬೧.

೨೦. ೧೯೬೦ರ ದಶಕದಲ್ಲಿ ಬಿಡುಗಡೆಯಾದ 'ಭಲೇ ಬಸವ' ಚಲನಚಿತ್ರದಲ್ಲಿ ಈ ಹಾಡು ಕಾಣಿಸಿಕೊಂಡಿದೆ.

೨೧. Varadarajan and Raveendran; 1976, "Economics of Flower Marketing in Coimbatore City", Unpub. M.Sc. Dissertation, Tamilnadu Agricultural University, Coimbatore – P.18.

೨೨. Suryawamshi, S.D. and Kahage P.M.; 1979, Production and Marketing of Roses in Western Maharashtra, Indian Journal of Marketing, 10: PP 407-412.

೨೩. Patil, S.T and Hiremath, K.C.; 1985, 'Production and Marketing of Chrysanthemum in Dharwad District Karnataka State, - An Economic Analysis, Agricultural Research Bulletin No.16, University of Agricultural Sciences, Dharwad, P.14.

೨೪. Subrahmanyam, K.V; 1986, 'Economics of Production and Marketing of Chrysanthemum Flowers in Karnataka', Indian Journal of Horticulture, 43(3&4), PP: 281-286.

೨೫. Subrahmanyam, K.V.; 1986, 'Flower Marketing in Karnataka', Krishipet, 15(1): PP: 6-10.

೨೬. Subrahmanyam, K.V.; 1989, 'Economics of Production and Marketing of Jasmine in Kolar District, Karnataka, Division of Economics and Statistics, Indian Institute of Horticultural Research Bangalore.- PP: 32-38.

೨೭. Venugopala Mulleria; 1989, A study of Jasmine Economy in Dakshina Kannada District, Unpub Dissertation submitted to Mangalore University, PP: 19-22.

೨೮. Ramesh Kumar S.C.; 1989, 'Economics of Production and Investment in Jasmine Flowers in Madhurai District, Tamilnadu', Unpub M.Sc. Dissertation, U.A.S. Bangalore, PP: 20-21.

೨೯. Neeraja Devi K.; 1990, 'Economics of Production and Marketing of Kakada Flowers in Bangalore District of Karnataka State, Unpub. M.Sc. Dissertation, U.A.S. Bangalore, PP: 18-22.

೩೦. Jiyaulla, Chagaleru; 1993, Economics of Production and Marketing of Jasmine in Dharwad District, Karnataka, Unpub. M.Sc. Dissertation, U.P.S., Bangalore, PP: 19:21.

೩೧. Radhakrishna Rao,; 1994, 'Promoting Floriculture' Yojana 38(19) Oct. 31, 1994. P:12.

೧೨. Prakash J. and K.R. Bhandary; 1994, Floriculture Technology, Trades and Trends, Oxford and IBH Publishing Co. Pvt. Limited, Delhi, P: 47.

೧೩. Vikas Singhal; 1995, Handbook of Indian Agriculture, Vikas Publishing House Pvt. Ltd., New Delhi. P:113.

೧೪. Kaul, G.L. and N.K.Dadlani; 1995, Prospects of Floriculture in India, Horticulture Division, Dept. of Agriculture and Co-operation, GOI, Krishibhavan, New Delhi, P:63.

೧೫. Manjula N. and Belli R.B.; 1996, 'Profitable Cultivation of Crossandra in Dryland Areas,' Farmers and Parliament, 13(3) P: 13.

೧೬. Guledagudda, S.S.; 1996, Production and Marketing of Jasmine in Dharwad District, Karnataka, An Economic Analysis', Unpub M.Sc. Dissertation, U.A.S. Bangalore. P:7.

೧೭. Ramesh, G.R.; Economics of Production and Marketing of Crossandra Flowers in Chitradurga District, Karnataka, Unpub. M.Sc. Dissertation, U.A.S, Bangalore. P:11.

೧೮. Shivaraman.N.; 1998,'Sustainability Analysis of Commercial Floriculture – A comparison of High–Tech Field Rose Cultivation Around Bangalore, Unpub . M.Sc. Dissertation, U.A.S, Bangalore.

೩೯. Ajjan, N. and Raveendran; 2001, An Economic Analysis of Production and Marketing of Cut-Flowers in Nilagiri District, Tamilnad, Plant Horticulture Technology, 2(5).P:44.

೪೦. Vidyavathi.K; and D.R.G. Desai; 2001, An Economic Analysis of Floriculture Industry – A comparative Study of Bangalore and Pune Region, Floriculture Today, P.7-10.

೪೧. Debashish Sengupta and Rajkamal; 2010, "Floricultural Marketing in India, EXCEL Books, New Delhi, PP 3-6.

೪೨. Shyama Bhat N; 1998, "South Kanara 1799-1860 – A Study on Colonial Administration and Regional Response, Mittel Publisher, New Delhi, P-15.

೪೩. ೧೯೫೬ರ ನವಂಬರ್ ೧ ರಂದು ಭಾಷಾವಾರು ಪ್ರಾಂತ್ಯಗಳು ರಾಜ್ಯಗಳಾಗಿ ರೂಪುಗೊಂಡವು. ಉಡುಪಿ ಜಿಲ್ಲೆಯ ತಾಲೂಕುಗಳು – ಕುಂದಾಪುರ, ಉಡುಪಿ ಮತ್ತು ಕಾರ್ಕಳ. ದಕ್ಷಿಣ ಕನ್ನಡ ಜಿಲ್ಲೆಯ ತಾಲೂಕುಗಳು - ಮಂಗಳೂರು, ಬಂಟ್ವಾಳ, ಬೆಳ್ತಂಗಡಿ, ಪುತ್ತೂರು ಮತ್ತು ಸುಳ್ಯ.

೪೪. ಕುಂಬಳೆ ಚರ್ಚಿನ ಧರ್ಮಗುರುಗಳು 'ಮಲ್ಲಿಗೆ ಫಾದರ್' ಎಂದೇ ಪ್ರಖ್ಯಾತರಾಗಿರುವರು. ಕ್ಷೇತ್ರ ಅಧ್ಯಯನ ಕಾಲದಲ್ಲಿ ಸಂದರ್ಶನ ಮಾಡಿದ ಮುಡಿಪು, ವಿಟ್ಲ, ಕುಂಬಳೆ, ಚರ್ಚುಗಳ ಆಶ್ರಯದಲ್ಲಿ ಬೆಳೆಯಲಾಗುವ ಮಲ್ಲಿಗೆ ಕೃಷಿಯ ಬಗ್ಗೆ ಅಧ್ಯಾಯ ೪ ರಲ್ಲಿ ಚರ್ಚಿಸಲಾಗಿದೆ.

೪೫. ಶ್ರೀ ಕ್ಷೇತ್ರ ಧರ್ಮಸ್ಥಳ ಗ್ರಾಮೀಣಾಭಿವೃದ್ಧಿ ಯೋಜನೆಯು ದಕ್ಷಿಣ ಕನ್ನಡದಲ್ಲಿ ಕ್ರಿ.ಶ. ೧೯೯೦ ರಲ್ಲಿ ಪ್ರಾರಂಭವಾಯಿತು.

## ಅಧ್ಯಾಯ – ೨
# ಭಾರತದ ಆರ್ಥಿಕತೆಯಲ್ಲಿ ಪುಷ್ಪೋದ್ಯಮ

## ೨.೧. ಭಾರತದ ಕೃಷಿಯಲ್ಲಿ ಪುಷ್ಪೋದ್ಯಮ

ಜಾಗತೀಕರಣದ ಇಂದಿನ ದಿನಗಳಲ್ಲೂ ಭಾರತಕ್ಕೆ ಕೃಷಿ ಪ್ರಧಾನ ರಾಷ್ಟ್ರ ಎಂಬ ಹಣೆಪಟ್ಟಿಯಿಂದ ಕಳಚಿಕೊಳ್ಳಲು ಸಾಧ್ಯವಾಗಿಲ್ಲವೆನ್ನುವುದು ನಮ್ಮ ದೇಶದ ಆರ್ಥಿಕತೆಯಲ್ಲಿ ಕೃಷಿಯ ಮಹತ್ವವನ್ನು ಸೂಚಿಸುತ್ತದೆ. ನಮ್ಮ ದೇಶದ ಶೇ. ೬೭.೫ ಮಂದಿ ಕೃಷಿಯನ್ನು ಅವಲಂಬಿಸಿದ್ದು, ಒಟ್ಟು ದೇಶೀಯ ಉತ್ಪನ್ನದಲ್ಲಿ ಕೃಷಿಯ ಪಾಲು ಶೇ. ೧೭.೧ ಆಗಿರುವುದು ಕೃಷಿಯೇ ಆರ್ಥಿಕತೆಯ ಬೆನ್ನೆಲುಬು ಎಂಬ ಮಾತನ್ನು ನಿಜವಾಗಿಸಿದೆ.[೧] ಜಾಗತೀಕರಣ ಪ್ರಕ್ರಿಯೆಯಿಂದಾಗಿ ಅನೇಕ ಆರ್ಥಿಕತೆಗಳು ಕುಸಿತವನ್ನು ಕಂಡಿವೆ. ವಿಶ್ವದ ಮಹಾಬಲಾಢ್ಯ ರಾಷ್ಟ್ರ ಅಮೇರಿಕಾದ ಆರ್ಥಿಕ ವ್ಯವಸ್ಥೆ ಕುಸಿಯ ತೊಡಗಿದೆ. ಆದರೆ ಭಾರತದ ಆರ್ಥಿಕತೆಯನ್ನು ಅಂತಹ ಯಾವುದೇ ಸಮಸ್ಯೆ ತೀವ್ರತರವಾಗಿ ಬಾಧಿಸಿಲ್ಲ. ಇದಕ್ಕೆ ಭಾರತವು ಇಂದಿಗೂ ಕೃಷಿ ಪ್ರಧಾನ ಆರ್ಥಿಕತೆಯನ್ನು ಹೊಂದಿರುವುದು ಬಹು ಮುಖ್ಯ ಕಾರಣವಾಗಿದೆ.

ಕೃಷಿವಲಯದ ಬೆಳೆಗಳನ್ನು ಸ್ಥೂಲವಾಗಿ ಆಹಾರದ ಬೆಳೆಗಳು ಮತ್ತು ಆಹಾರೇತರ ಬೆಳೆಗಳು ಎಂದು ವಿಂಗಡಿಸಲಾಗುತ್ತದೆ. ಎಲ್ಲಾ ದೇಶಗಳ ಪರಿಸ್ಥಿತಿಯಂತೆ ಭಾರತದಲ್ಲೂ ಆಹಾರದ ಬೆಳೆಗಳಿಗಿಂತ ಹೆಚ್ಚಿನ ಪ್ರದೇಶವನ್ನು ಆಹಾರೇತರ ಬೆಳೆಗಳಿಗಾಗಿ ಬಳಸಲಾಗುತ್ತದೆ. ಆಹಾರದ ಬೆಳೆಗಳನ್ನು ಅನುರಕ್ಷಿಸುವುದು ಬಹಳ ಕಷ್ಟ. ಅವುಗಳ ಬೆಲೆಗಳಲ್ಲಿ ವಿಪರೀತ ಸ್ಥಿತ್ಯಂತರಗಳು ಆಗುತ್ತಿರುತ್ತವೆ. ಆಹಾರದ ಬೆಳೆಗಳಿಗೆ ತುಂಬಾ ಶ್ರಮದ ಅಗತ್ಯವಿದೆ. ಕೃಷಿ ಕಾರ್ಮಿಕರ ಕೊರತೆಯಿರುವ ಇಂದಿನ ದಿನಗಳಲ್ಲಿ ಶ್ರಮ ವೆಚ್ಚವು ತುಂಬಾ ಏರಿರುವುದರಿಂದ ಆಹಾರದ ಬೆಳೆಗಳನ್ನು ಬೆಳೆದು ಲಾಭಗಳಿಸುವುದು ಒಂದು ಸಾಹಸವೆನಿಸಿದೆ. ಆದುದರಿಂದ ರೈತರು ತೋಟಗಾರಿಕಾ ಬೆಳೆಗಳತ್ತ ಸಹಜವಾಗಿ ವಾಲುತ್ತಿದ್ದಾರೆ.[೨]

ಪುಷ್ಪ ಬೆಳೆಯು ತೋಟಗಾರಿಕಾ ಬೆಳೆಗಳ ಒಂದು ಭಾಗವಾಗಿ ದೇಶದ ಆರ್ಥಿಕತೆಯಲ್ಲಿ ತನ್ನದೇ ಆದ ಸ್ಥಾನಮಾನವನ್ನು ಪಡೆಯಲು ಯತ್ನಿಸುತ್ತಿದೆ. ಹಿಂದೆ ರೈತರು ಸ್ವಬಳಕೆಗಾಗಿ ಹೂಗಳನ್ನು ಬೆಳೆಯುತ್ತಿದ್ದರು. ಅವು ದೇವರ ಪೂಜೆಗೆ, ಧಾರ್ಮಿಕ ವಿಧಿವಿಧಾನಗಳಿಗೆ ಮತ್ತು ಸ್ತ್ರೀಯರ ಮುಡಿಯನ್ನು ಅಲಂಕರಿಸಲು ಬಳಕೆಯಾಗುತ್ತಿದ್ದವು. ಕ್ರಿ.ಶ.

೧೯೭೦ರ ದಶಕದಿಂದೀಚೆಗೆ ಪರಿಸ್ಥಿತಿ ಬದಲಾಯಿತು. ಪುಷ್ಪಗಳಿಗೆ ಆಂತರಿಕವಾಗಿ ಮಾತ್ರವಲ್ಲದೆ ವಿದೇಶಗಳಿಂದಲೂ ಬೇಡಿಕೆ ಬರಲು ಆರಂಭವಾಯಿತು. ಗುಲಾಬಿ ಪುಷ್ಪವು ಪ್ರೇಮದ ಸಂಕೇತವೆನಿಸಿ ಅದರ ಬೇಡಿಕೆ ಹೆಚ್ಚಾಯಿತು. ಗುಲಾಬಿ ಮತ್ತು ಮಲ್ಲಿಗೆ ಹೂಗಳು ಸುಗಂಧ ದ್ರವ್ಯ (Perfume) ಉತ್ಪಾದನೆಯ ಕಚ್ಚಾ ಸರಕುಗಳಾದವು. ಸುಗಂಧ ದ್ರವ್ಯಗಳು ಸೌಂದರ್ಯವರ್ಧಕಗಳಾದುದರಿಂದ ಅವುಗಳು ಬೇಡಿಕೆಯ ನಿಯಮಕ್ಕೆ ಅಪವಾದಗಳಾಗಿವೆ. ಅವುಗಳ ಬೆಲೆ ಏರಿದರೂ ಬೇಡಿಕೆ ಕುಗ್ಗದ ಕಾರಣ ಪುಷ್ಪಗಳ ಬೇಡಿಕೆ ಹೆಚ್ಚಾಯಿತು. ಬೇಡಿಕೆಗೆ ಅನುಗುಣವಾಗಿ ಪೂರೈಕೆಯನ್ನು ಹೆಚ್ಚಿಸಬೇಕಾದ ಅನಿವಾರ್ಯತೆ ಉಂಟಾಗಿ ರೈತರು ಪುಷ್ಪ ಬೆಳೆಯತ್ತ ಗಮನಹರಿಸಿದರು. ಅದು ಲಾಭದಾಯಕವೆನಿಸಿ ಪುಷ್ಪೋದ್ಯಮದ ಬೆಳವಣಿಗೆಗೆ ಕಾರಣವಾಯಿತು.

ಸರಕಾರದ ನಿಯಂತ್ರಣವಿಲ್ಲದ ಮುಕ್ತ ವ್ಯವಸ್ಥೆಯಲ್ಲಿ ಬೇಡಿಕೆ ಮತ್ತು ಪೂರೈಕೆಗಳು ಸ್ವಯಂ ನಿರ್ವಹಣೆಗೊಳಪಟ್ಟು ಬೆಲೆಯು ಸ್ವಹಿತವೆಂಬ (Self Interest) ಕಾಣದ ಕೈಯಿಂದ (Invisible Hand) ನಿರ್ಧಾರವಾಗುತ್ತದೆಂದು ಪರಿಪೂರ್ಣ ಪೈಪೋಟಿ (Perfect Competition)ಸಿದ್ಧಾಂತವು ಹೇಳುತ್ತದೆ. ಪುಷ್ಪಗಳ ಬೆಲೆ ನಿರ್ಧಾರವಾಗುವುದು ಅವುಗಳ ಬೇಡಿಕೆ ಮತ್ತು ಪೂರೈಕೆಗಳಿಂದ. ಪುಷ್ಪಗಳ ಉಪಯೋಗವು ಅವುಗಳ ಬೇಡಿಕೆಗೆ ಕಾರಣವಾದರೆ ಉತ್ಪಾದನೆಯು ಪೂರೈಕೆಗೆ ಕಾರಣವಾಗಿರುತ್ತದೆ. ಎಲ್ಲಾ ಕೃಷಿ ಉತ್ಪನ್ನಗಳಂತೆ ಭಾರತದಲ್ಲಿ ಪುಷ್ಪ ಬೆಳೆಯು ನೈಸರ್ಗಿಕ ಅಂಶಗಳ ಪ್ರಭಾವಕ್ಕೆ ಒಳಪಟ್ಟಿದೆ. ಆದರೂ ಪುಷ್ಪೋದ್ಯಮ ತೀವ್ರ ಗತಿಯಲ್ಲಿ ಬೆಳವಣಿಗೆಯನ್ನು ಸಾಧಿಸುತ್ತಿದೆ ಎನ್ನುವುದಕ್ಕೆ ಸಾಕಷ್ಟು ಸಾಕ್ಷ್ಯಾಧಾರಗಳು ದೊರೆಯುತ್ತವೆ.

ಭಾರತದ ಕೃಷಿ ಕ್ಷೇತ್ರದಲ್ಲಿ ಪುಷ್ಪ ಬೆಳೆ ತನ್ನದೇ ಆದ ವಿಶಿಷ್ಟ ಛಾಪನ್ನು ಒತ್ತಲು ಕೆಲವು ವಿಶಿಷ್ಟ ಕಾರಣಗಳಿವೆ. ಭಾರತೀಯರಿಗೆ ತಡೆಯಲಸಾಧ್ಯವಾದ ಪಿತ್ರಾರ್ಜಿತ ಆಸ್ತಿಯ ಮೋಹವಿದೆ. ಅದು ಭೂಮಿಯ ಛಿದ್ರೀಕರಣಕ್ಕೆ ಕಾರಣವಾಗಿದೆ. ಇಂದಿನ ಪರಿಸ್ಥಿತಿಯಲ್ಲಿ ಭೂಹಿಡುವಳಿಗಳ ಕ್ರೋಢೀಕರಣವಾಗಲೀ, ಸಹಕಾರಿ ಕೃಷಿಯ ಅನುಷ್ಠಾನವಾಗಲೀ ಸಾಧ್ಯವೇ ಆಗದ ಸಂಗತಿಯಾಗಿದೆ. ನಮ್ಮ ದೇಶದಲ್ಲಿ ಅತಿ ಸಣ್ಣ ಹಿಡುವಳಿಗಳದ್ದೇ ಪ್ರಾಧಾನ್ಯ. ಇವನ್ನು ಅರ್ಥಶಾಸ್ತ್ರಜ್ಞರು ಕರವಸ್ತ್ರ ಹಿಡುವಳಿ (Kerchief Holding) ಎಂದು ಕರೆಯುತ್ತಾರೆ. ಗಾತ್ರ ತೀರಾ ಕಡಿಮೆಯಿರುವುದರಿಂದ ಭಾರತದ ಹಿಡುವಳಿಗಳು ಅನಾರ್ಥಿಕವಾಗಿದ್ದು, ಅವುಗಳಿಂದ ಬರುವ ಇಳುವರಿ, ಇತರ ದೇಶಗಳೊಡನೆ ಹೋಲಿಸಿದಾಗ ತೀರಾ ಕಡಿಮೆಯಿರುವುದು ಕಂಡುಬರುತ್ತದೆ. ಬಂಡವಾಳದ ಕೊರತೆಯಿಂದಾಗಿ ಬಡ ಭಾರತೀಯ ರೈತರು ತೀಕ್ಷ್ಣ ವ್ಯವಸಾಯವನ್ನು (Intensive Cultivation) ನಡೆಸುವ

ಸ್ಥಿತಿಯಲ್ಲಿಲ್ಲ. ಭೂಮಿಯ ಬೆಲೆ ವಿಪರೀತ ಏರಿರುವುದರಿಂದ ಅವರು ಹೊಸ ಭೂಮಿಯನ್ನು ಕೊಂಡು ವ್ಯಾಪಕ ವ್ಯವಸಾಯವನ್ನು (Extensive Cultivation) ಕೂಡಾ ನಡೆಸುವ ಸಾಮರ್ಥ್ಯವನ್ನು ಹೊಂದಿಲ್ಲ. ಆದುದರಿಂದ ಅವರು ಇರುವ ತುಂಡು ಭೂಮಿಯಲ್ಲಿ ಲಾಭದಾಯಕವಾದ ಬೆಳೆಗಳನ್ನು ಬೆಳೆಯುವ ಬಗ್ಗೆ ಹೆಚ್ಚು ಯೋಚಿಸುವುದು ಅನಿವಾರ್ಯವಾಗಿದೆ. ಅಂತಹ ಯೋಚನೆ ಬಹುತೇಕ ರೈತರನ್ನು ಅಂತಿಮವಾಗಿ ಸೆಳೆದದ್ದು ಪುಷ್ಪೋದ್ಯಮದ ಕಡೆಗೆ.

ಪುಷ್ಪ ವ್ಯವಸಾಯವು ಪುಷ್ಪೋದ್ಯಮವಾಗಿ ಪರಿವರ್ತನೆಗೊಳ್ಳಲು ಅನುಭೋಗದ ಹೆಚ್ಚಳ ಪ್ರಮುಖ ಕಾರಣವಾಗಿದೆ. ಆಂತರಿಕ ಬೇಡಿಕೆ (Internal Demand) ಮತ್ತು ಬಾಹ್ಯ ಬೇಡಿಕೆಯ (External demand) ಹೆಚ್ಚಳದಿಂದಾಗಿ ಅನುಭೋಗದಲ್ಲಿ ಏರಿಕೆ ಉಂಟಾಗಿದೆ. ಇಂದು ಭಾರತದ ಪುಷ್ಪೋದ್ಯಮವು ದೇಶೀಯ ಮಾರುಕಟ್ಟೆಯನ್ನು ಲಂಘಿಸಿ ವಿಶ್ವ ಮಾರುಕಟೆಗೆ ವಿಸ್ತರಿಸಿದೆ. ಉತ್ಪಾದನೆ, ಸಂಸ್ಕರಣೆ, ಸಾಗಾಟ ಮತ್ತು ಮಾರಾಟ ಸಂಬಂಧೀ ಚಟುವಟಿಕೆಗಳು ಪುಷ್ಪೋದ್ಯಮದಲ್ಲಿ ಉದ್ಯೋಗಾವಕಾಶಗಳನ್ನು ಹೆಚ್ಚಿಸಿವೆ. ಬಡ ರೈತರ ಬಾಳನ್ನು ಬೆಳಗುವ ಆಶಾಕಿರಣವಾಗಿ ಪುಷ್ಪೋದ್ಯಮ ತನ್ನ ಮಹತ್ವವನ್ನು ಹೆಚ್ಚಿಸಿಕೊಳ್ಳುತ್ತಿದೆ.

ಪುಷ್ಪೋದ್ಯಮವೆಂದರೆ ಪುಷ್ಪ ಬೆಳೆ, ಬೆಳೆಸುವ ಪುಷ್ಪಗಳ ಮತ್ತು ಪುಷ್ಪ ಉತ್ಪನ್ನಗಳ ಹಾಗೂ ಅಲಂಕಾರಿಕ ಗಿಡಗಳ ಮಾರಾಟದ ಚಟುವಟಿಕೆಯಾಗಿದೆ.[೩] ಇದು ಬಿಡಿ ಹೂಗಳು, (Loose Flowers), ತುಂಡರಿಸಿದ ಹೂಗಳು (Cut Flowers), ಅಲಂಕಾರಿಕ ಹೂಚಟ್ಟಿಗಳು, ಹೂ ಗುಚ್ಛಗಳು, ಮಾಲೆಗಳು, ಗಿಡಗಳ ಗೆಲ್ಲು, ಚಿಗುರು, ಬೇರು, ಗೆಡ್ಡೆ, ಬಿಳುಚಿಸಲ್ಪಟ್ಟ (Bleached) ಮತ್ತು ಒಣಗಿದ (Dried) ಹೂಗಳು ಹಾಗೂ ಹೂವಿನ ಸುಗಂಧ ದ್ರವ್ಯಕ್ಕೆ ಸಂಬಂಧಿಸಿದ ಉತ್ಪಾದನೆ, ಸಂಸ್ಕರಣೆ, ಶೇಖರಣೆ, ಸಾಗಾಟ ಮತ್ತು ಮಾರಾಟದ ಚಟುವಟಿಕೆಗಳಾಗಿವೆ. ಪುಷ್ಪೋದ್ಯಮದಲ್ಲಿ ಬೆಳೆಸುವ ಹಾಗೂ ಬಳಸುವ ಪುಷ್ಪಗಳು ಹಾಗೂ ಸಸ್ಯಗಳನ್ನು ಭಾರತ ಸರಕಾರವು ಐದು ಗುಂಪುಗಳಾಗಿ ವಿಂಗಡಿಸಿರುತ್ತದೆ.[೪]

- ಚಿಗುರುಗಳು, ಗೆಡ್ಡೆಗಳು ಮತ್ತು ಮೊಗ್ಗು, ಗುಲಾಬಿ ಬೇರುಗಳು (Bulbs, Tubes and Tuberose Roots): ಈ ವಿಭಾಗದಲ್ಲಿ ಹೂಚಟ್ಟಿಗಳಲ್ಲಿ ಮತ್ತು ಪೆಟ್ಟಿಗೆಗಳಲ್ಲಿ ಅಥವಾ ಪಾತ್ರೆಗಳಲ್ಲಿ ಬೆಳೆಸಲಾಗುವ ಅಲಂಕಾರಿಕ ಗಿಡಗಳನ್ನು, ಹೂಗಳನ್ನು ಮತ್ತು ಹೂವಿನ ಉತ್ಪನ್ನಗಳನ್ನು ಸೇರಿಸಲಾಗಿದೆ.

- ಜೀವಂತ ಗಿಡಗಳು (Live Plants): ಮನೆ, ಕಟ್ಟಡ ಮತ್ತು ಕಛೇರಿಗಳಲ್ಲಿ ಶಾಶ್ವತ ಅಲಂಕಾರಕ್ಕಾಗಿ ಬಳಸುವ ಗಿಡಗಳು ಈ ಗುಂಪಿನಲ್ಲಿ ಸೇರಿವೆ. ಇವುಗಳು ಪೂರ್ಣರೂಪದ ಗಿಡಗಳಾಗಿದ್ದು, ಸೂಕ್ತ ನಿರ್ವಹಣೆಯಿಂದ ಶಾಶ್ವತ ಅಥವಾ ಸುದೀರ್ಘಕಾಲದ ಅಲಂಕಾರಕ್ಕೆ ಬಳಕೆಯಾಗುತ್ತವೆ.

- ತುಂಡರಿಸಿದ ಹೂಗಳು (Cut Flowers): ಗೆಲ್ಲು ಸಹಿತ ತುಂಡರಿಸಿದ ಹೂಗಳು ಮತ್ತು ಮೊಗ್ಗುಗಳು ಇದರಲ್ಲಿ ಒಳಗೊಂಡಿವೆ. ಇವುಗಳು ಗೃಹ ಅಲಂಕಾರಕ್ಕಾಗಿ, ಹೂಗುಚ್ಚಗಳಾಗಿ, ಮಾಲೆಗಳಾಗಿ ಮತ್ತು ಬಿಡಿ ಹೂಗಳಾಗಿ ಬಳಕೆಯಾಗುತ್ತವೆ. ಗುಲಾಬಿ, ಸೇವಂತಿಗೆ, ಸೀತಾಳೆ, ಗ್ಲೇಡಿಯೋಲಸ್, ಕಾರ್ನೇಶನ್ಸ್ ಮೊದಲಾದವುಗಳು ಈ ಸಾಲಿಗೆ ಸೇರುವ ಪ್ರಧಾನ ಪುಷ್ಪಗಳಾಗಿವೆ.

- ತುಂಡರಿಸಿದ ಕವಲುಗಳು (Cut Foliage) : ಅಲಂಕಾರಕ್ಕಾಗಿ ಬಳಸಲಾಗುವ ಕವಲುಗಳು, ಹುಲ್ಲು ಮತ್ತು ಎಲೆಗಳು ಈ ಗುಂಪಿನಲ್ಲಿ ಒಳಗೊಂಡಿವೆ.

- ಇತರ: ಉಳಿದ ಎಲ್ಲಾ ಹೂಗಳು, ಒಣಪುಷ್ಪಗಳು ಮತ್ತು ಪುಷ್ಪೋದ್ಯಮಕ್ಕೆ ಬಳಕೆಯಾಗುವ ಸಸ್ಯ ಭಾಗಗಳನ್ನು ಈ ವಿಭಾಗದಲ್ಲಿ ಸೇರಿಸಲಾಗಿದೆ.

## ೨.೨ ಭಾರತದ ಪುಷ್ಪವೈವಿಧ್ಯ

ಭಾರತ ಭೌಗೋಳಿಕವಾಗಿ ಅನೇಕ ವೈಶಿಷ್ಟತೆಗಳನ್ನು ಹೊಂದಿರುವ ದೇಶ. ನೈಸರ್ಗಿಕವಾಗಿ ಭಾರತದ ನೆಲೆ, ವಿಸ್ತೀರ್ಣ, ಹವಾಮಾನ, ಮಳೆ, ಮಣ್ಣಿನ ವಿಧಗಳು ಮತ್ತು ಭೂರಚನೆ ಅಸಂಖ್ಯಾತ ಸಸ್ಯರಾಶಿಗಳನ್ನು ಸೃಷ್ಟಿಸಿರುತ್ತದೆ. ಈ ಕಾರಣದಿಂದಾಗಿ ಭಾರತದಲ್ಲಿ ಅನೇಕ ಸಸ್ಯ ಮತ್ತು ಪುಷ್ಪ ವೈವಿಧ್ಯ ಕಾಣಸಿಗುತ್ತದೆ. ಅಖಂಡ ಭಾರತವನ್ನು ಒಂದು ಪ್ರಯೋಗ ಶಾಲೆ ಹಾಗೂ ವಿಶಾಲವಾದ ವಸ್ತು ಪ್ರದರ್ಶನಾಲಯ ಎಂಬುದಾಗಿ ವರ್ಣಿಸಲಾಗಿದೆ.[೫] ಪುಷ್ಪ ಸಂಕುಲಗಳು, ಫಲವತ್ತಾದ ಮಣ್ಣು, ಕೃಷಿ ಆಧರಿತ ಆರ್ಥಿಕ ವ್ಯವಸ್ಥೆ, ಅಗ್ಗದ ಗ್ರಾಮೀಣ ಶ್ರಮ, ಉತ್ತಮ ಹವಾಮಾನ, ಭಾರತೀಯರ ಪುಷ್ಪ ಪ್ರೀತಿ, ಅಂತಾರಾಷ್ಟ್ರೀಯ ಬೇಡಿಕೆ, ಸರಕಾರದ ಉತ್ತೇಜನ ಇತ್ಯಾದಿಗಳಿಂದ ಭಾರತದಲ್ಲಿ ಪುಷ್ಪೋದ್ಯಮ ಪ್ರಗತಿ ಪಥದಲ್ಲಿ ಸಾಗುತ್ತಿದೆ.

ಭಾರತದಲ್ಲಿ ವೈವಿಧ್ಯಪೂರ್ಣವಾದ ಪುಷ್ಪಗಳನ್ನು ಬೆಳೆಯಲಾಗುತ್ತದೆ. ಭಾರತದ ಪುಷ್ಪ ಸಂಕುಲಗಳನ್ನು ಹಲವು ರೀತಿಯಲ್ಲಿ ವರ್ಗೀಕರಿಸಲಾಗಿದೆ. ಪುಷ್ಪಗಳ ಬಾಳಿಕೆ, ಬಳಕೆ, ಹೂಬಿಡುವ ಕಾಲ, ಉತ್ಪಾದನಾ ವಿಧಾನ ಮೊದಲಾದ ಅಂಶಗಳನ್ನು ಆಧರಿಸಿ ಪುಷ್ಪಗಳನ್ನು ಎರಡು ಗುಂಪುಗಳಲ್ಲಿ ವಿಂಗಡಿಸಲಾಗಿದೆ.[೬]

ಹೂಬಿಡುವ ಕಾಲ ಮತ್ತು ಆವರ್ತನಕ್ಕೆ ಸಂಬಂಧಿಸಿದಂತೆ ಸದಾ ಹೂಬಿಡುವ ಮತ್ತು ಸದಾ ಹೂಬಿಡದ ಪುಷ್ಪಗಳೆಂಬ ಎರಡು ತರದ ಪುಷ್ಪ ಪ್ರಭೇದಗಳಿವೆ. ಕೆಲವು ಪ್ರಭೇದಗಳ ಹೂಗಿಡಗಳು ನಿರ್ದಿಷ್ಟ ಕಾಲದಲ್ಲಿ ಮಾತ್ರ ಹೂ ಬಿಡುತ್ತವೆ. ಇಂತಹ ಗಿಡಗಳು ಅಲ್ಪಾಯುಷಿಗಳಾಗಿದ್ದು, ವರ್ಷದ ನಿರ್ದಿಷ್ಟ ಋತುಮಾನದಲ್ಲಿ ಧಾರಾಳ ಹೂಬಿಟ್ಟು ಅಲ್ಪ ಕಾಲದಲ್ಲಿ ತಮ್ಮ ಉತ್ಪಾದನಾ ಸಾಮರ್ಥ್ಯವನ್ನು ಕಳಕೊಳ್ಳುತ್ತವೆ. ವರ್ಷದ ಕೆಲವು ತಿಂಗಳುಗಳಲ್ಲಿ ಈ ಪುಷ್ಪಗಳು ತೀರಾ ವಿರಳವಾದರೆ ಇನ್ನಿತರ ತಿಂಗಳುಗಳಲ್ಲಿ ಧಾರಾಳವಾಗಿ ಲಭಿಸುತ್ತವೆ. ಚೆಂಡುಮಲ್ಲಿಗೆ, ಸೇವಂತಿಗೆ, ಗ್ಲಾಡಿಯೊಲಸ್, ಆಸ್ಟರ್ ಮೊದಲಾದವುಗಳು ಈ ವರ್ಗಕ್ಕೆ ಸೇರಿದ ಪುಷ್ಪ ಪ್ರಭೇದಗಳಾಗಿವೆ.

ಒಂದು ವರ್ಷಕ್ಕಿಂತಲೂ ಅಧಿಕ ಕಾಲ ಬಾಳುವ ಹೂವಿನ ತಳಿಗಳು ಸದಾ ಹೂಬಿಡುವ (Perennial) ಸಸ್ಯಗಳ ಪ್ರಭೇದಕ್ಕೆ ಸೇರಿವೆ. ಅವುಗಳ ಆಯುಷ್ಯವು ಸುಮಾರು ಎರಡರಿಂದ ಹೆಚ್ಚು ವರ್ಷಗಳು. ಮೊಗ್ಗು ಗುಲಾಬಿ ಎರಡು ವರ್ಷಗಳ ಕಾಲ ಹೂ ನೀಡಬಲ್ಲುದು. ಕನಕಾಂಬರ ಸುಮಾರು ೫ ವರ್ಷಗಳ ಆಯುಷ್ಯವನ್ನು ಹೊಂದಿದ್ದು, ಸದಾ ಹೂ ಬಿಡುತ್ತದೆ. ಮುತ್ತುಮಲ್ಲಿಗೆ, ಗುಂಡು ಮಲ್ಲಿಗೆ, ಮಂಗಳೂರು ಮಲ್ಲಿಗೆಯಂಥ ಮಲ್ಲಿಗೆ ತಳಿಗಳು ಸುಮಾರು ಹತ್ತು ವರ್ಷಗಳ ಕಾಲ ಚೆನ್ನಾಗಿ ಹೂ ಬಿಡುತ್ತವೆ. ಗುಲಾಬಿ ಗಿಡ ಸುಮಾರು ೮ ವರ್ಷಗಳ ಕಾಲ ನಿರಂತರ ಹೂ ನೀಡಬಲ್ಲುದು.

ಪುಷ್ಪಗಳ ಬಳಕೆಯ ಉದ್ದೇಶ, ಉತ್ಪಾದನಾ ವಿಧಾನ ಮತ್ತು ಬಾಳಿಕೆಗೆ ಸಂಬಂಧಿಸಿದಂತೆ ಸಾಂಪ್ರದಾಯಿಕ ಹೂಗಳು ಮತ್ತು ಅಸಾಂಪ್ರದಾಯಿಕ ಹೂಗಳೆಂದು ವರ್ಗೀಕರಿಸಲಾಗಿದೆ.[೭]

ಸಾಂಪ್ರದಾಯಿಕ ಹೂಗಳು ತೆರೆದ ಹೊಲದಲ್ಲಿ ಬೆಳೆಯಲಾಗುವ ಪರಂಪರಾಗತವಾಗಿ ಹಿಂದಿನಿಂದಲೂ ಬೆಳೆಯುತ್ತಾ ಬಂದಿರುವ ಮಲ್ಲಿಗೆ, ಸೇವಂತಿಗೆ, ಚೆಂಡುಮಲ್ಲಿಗೆ, ಕನಕಾಂಬರ, ದೇಶೀಯ ಗುಲಾಬಿ ಮೊದಲಾದವುಗಳು.[೮] ಇವುಗಳ ಉತ್ಪಾದನೆಗೆ ಆಧುನಿಕ ತಂತ್ರಜ್ಞಾನದ ಅಗತ್ಯವಿರುವುದಿಲ್ಲ. ಲಾಭದ ದರ, ಬಂಡವಾಳ ಹೂಡಿಕೆ ಮತ್ತು ಕಷ್ಟನಷ್ಟಗಳು ಈ ಪುಷ್ಪ ಬೆಳೆಯಲ್ಲಿ ತೀರಾ ಕಡಿಮೆ. ಕೇಶ ಶೃಂಗಾರ, ಧಾರ್ಮಿಕ ಕಾರ್ಯಕ್ರಮಗಳು, ಸಾರ್ವಜನಿಕ ಹಬ್ಬ ಮತ್ತು ಸಮಾರಂಭಗಳಲ್ಲಿ ಅಲಂಕಾರಕ್ಕಾಗಿ ಈ ಪುಷ್ಪಗಳು ಬಳಕೆಯಾಗುತ್ತವೆ. ಈ ಹೂಗಳಿಗೆ ದೇಶೀಯ ಮಟ್ಟದಲ್ಲಿ

ವಿಶೇಷ ಬೇಡಿಕೆಯಿರುತ್ತದೆ. ಈ ಹೂಗಳ ಜೀವನಾವಧಿಯು ಅಸಾಂಪ್ರದಾಯಿಕ ಅಥವಾ ಆಧುನಿಕ ಹೂಗಳಿಗಿಂತ ಕಡಿಮೆ. ಭಾರತದ ಒಟ್ಟು ಪುಷ್ಪ ಉತ್ಪಾದನೆಯಲ್ಲಿ ಈ ಹೂಗಳ ಪಾಲು ಶೇ. ೬೭.[೯] ಈ ಪುಷ್ಪಗಳ ಉತ್ಪಾದನಾ ಚಿಂಬಕದಲ್ಲಿ ಮಾನವ ಶ್ರಮ ಸಂಯೋಜನೆಯು ಅಧಿಕವಾಗಿದೆ.

ಆಧುನಿಕ ಪುಷ್ಪಗಳ ಸಾಲಿನಲ್ಲಿ ಪ್ರಮುಖವಾದವುಗಳು ಅಂಥೂರಿಯಂ (Anthurium), ಜರ್ಬೇರ (Gerbera), ಕಾರ್ನೇಶನ್ಸ್ (Carnations), ಸೀತಾಳೆ (Orchids) ಬ್ರಿಟಿಷ್ ಗುಲಾಬಿ, ಬರ್ಡ್ ಆಫ್ ಪ್ಯಾರಡೈಸ್ (Bird of Paradise), ಸ್ಟಾಟಿಸ್(Statice), ಕ್ಯಾಲಾ ಲಿಲ್ಲಿ (Calla Lilly) ಗೋಲ್ಡನ್ ರಾಡ್(Golden Rod) ಮೊದಲಾದವುಗಳು.[೧೦] ದೇಶದ ಪುಷ್ಪ ಉತ್ಪಾದನೆಯಲ್ಲಿ ಇವುಗಳ ಪಾಲು ಶೇ.೩೩ ಆಗಿದ್ದರೂ, ವಿದೇಶಿ ವಿನಿಮಯಗಳಿಕೆಯಲ್ಲಿ ಇವುಗಳ ಪಾಲು ಶೇ. ೯೦ ಆಗಿರುವುದು ಇವುಗಳ ಬೆಳೆ ಎಷ್ಟು ಲಾಭದಾಯಕ ಎನ್ನುವುದನ್ನು ತಿಳಿಸುತ್ತದೆ. ಈ ಹೂಗಳನ್ನು ಹಸಿರು ಮನೆಯಡಿ ನಿಯಂತ್ರಿತ ಹವಾಮಾನದಲ್ಲಿ ಬೆಳೆಸಲಾಗುತ್ತದೆ. ಇವುಗಳ ಪ್ರಮಾಣವನ್ನು ಎಣಿಕೆಯ ರೂಪದಲ್ಲಿ ಮಾಪನ ಮಾಡಲಾಗುತ್ತಿದ್ದು, ಈ ಹೂಗಳು ನೀಳವಾದ ಗೆಲ್ಲುಗಳ ಸಮೇತವಾಗಿ ಕತ್ತರಿಸಲ್ಪಡುತ್ತವೆ. ಪ್ರೇಮಿಗಳ ದಿನಾಚರಣೆ (ವಾಲೆಂಟೈನ್ ಡೇ), ಜನ್ಮದಿನಾಚರಣೆ (ಬರ್ತ್‌ಡೇ) ಮತ್ತು ಕ್ರಿಸ್‌ಮಸ್ ಹಬ್ಬದ ಆಚರಣೆ ಸಂದರ್ಭಗಳಲ್ಲಿ ವಿದೇಶಗಳಲ್ಲಿ ಈ ಹೂಗಳನ್ನು ವ್ಯಾಪಕವಾಗಿ ಬಳಸಲಾಗುತ್ತದೆ. ಈ ಹೂಗಳ ಉತ್ಪಾದನೆಗೆ ಹೆಚ್ಚು ಬಂಡವಾಳದ ಅಗತ್ಯವಿದೆ. ಅಧಿಕ ತಂತ್ರಜ್ಞಾನ ಮತ್ತು ಬಂಡವಾಳವನ್ನು ಅವಲಂಬಿಸಿರುವ ಈ ಪುಷ್ಪ ವ್ಯವಸಾಯವು ಗ್ರಾಮೀಣ ಪ್ರದೇಶದ ಸಾಮಾನ್ಯ ರೈತನಿಗೆ ಸುಲಭದಲ್ಲಿ ನಿರ್ವಹಿಸಲಾಗದ ಉದ್ಯಮವಾಗಿದೆ. ಹಾಗಾಗಿ ಈ ಉದ್ಯಮವು ಕೆಲವು ನಗರಗಳನ್ನು ಕೇಂದ್ರೀಕರಿಸಿ, ಬೃಹತ್ ಕಂಪನಿಗಳು ಮತ್ತು ಬಹುರಾಷ್ಟ್ರೀಯ ಸಹಯೋಗದಿಂದ ನಡೆಸಲಾಗುತ್ತದೆ. ಬೆಂಗಳೂರು ನಗರದ ಹೊರವಲಯ, ಪುಣೆ ಮತ್ತು ನಾಸಿಕ್ ನಗರಗಳಲ್ಲಿ ಆಧುನಿಕ ಪುಷ್ಪ ಉದ್ಯಮವನ್ನು ಅಭಿವೃದ್ಧಿಪಡಿಸುವ ಪ್ರಯತ್ನ ಅಂತಾರಾಷ್ಟ್ರೀಯ ಸಹಯೋಗದಲ್ಲಿ ಪ್ರಾರಂಭವಾಗಿದ್ದು, ಅದು ಯಶಸ್ವಿನತ್ತ ದಾಪುಗಾಲು ಹಾಕುತ್ತಿದೆ.

ಸಾಂಪ್ರದಾಯಿಕ ಮತ್ತು ಆಧುನಿಕ ಪುಷ್ಪಗಳ ಉತ್ಪಾದನಾ ವೆಚ್ಚಕ್ಕೆ ಸಂಬಂಧಿಸಿದ ಕೆಲವು ಅಧ್ಯಯನಗಳು ಈಗಾಗಲೇ ನಡೆದಿರುತ್ತವೆ. ಕ್ರಿ. ಶ. ೨೦೦೨ರಲ್ಲಿ ನಡೆಸಿದ ಅಧ್ಯಯನವೊಂದರಲ್ಲಿ[೧೧] ಗುಲಾಬಿ ಕೃಷಿಯನ್ನು ತೆರೆದ ಬಯಲಿನಲ್ಲಿ ಉತ್ಪಾದಿಸಿದಾಗ ತಗಲಿದ ಮಾನವ ವೆಚ್ಚ ದಿನವೊಂದಕ್ಕೆ ಸರಾಸರಿ ರೂ. ೨೧೭ ಆಗಿದ್ದು, ಆಧುನಿಕ ಕೃಷಿ ವಿಧಾನದಲ್ಲಿ ತಗಲಿದ ಉತ್ಪಾದನಾ ಶ್ರಮ ವೆಚ್ಚವು ದಿನವೊಂದಕ್ಕೆ ಸರಾಸರಿ ರೂ. ೧,೮೮೬

ಎಂದು ತಿಳಿದು ಬಂದಿದೆ. ಗುಲಾಬಿ ಹೂವಿನ ಕೃಷಿಯೊಂದಿಗೆ ಇತರ ಸಾಂಪ್ರದಾಯಿಕ ಹೂಗಳ ಉತ್ಪಾದನಾ ಮಾನವ ಶ್ರಮ ವೆಚ್ಚವು ಕೇವಲ ರೂ. ೮೭ ಆಗಿತ್ತು. ಅದೇ ರೀತಿಯಲ್ಲಿ ಆಧುನಿಕ ಹೈಟೆಕ್ ಪುಷ್ಪ ಉದ್ಯಮದ ಸ್ಥಾಪನಾ ವೆಚ್ಚವು ಅತ್ಯಂತ ಹೆಚ್ಚಾಗಿರುವುದು ಕೆಲವು ಅಧ್ಯಯನಗಳಿಂದ ತಿಳಿದು ಬರುತ್ತದೆ. ಕ್ರಿ.ಶ. ೨೦೦೧ ರಲ್ಲಿ ಸುಧಾ[೧೨] ನಡೆಸಿದ ಅಧ್ಯಯನದಲ್ಲಿ ಗುಲಾಬಿ ಕೃಷಿಯ ಸ್ಥಾಪನಾ ವೆಚ್ಚ ಹೆಕ್ಟೇರಿಗೆ ರೂ. ೨.೨೫ ಕೋಟಿ ಮತ್ತು ವಾರ್ಷಿಕ ಸರಾಸರಿ ವೆಚ್ಚವು ಹೆಕ್ಟೇರ್ ಒಂದಕ್ಕೆ ರೂ. ೬೭.೨೧ ಲಕ್ಷ ಎಂದು ದಾಖಲಾಗಿದೆ. ಆಧುನಿಕ ಹೈಟೆಕ್ ಪುಷ್ಪಗಳ ಬಗ್ಗೆ ಭಾರತ ಕೈಗಾರಿಕಾ ಅಭಿವೃದ್ಧಿ ಬ್ಯಾಂಕು ನಡೆಸಿದ ಅಧ್ಯಯನದ ಪ್ರಕಾರ ಆಧುನಿಕ ಪುಷ್ಪಗಳ ಪ್ರಾರಂಭಿಕ ಸ್ಥಾಪನಾ ವೆಚ್ಚವು ಹೆಕ್ಟೇರ್ ಒಂದಕ್ಕೆ ಸುಮಾರು ರೂ. ೨.೦೩ ರಿಂದ ರೂ. ೨.೨೫ ಕೋಟಿ. ಈ ವೆಚ್ಚದಲ್ಲಿ ಪ್ರಮುಖವಾಗಿ ತಳಿಗಳ ಆಮದು, ಹವಾನಿಯಂತ್ರಿತ ಹಸಿರು ಮನೆಯ ನಿರ್ಮಾಣ, ಶೀತಲೀಕರಣದ ವ್ಯವಸ್ಥೆ, ಶ್ರೇಣೀಕರಣ ಮತ್ತು ಜೋಡಣೆಯ ವೆಚ್ಚವು ಪ್ರಮುಖವಾಗಿದೆ.[೧೩]

ಭಾರತದಲ್ಲಿ ಬೆಳೆಸಲಾಗುವ ಕೆಲವು ಪ್ರಧಾನ ಪುಷ್ಪಗಳೆಂದರೆ ಮಲ್ಲಿಗೆ, ಗುಲಾಬಿ, ಸೇವಂತಿಗೆ, ಚೆಂಡುಮಲ್ಲಿಗೆ, ಕಾರ್ನೇಶನ್, ಗ್ಲಾಡಿಯೋಲಸ್, ಟ್ಯೂಬ್‌ರೋಸ್, ಆಸ್ಟರ್, ಕನಕಾಂಬರ, ಲಿಲ್ಲಿ ಮತ್ತು ಚಂಪಕ.[೧೪] ಮಲ್ಲಿಗೆಯೊಂದರಲ್ಲೇ ಸುಮಾರು ೪೦ ವಿಧದ ತಳಿಗಳ ಇರುವಿಕೆಯನ್ನು ಗುರುತಿಸಲಾಗಿದೆ.[೧೫] ಇವುಗಳಲ್ಲಿ ಇಪ್ಪತ್ತು ತಳಿಗಳನ್ನು ಮದ್ರಾಸ್ ಪ್ರಾಂತ್ಯದಲ್ಲೇ ಇರುವುದನ್ನು ಅಧ್ಯಯನದಲ್ಲಿ ಕಂಡುಕೊಳ್ಳಲಾಗಿದೆ.[೧೬] ಅವುಗಳಲ್ಲಿ ಜನಪ್ರಿಯವಾದ ಮಲ್ಲಿಗೆ ತಳಿಗಳೆಂದರೆ ಗುಂಡು ಮಲ್ಲಿಗೆ (Gundumalli), ರಾಮಬಾಣಂ (Ramabanam), ಮದನ ಬಾಣ (Madanban), ಸಿಂಗಲ್ ಮೋರಾ (Singla Mora), ಇರುವಂತಿಗೆ (Iruvanthi), ಕಸ್ತೂರಿ ಮಲ್ಲಿಗೆ (Kasthurimalli) ವೋಸಿ ಮಲ್ಲಿಗೆ (Osimalli) ಮತ್ತು ಸೂಜಿ ಮಲ್ಲಿಗೆ. ಇದೇ ರೀತಿ ಮಲ್ಲಿಗೆಯ ಇತರ ಪ್ರಭೇದಗಳಾಗಿ ಜಾಸ್ಮಿನಮ್ ಗ್ರಾಂಡಿಪ್ಲೋರಮ್ (Jasminum Greadeflorum) ಜಾಸ್ಮಿನಮ್ & ವೋರಿಕ್ಯುಲೇಟಮ್ (Jasmine Auriculatum) ನಲ್ಲೂ ಅನೇಕ ವಿಧದ ತಳಿಗಳಿರುವುದು ಅಧ್ಯಯನದಿಂದ ತಿಳಿದು ಬಂದಿರುತ್ತದೆ.[೧೭]

ಕೋಷ್ಟಕ ೨.೧

ಭಾರತದ ವಿವಿಧ ಪುಷ್ಪ ಬೆಳೆಗಳ ವಿಸ್ತೀರ್ಣ ಮತ್ತು ಉತ್ಪಾದನೆ(೨೦೦೬-೦೭)

| ಹೂಗಳ ಹೆಸರು | ವಿಸ್ತೀರ್ಣ (ಹೆಕ್ಟೇರು) | ಶೇಕಡಾ | ಉತ್ಪಾದನೆ (ಟನ್) | ಶೇಕಡಾ |
|---|---|---|---|---|
| ಮಲ್ಲಿಗೆ (Jasmine) | ೪೬೦೫.೬೦ | (೧೦.೪೧) | ೧೦,೯೮೪.೬೦ | ೫.೯೮ |
| ಗುಲಾಬಿ (Rose) | ೫೫೬೭.೧೨ | (೧೨.೫೮) | ೧೦,೩೪೫.೬೫ | ೫.೬೩ |
| ಸೇವಂತಿಗೆ(Chrysanthemum) | ೫೩೫೪.೫೧ | (೧೨.೧೦) | ೪೨,೫೭೧.೮೦ | ೨೩.೧೭ |
| ಚೆಂಡು ಮಲ್ಲಿಗೆ (Marigold) | ೭೯೪೧.೯೮ | (೧೭.೯೬) | ೭೦,೮೩೬.೯೦ | ೩೮.೫೬ |
| ಕಾರ್ನೇಶನ್ (Carnation) | ೬೦.೫೦ | ( ೦.೧೩) | ೪೪೬.೭೦ | ೦.೨೪ |
| ಗ್ಲಾಡಿಯೋಲಸ್ (Gladiolus) | ೧೩೫೦.೦೧ | ( ೩.೦೫) | ೨೫೭೦.೯೫ | ೧.೪೦ |
| ಟ್ಯೂಬ್ ರೋಸ್ (TubeRose) | ೩೫೯೩.೦೦ | ( ೮.೧೨) | ೯೧೦೦.೦೦ | ೪.೯೫ |
| ಆಸ್ಟರ್ (Aster) | ೧೧೨೬.೦೦ | ( ೨.೬೪) | ೧೧೧೫೨.೦೦ | ೬.೦೭ |
| ಕನಕಾಂಬರ (Crossandra) | ೧೯೦೮.೦೦ | ( ೪.೩೧) | ೨೮೬೨.೦೦ | ೧.೫೬ |
| ಲಿಲ್ಲಿ (Lilly) | ೩.೦೦ | (೦.೦೦೬) | ೧೨.೦೦ | ೦.೦೦೬ |
| ಚಂಪಕ (Champak) | ೭೦೨.೦೦ | (೮.೦೦) | ೩೫೧೦.೦೦ | ೧.೯೧ |
| ಇತರ | ೧೨೦೧೩.೬೭ | (೨೭.೧೬) | ೧೯೩೦೪.೫೭ | ೧೦.೫೦ |
| ಒಟ್ಟು | ೪೪೨೭೫.೩೯ | ೧೦೦ | ೧೮೩೯೭೦.೧೭ | ೧೦೦.೦೦ |

**Source: T.M. Gajanana and M.Sudha, Production and Marketing Research and Traditional Flowers, Ornamental Horticulture S.K. Bhattacharjee 2006-07, P.62.**

ಭಾರತದಲ್ಲಿ ಅತ್ಯಧಿಕ ಪ್ರದೇಶದಲ್ಲಿ ಬೆಳೆಯಲಾಗುವ ಪುಷ್ಪ ಚೆಂಡು ಹೂ. ಒಟ್ಟು ಪುಷ್ಪ ಪ್ರದೇಶದಲ್ಲಿ ಅದರ ಪಾಲು ಶೇ.೧೮ ರಷ್ಟು. ಆ ಬಳಿಕದ ಅನುಕ್ರಮ ಸ್ಥಾನಗಳು ಗುಲಾಬಿ ೧೨.೫೮% ಸೇವಂತಿಗೆ ೧೨.೧೦% ಮತ್ತು ಮಲ್ಲಿಗೆಗೆ ೧೦.೪೧% ಸಲ್ಲುತ್ತವೆ. ಮಲ್ಲಿಗೆ ಹೂವಿನ ಪಾಲು ತೀರಾ ಕಡಿಮೆಯೇನಲ್ಲ. ಇತರ ಪುಷ್ಪಗಳ ತೀವ್ರ ಪೈಪೋಟಿಯ ನಡುವೆಯೂ ಮಲ್ಲಿಗೆ ತನ್ನ ಸ್ಥಾನಮಾನ ಉಳಿಸಿಕೊಂಡಿರುವುದು ಮಲ್ಲಿಗೆ ಬೆಳಗೆ ಉಜ್ವಲ ಭವಿಷ್ಯವಿರುವುದನ್ನು ಸೂಚಿಸುತ್ತದೆ.

## ೨.೩. ಭಾರತದ ಪುಷ್ಪ ಬೆಳೆಯುವ ಪ್ರದೇಶ

ಭಾರತದಲ್ಲಿ ಪುಷ್ಪ ಬೆಳೆಯುವ ಪ್ರದೇಶದ ವಿಸ್ತೀರ್ಣದ ಬಗ್ಗೆ ನಡೆದಿರುವ ಕೆಲವು ಅಧ್ಯಯನಗಳು ಕುತೂಹಲಕಾರಿಯಾಗಿವೆ. ಕ್ರಿ.ಶ. ೧೯೬೨ರಲ್ಲಿ ಮಾಡಲಾದ ಅಂದಾಜಿನ[೧೮] ಪ್ರಕಾರ ಭಾರತದಲ್ಲಿ ಪುಷ್ಪೋದ್ಯಮ ಪ್ರದೇಶವು ೪೦೦೦ ಹೆಕ್ಟೇರುಗಳು. ಕ್ರಿ.ಶ. ೧೯೭೬ರಲ್ಲಿ ಮಾಡಲಾದ ಲೆಕ್ಕಾಚಾರದ[೧೯] ಪ್ರಕಾರ ಪುಷ್ಪ ಬೆಳೆಯುವ ಪ್ರದೇಶ ೭೫೦೦ ಹೆಕ್ಟೇರುಗಳು. ಕ್ರಿ.ಶ. ೧೯೯೫ರಲ್ಲಿ APEDA[೨೦] ಮಾಡಿದ ಅಧ್ಯಯನದ ಪ್ರಕಾರ ಭಾರತದ ಪುಷ್ಪ ಬೆಳೆ ಪ್ರದೇಶ ೩೪೦೦೦ ಹೆಕ್ಟೇರ್‌ಗಳು. ಇದು ಅಂದಿನ ವಿಶ್ವ ಪುಷ್ಪ ಬೆಳೆ ಪ್ರದೇಶದ ಶೇ.೧೫ ರಷ್ಟು ಪ್ರದೇಶವಾಗಿತ್ತು. ವಿಶ್ವದ ಕೆಲವು ಪುಷ್ಪೋದ್ಯಮ ರಾಷ್ಟ್ರಗಳ ಪುಷ್ಪ ಬೆಳೆ ಪ್ರದೇಶದೊಡನೆ[೨೧] ಭಾರತದ ಸ್ಥಾನವನ್ನು ಕೋಷ್ಟಕ ೨.೨ ತುಲನೆ ಮಾಡುತ್ತದೆ.

ಕೋಷ್ಟಕ ೨.೨

**ಪುಷ್ಪ ಬೆಳೆಯುವ ಪ್ರಮುಖ ರಾಷ್ಟ್ರಗಳು(೨೦೦೮-೦೯)**

| ರಾಷ್ಟ್ರಗಳು | ಪುಷ್ಪ ಬೆಳೆ ಪ್ರದೇಶ (ಹೆಕ್ಟೇರ್) |
|---|---|
| ಚೀನಾ | ೬೦,೦೦೦ |
| ಭಾರತ | ೩೪,೦೦೦ |
| ಜಪಾನ್ | ೨೧,೨೧೮ |
| ಯು.ಎಸ್.ಎ. | ೧೬,೪೦೦ |
| ಬ್ರೆಸಿಲ್ | ೧೦,೨೮೫ |
| ನೆದರ್ ಲ್ಯಾಂಡ್ | ೮,೦೧೭ |
| ಇಟಲಿ | ೭,೬೫೪ |
| ಯು.ಕೆ. | ೬,೮೦೪ |
| ಕೊಲಂಬಿಯಾ | ೪,೭೫೭ |
| ಇಸ್ರೇಲ್ | ೧,೯೫೦ |

**ಆಧಾರ : Agricultural and Processed Food Products Export Development Authority (APEDA) 2008-09 P.16.**

ವಿಶ್ವದ ಪ್ರಮುಖ ಹೂ ಬೆಳೆಯುವ ರಾಷ್ಟ್ರಗಳ ಸಾಲಲ್ಲಿ ಚೀನಾದ ಬಳಿಕಿನ ಸ್ಥಾನವನ್ನು ಭಾರತ ಪಡೆದಿರುವುದು ಗಮನೀಯ. ಇವೆರಡು ರಾಷ್ಟ್ರಗಳು ಅತ್ಯಧಿಕ ಜನಸಂಖ್ಯೆ ಹೊಂದಿರುವ ರಾಷ್ಟ್ರಗಳು. ಜನಸಂಖ್ಯೆಯೊಡನೆ ಏರುವ ನಿರುದ್ಯೋಗ ನಿವಾರಣೆಗೆ ಅವು

ಬದಲೀ ಹಾದಿಗಳನ್ನು ಆವಿಷ್ಕರಿಸುವುದು ಅನಿವಾರ್ಯ. ಎಂತಲೇ ಈ ರಾಷ್ಟ್ರಗಳಲ್ಲಿ ಪುಷ್ಪೋದ್ಯಮ ಹೆಚ್ಚಿನ ಮಹತ್ವವನ್ನು ಪಡಕೊಳ್ಳುತ್ತಿದೆ.

ಕ್ರಿ.ಶ. ೧೯೯೯-೨೦೦೦ ದಲ್ಲಿ ನಡೆಸಲಾದ ಒಂದು ಅಧ್ಯಯನದ ಪ್ರಕಾರ ಭಾರತದ ಪುಷ್ಪ ಬೆಳೆ ಪ್ರದೇಶವು ಕ್ರಿ.ಶ. ೧೯೯೩-೯೪ ರಲ್ಲಿ ೫೩,೦೦೦ ಹೆಕ್ಟೇರ್‌ಗಳಿದ್ದು, ಅದು ಆರು ವರ್ಷಗಳ ಅವಧಿಯಲ್ಲಿ ೮೮೬೦೯ ಹೆಕ್ಟೇರ್‌ಗಳಿಗೇರಿತು.[೨] ಪುಷ್ಪ ಪ್ರದೇಶವು ಒಟ್ಟು ತೋಟಗಾರಿಕಾ ಬೆಳೆ ಪ್ರದೇಶದ ೦.೧೨% ಮತ್ತು ಭಾರತದ ಒಟ್ಟು ಬೆಳೆ ಪ್ರದೇಶದ ೦.೦೫%[೩] ಆಗಿರುವುದನ್ನು ೨೦೦೧-೦೨ರಲ್ಲಿ ನಡೆಸಲಾದ ಅಧ್ಯಯನ ಸೂಚಿಸುತ್ತದೆ.

ಭಾರತದ ಸಂರಕ್ಷಿತ ಪುಷ್ಪ ಬೆಳೆಯ ವಿಸ್ತೀರ್ಣವನ್ನು ಪುಷ್ಪೋದ್ಯಮದಲ್ಲಿ ಪ್ರಸಿದ್ಧವಾಗಿರುವ ನೆದರ್‌ಲ್ಯಾಂಡ್, ಕೊಲಂಬಿಯಾಗಳಿಗೆ ಹೋಲಿಸಿದಾಗ ಭಾರತದ ಆಧುನಿಕ ಪುಷ್ಪೋದ್ಯಮದ ಪ್ರಗತಿ ತೀರಾ ನಗಣ್ಯವೆನ್ನುವುದು ತಿಳಿದು ಬರುತ್ತದೆ. ನೆದರ್‌ಲ್ಯಾಂಡ್‌ನಲ್ಲಿ ಶೇ.೭೦ರಷ್ಟು ಹೂ ಬೆಳೆಯುವ ಪ್ರದೇಶವು ಆಧುನಿಕ ಸಂರಕ್ಷಿತಾ ಹವಾಮಾನದಲ್ಲಿ ಬೆಳೆಯಲಾಗುವ ಆಧುನಿಕ ಪುಷ್ಪಗಳಾಗಿದ್ದು, ಅದರ ಸಾಂಪ್ರದಾಯಿಕ ಪುಷ್ಪಗಳ ಪಾಲು ಕೇವಲ ಶೇ.೩೦. ಕೊಲಂಬಿಯಾದ ಒಟ್ಟು ಪುಷ್ಪ ಬೆಳೆಯಲ್ಲಿ ಆಧುನಿಕ ಪುಷ್ಪ ಬೆಳೆಯ ಪಾಲು ಶೇ.೯೦. ಆದರೆ ಭಾರತದಲ್ಲಿ ಆಧುನಿಕ ಪುಷ್ಪ ಬೆಳೆಯುವ ಒಟ್ಟು ಪ್ರದೇಶವು ಕೇವಲ ೫೦೦ ಹೆಕ್ಟೇರ್‌ಗಳಾಗಿದ್ದು, ಇದು ಭಾರತದ ಒಟ್ಟು ಪುಷ್ಪ ಬೆಳೆಯುವ ಪ್ರದೇಶದ ಒಂದು ಶೇಕಡಾಕ್ಕಿಂತಲೂ ಕಡಿಮೆ (೦.೫೬%)ಯಾಗಿರುತ್ತದೆ[೪].

ದಕ್ಷಿಣ ಭಾರತದ ಮೂರು ರಾಜ್ಯಗಳ ಪುಷ್ಪ ಉತ್ಪಾದನಾ ಪ್ರದೇಶವು ದೇಶದ ಒಟ್ಟು ಪುಷ್ಪ ಬೆಳೆ ಪ್ರದೇಶದ ಶೇ.೬೨.೪೧ ಆಗಿರುತ್ತದೆ. ಭಾರತದ ಪ್ರಮುಖ ಪುಷ್ಪ ಬೆಳೆಯ ರಾಜ್ಯಗಳಲ್ಲಿ ಕರ್ನಾಟಕ ಪ್ರಥಮ ಸ್ಥಾನದಲ್ಲಿದೆ (೨೨.೭೭%). ಅನಂತರದ ಸ್ಥಾನಗಳು ಅನುಕ್ರಮವಾಗಿ ತಮಿಳುನಾಡು (೧೯.೮೪%), ಆಂಧ್ರಪ್ರದೇಶ (೧೯.೮೦%) ಮತ್ತು ಪಶ್ಚಿಮ ಬಂಗಾಳಕ್ಕೆ (೧೪.೪೮%) ಸಲ್ಲುತ್ತವೆ. ಒಟ್ಟು ಪುಷ್ಪ ಪ್ರದೇಶದಲ್ಲಿ ಈ ರಾಜ್ಯಗಳ ಒಟ್ಟು ಪಾಲು ಶೇ. ೭೬.೮೯ ಆಗಿರುತ್ತದೆ. ದೇಶದ ಪುಷ್ಪೋದ್ಯಮಕ್ಕೆ ಉಳಿದ ರಾಜ್ಯಗಳ ಕೊಡುಗೆ ತೀರಾ ನಗಣ್ಯ. ಆದರೆ ಐದು ವರ್ಷಗಳ ಅವಧಿಯಲ್ಲಿ ಎಲ್ಲಾ ರಾಜ್ಯಗಳು ಪುಷ್ಪ ಬೆಳೆ ಪ್ರದೇಶವನ್ನು ಹೆಚ್ಚಿಸಿಕೊಂಡಿದೆ. ದೇಶದ ಪುಷ್ಪ ಪ್ರದೇಶ ಶೇ. ೪೫.೮೮ ರಷ್ಟು ವಿಸ್ತರಣೆಯನ್ನು ದಾಖಲಿಸಿದೆ[೫]. ಇದು ಅಸಾಮಾನ್ಯ ಬೆಳವಣಿಗೆಯಾಗಿದ್ದು, ದೇಶದಲ್ಲಿ ಪುಷ್ಪೋದ್ಯಮಕ್ಕೆ

ಉತ್ತಮ ಭವಿಷ್ಯವಿರುವುದರ ಸಂಕೇತವಾಗಿದೆ. ಆರ್ಥಿಕ ಅನಿವಾರ್ಯತೆಯು ರೈತರನ್ನು ಪುಷ್ಪೋದ್ಯಮದತ್ತ ವಾಲುವಂತೆ ಮಾಡಿರುವುದನ್ನು ಇದು ಸೂಚಿಸುತ್ತದೆ.

ಕೋಷ್ಟಕ ೨.೩ ಭಾರತದ ಪುಷ್ಪ ಬೆಳೆಯುವ ಪ್ರಧಾನ ರಾಜ್ಯಗಳನ್ನು ಮತ್ತು ಅವು ಪುಷ್ಪ ಬೆಳೆಯುವ ಪ್ರದೇಶವನ್ನು ತೋರಿಸುತ್ತದೆ.

## ಕೋಷ್ಟಕ ೨.೩
## ಭಾರತದ ಪುಷ್ಪ ಬೆಳೆಯುವ ಪ್ರಧಾನ ರಾಜ್ಯಗಳು ಮತ್ತು ವಿಸ್ತೀರ್ಣ

| ರಾಜ್ಯಗಳು | ವಿಸ್ತೀರ್ಣ | | ರಾಜ್ಯದ |
|---|---|---|---|
| | ೧೯೯೯-೨೦೦೦ | ೨೦೦೪-೨೦೦೫ | ಶೇಕಡಾ (೨೦೦೪-೦೫) |
| ಕರ್ನಾಟಕ | ೧೯೧೬೧ | ೨೦೮೦೧ | ೨೨.೭೭% |
| ತಮಿಳುನಾಡು | ೧೪೯೪ | ೧೮೧೨೦ | ೧೯.೮೪% |
| ಆಂಧ್ರ ಪ್ರದೇಶ | ೫೯೩೩ | ೧೮೦೮೭ | ೧೯.೮೦% |
| ಪಶ್ಚಿಮ ಬಂಗಾಳ | ೧೨೨೮೫ | ೧೩೨೨೭ | ೧೪.೪೮% |
| ಮಹಾರಾಷ್ಟ್ರ | ೩೩೫೬ | ೬೬೦೬ | ೦೭.೨೩% |
| ರಾಜಸ್ಥಾನ | ೧೯೮೫ | ೪೭೯೮ | ೦೫.೨೫% |
| ದೆಹಲಿ | ೧೮೭೮ | ೩೪೫೦ | ೩.೭೭% |
| ಹರಿಯಾನ | ೧೫೪೦ | ೨೨೫೦ | ೨.೪೬% |
| ಮಧ್ಯಪ್ರದೇಶ | ೧೨೭೦ | ೨೧೧೬ | ೨.೩೨% |
| ಉತ್ತರ ಪ್ರದೇಶ | ೧೦೦೦ | ೧೮೭೫ | ೨.೦೫% |
| ಒಟ್ಟು | ೬೨೬೦೨ | ೯೧೩೩೦ | ೧೦೦% |

ಮೂಲ: ದೆಬಾಶಿಶ್ ಸೇನ್ ಗುಪ್ತಾ, ರಾಜ್‌ಕಮಲ್, ಫ್ಲೋರಿಕಲ್ಚರ್ ಮಾರ್ಕೆಟಿಂಗ್ ಇನ್ ಇಂಡಿಯ೨೦೧೦, ಪುಟ೧೪

ನಮ್ಮ ದೇಶದಲ್ಲಿ ಅತೀ ವಿಸ್ತಾರವಾದ ಪುಷ್ಪ ಬೆಳೆ ಹೊಂದಿರುವ ರಾಜ್ಯವೆಂದರೆ ಅದು ಕರ್ನಾಟಕ. ದೇಶದ ಒಟ್ಟು ಪುಷ್ಪ ಪ್ರದೇಶದಲ್ಲಿ ಈ ರಾಜ್ಯದ ಪಾಲು ಶೇ.೨೨.೭೭. ಎರಡನೆಯ ಸ್ಥಾನ ಶೇ.೧೯.೮೪ರಷ್ಟು ಪಾಲು ಹೊಂದಿರುವ ತಮಿಳುನಾಡಿಗೆ ಸಂದರೆ ಆಂಧ್ರಪ್ರದೇಶ(ಶೇ.೧೯.೮) ಮತ್ತು ಪಶ್ಚಿಮ ಬಂಗಾಳ(ಶೇ.೧೪.೪೮) ಆ ಬಳಿಕಿನ ಸ್ಥಾನಗಳನ್ನು ಪಡೆಯುತ್ತವೆ.

ಕೋಷ್ಟಕ ೨.೪ ಬಿಡಿ ಪುಷ್ಪ ಬೆಳೆಯುವ ಭಾರತದ ಹತ್ತು ಪ್ರಧಾನ ರಾಜ್ಯಗಳ ವಿವರ ನೀಡುತ್ತದೆ.

ಕೋಷ್ಟಕ ೨.೪

**ಬಿಡಿ ಪುಷ್ಪ ಬೆಳೆಯುವ ಭಾರತದ ೧೦ ಪ್ರಧಾನ ರಾಜ್ಯಗಳು (೨೦೦೭-೦೮)**

| ರಾಜ್ಯ | ಶ್ರೇಣಿ | ಉತ್ಪಾದನೆ ( ಟನ್) | ರಾಜ್ಯದ ಪಾಲು |
|---|---|---|---|
| ತಮಿಳುನಾಡು | ೧ | ೨೧೪.೪ | ೨೪.೬೩ |
| ಕರ್ನಾಟಕ | ೨ | ೧೬೯.೧ | ೧೯.೪೩ |
| ಆಂಧ್ರಪ್ರದೇಶ | ೩ | ೧೨೬.೩ | ೧೪.೫೧ |
| ಪಂಜಾಬ್ | ೪ | ೭೭.೯ | ೦೮.೯೫ |
| ಮಹಾರಾಷ್ಟ್ರ | ೫ | ೬೯.೫ | ೭.೯೯ |
| ಹರಿಯಾನ | ೬ | ೬೧.೮ | ೭.೧೦ |
| ಗುಜರಾತ್ | ೭ | ೪೯.೫ | ೫.೬೯ |
| ಪಶ್ಚಿಮ ಬಂಗಾಳ | ೮ | ೪೮.೪ | ೫.೫೬ |
| ಉತ್ತರ ಪ್ರದೇಶ | ೯ | ೧೨.೪ | ೧.೪೨ |
| ಒರಿಸ್ಸಾ | ೧೦ | ೭.೦೦ | ೦.೮೦ |
| ಹತ್ತು ರಾಜ್ಯಗಳ ಒಟ್ಟು ಉತ್ಪಾದನೆ | | ೮೩೬.೩ | ೯೬.೦೮ |
| ದೇಶದ ಒಟ್ಟು ಉತಾದನೆ | | ೮೭೦.೪ | ೧೦೦ |

ಆಧಾರ: ಕರ್ನಾಟಕ ರಾಜ್ಯ ತೋಟಗಾರಿಕೆ ಇಲಾಖೆಯ ಅಂಕಿಅಂಶಗಳು-೨೦೦೮-೦೯.ಪುಟ೧೨

ಬಿಡಿ ಪುಷ್ಪ ಬೆಳೆಯಲ್ಲಿ ತಮಿಳುನಾಡು ದೇಶದಲ್ಲಿ ಪ್ರಥಮ ಸ್ಥಾನದಲ್ಲಿದೆ. ದೇಶದ ಒಟ್ಟು ಉತ್ಪಾದನೆಯಲ್ಲಿ ತಮಿಳುನಾಡು ಒಂದೇ ಸುಮಾರು ಕಾಲು ಭಾಗದಷ್ಟು ಪುಷ್ಪ ಬೆಳೆಯುತ್ತಿದೆ. ಕರ್ನಾಟಕ ಶೇ.೧೯.೪೩ರ ಪಾಲಿನೊಡನೆ ಎರಡನೆಯ ಸ್ಥಾನದಲ್ಲಿದೆ. ಕರ್ನಾಟಕದ ೨೦೮೦೧ ಹೆಕ್ಟೇರು ಭೂಮಿಯಲ್ಲಿ ಪುಷ್ಪ ಬೆಳೆಯಲಾಗುತ್ತಿದೆ. ವಿಸ್ತೀರ್ಣದ ಮಾನದಂಡದಿಂದ ವೀಕ್ಷಿಸಿದಾಗ ಕರ್ನಾಟಕ ಪ್ರಥಮ ಸ್ಥಾನದಲ್ಲಿದ್ದರೂ ಪುಷ್ಪ ಉತ್ಪಾದನೆಯ ಮಾನದಂಡದಿಂದ ನೋಡಿದಾಗ ಕರ್ನಾಟಕ ಎರಡನೆಯ ಸ್ಥಾನದಲ್ಲಿದೆ. ತಮಿಳುನಾಡಿನ ೧೮೧೨೦ ಹೆಕ್ಟೇರು ಭೂಮಿಯಲ್ಲಿ ಪುಷ್ಪ ಬೆಳೆಯಲಾಗುತ್ತಿದೆ. ವಿಸ್ತೀರ್ಣದ ದೃಷ್ಟಿಯಿಂದ ಎರಡನೇ ಸ್ಥಾನದಲ್ಲಿರುವ ತಮಿಳುನಾಡು ಉತ್ಪಾದನೆಯಲ್ಲಿ ಪ್ರಥಮ ಸ್ಥಾನದಲ್ಲಿದೆ. ತಮಿಳುನಾಡಿನ ಪುಷ್ಪ ಉತ್ಪಾದಕತೆಯ ಸಾಮರ್ಥ್ಯ ಕರ್ನಾಟಕಕ್ಕಿಂತ ಹೆಚ್ಚು ಎನ್ನುವುದನ್ನು ಇದು ತಿಳಿಯಪಡಿಸುತ್ತದೆ.

ದಕ್ಷಿಣದ ಮೂರು ರಾಜ್ಯಗಳಾದ ತಮಿಳುನಾಡು, ಕರ್ನಾಟಕ ಮತ್ತು ಆಂಧ್ರಪ್ರದೇಶ ದೇಶದ ಒಟ್ಟು ಉತ್ಪಾದನೆಯಲ್ಲಿ ಶೇ.೫೮.೫೭ ರಷ್ಟು ಪಾಲನ್ನು ಪಡೆದಿವೆ. ಈ ಮೂರು ರಾಜ್ಯಗಳ ಹವಾಮಾನ ಮತ್ತು ಮಣ್ಣಿನ ಗುಣ ಪುಷ್ಪ ಬೆಳೆಗೆ ಉತ್ತೇಜನಕಾರಿಯಾಗಿರುವುದು ಇದಕ್ಕೆ ಕಾರಣವಾಗಿದೆ. ದೇಶದ ಪುಷ್ಪೋದ್ಯಮಕ್ಕೆ ಈ ಮೂರು ರಾಜ್ಯಗಳು ಬಹಳ ದೊಡ್ಡ ಕೊಡುಗೆಯನ್ನು ಮುಂದಿನ ವರ್ಷಗಳಲ್ಲಿ ನೀಡಲಿವೆ ಎಂಬ ನಿರೀಕ್ಷೆ ಇರಿಸಿಕೊಂಡರೆ ಅದು ಸುಳ್ಳಾಗಲಾರದು ಎನಿಸುತ್ತದೆ. ಕೋಷ್ಟಕ ೪.೫ ದೇಶದ ಸಾಂಪ್ರದಾಯಿಕವಲ್ಲದ ಪುಷ್ಪಗಳ ಉತ್ಪಾದನೆಯ ವಿವರವನ್ನು ನೀಡುತ್ತದೆ.

**ಕೋಷ್ಟಕ ೨.೫**

**ಸಾಂಪ್ರದಾಯಿಕವಲ್ಲದ ಪುಷ್ಪಗಳ ಉತ್ಪಾದನೆ**

| ಶ್ರೇಣಿ | ರಾಜ್ಯ | ಉತ್ಪಾದನೆ (ರೂ.ಲಕ್ಷಗಳು) | ರಾಜ್ಯದ ಪಾಲು (ಶೇಕಡಾ) |
|---|---|---|---|
| 1 | ಪಶ್ಚಿಮ ಬಂಗಾಳ | ೧೯೬೮೦ | ೪೫.೩೩ |
| 2 | ಮಹಾರಾಷ್ಟ್ರ | ೫೭೨೮ | ೧೩.೧೯ |
| 3 | ಕರ್ನಾಟಕ | ೫೫೫೦ | ೧೨.೭೮ |
| 4 | ಗುಜರಾತ್ | ೫೦೬೩ | ೧೧.೬೬ |
| 5 | ಉತ್ತರಪ್ರದೇಶ | ೩೭೫೨ | ೦೮.೬೫ |
| 6 | ಉತ್ತರಾಂಚಲ | ೧೪೫೬ | ೦೩.೩೫ |
| 7 | ದೆಹಲಿ | ೧೦೩೮ | ೦೨.೩೯ |
| 8 | ಹಿಮಾಚಲ ಪ್ರದೇಶ | ೫೬೬ | ೦೧.೩೦ |
| 9 | ಜಮ್ಮು ಕಾಶ್ಮೀರ | ೨೧೮ | ೦೦.೫೦ |
| 10 | ಒರಿಸ್ಸಾ | ೧೩೦ | ೦೦.೩೦ |
| ಹತ್ತು ರಾಜ್ಯಗಳ ಒಟ್ಟು ಉತ್ಪಾದನೆ | | ೪೩೧೮೧ | ೯೯.೪೫ |
| **ದೇಶದ ಒಟ್ಟು ಉತಾದನೆ** | | **೪೩೪೨೧** | **೧೦೦.೦೦** |

**ಆಧಾರ: ಕರ್ನಾಟಕ ರಾಜ್ಯ ತೋಟಗಾರಿಕಾ ಇಲಾಖೆಯ ಅಂಕಿ ಅಂಶಗಳು ೨೦೦೮-೦೯. ಪುಟ೧೬**

ಭಾರತದ ಹತ್ತು ರಾಜ್ಯಗಳು ಸಾಂಪ್ರದಾಯಿಕವಲ್ಲದ ಪುಷ್ಪಗಳ ಒಟ್ಟು ಉತ್ಪಾದನೆಯಲ್ಲಿ ಶೇ.೯೯.೪೫ ರಷ್ಟು ಪಾಲನ್ನು ಪಡೆದಿದ್ದು, ಉಳಿದ ರಾಜ್ಯಗಳ ಕೊಡುಗೆ ತೀರಾ ಕಡಿಮೆಯಿರುವುದನ್ನು ಗಮನಿಸಬಹುದು. ಸಾಂಪ್ರದಾಯಿಕವಲ್ಲದ ಪುಷ್ಪಗಳ

ಬೆಳೆಯಲ್ಲಿ ಪ್ರಥಮ ಸ್ಥಾನದಲ್ಲಿರುವ ಪಶ್ಚಿಮ ಬಂಗಾಳ ಒಟ್ಟು ಉತ್ಪಾದನೆಯಲ್ಲಿ ಶೇ.೪೫.೩೩ ರಷ್ಟು ಪಾಲನ್ನು ಹೊಂದಿದೆ. ಮಹಾರಾಷ್ಟ್ರ (ಶೇ. ೧೩.೮೯) ಕರ್ನಾಟಕ (ಶೇ.೧೨.೭೮) ಮತ್ತು ಗುಜರಾತ್ (ಶೇ.೧೧.೬೬) ಆ ಬಳಿಕಿನ ಸ್ಥಾನವನ್ನು ಪಡೆದಿವೆ. ಸಾಂಪ್ರದಾಯಿಕವಲ್ಲದ ಹೂಗಳ ಉತ್ಪಾದನೆಯಲ್ಲಿ ಈ ನಾಲ್ಕು ರಾಜ್ಯಗಳ ಪಾಲು ಶೇ.೮೨.೯೬ ಎನ್ನುವುದು ಉಲ್ಲೇಖನೀಯ. ಇದು ಸಾಂಪ್ರದಾಯಿಕೇತರ ಪುಷ್ಪೋದ್ಯಮವು ನಾಲ್ಕು ರಾಜ್ಯಗಳನ್ನು ಕೇಂದ್ರೀಕೃತವಾಗಿರುವುದನ್ನು ಸೂಚಿಸುತ್ತದೆ. ಸಾಂಪ್ರದಾಯಿಕೇತರ ಪುಷ್ಪಗಳು ಕೇವಲ ವಾಣಿಜ್ಯ ಉದ್ದೇಶಗಳಿಗೆ ಬಳಕೆಯಾಗುತ್ತವೆ. ದೇಶದ ಬುದ್ಧಿವಂತರ ರಾಜ್ಯಗಳಲ್ಲಿ ಒಂದೆನಿಸಿರುವ ಪಶ್ಚಿಮ ಬಂಗಾಳ ಸಾಂಪ್ರದಾಯಿಕೇತರ ಪುಷ್ಪೋದ್ಯಮದ ಪ್ರಯೋಜನಗಳಲ್ಲಿ ಸಿಂಹಪಾಲನ್ನು ತನ್ನದಾಗಿಸಿಕೊಂಡಿದೆ. ಇನ್ನೊಂದು ಬುದ್ಧಿವಂತರ ರಾಜ್ಯವಾದ ಕೇರಳ ಪುಷ್ಪೋದ್ಯಮಕ್ಕೆ ಯಾವುದೇ ದೇಣಿಗೆ ನೀಡದಿರುವುದು ಸಂಶೋಧನೆಗೆ ಅರ್ಹವಾದ ವಿಷಯವಾಗಿದೆ.

ಕರ್ನಾಟಕವು ಸಾಂಪ್ರದಾಯಿಕ ಪುಷ್ಪ ಬೆಳೆ ಪ್ರದೇಶಗಳ ಪೈಕಿ ಮೊದಲನೆಯ ಸ್ಥಾನವನ್ನು, ಸಾಂಪ್ರದಾಯಿಕ ಪುಷ್ಪ ಉತ್ಪಾದನೆಯಲ್ಲಿ ಎರಡನೆಯ ಸ್ಥಾನವನ್ನು ಮತ್ತು ಸಾಂಪ್ರದಾಯಿಕವಲ್ಲದ ಪುಷ್ಪಗಳ ಉತ್ಪಾದನೆಯಲ್ಲಿ ತೃತೀಯ ಸ್ಥಾನವನ್ನು ಪಡೆದಿದೆ. ಸಾಂಪ್ರದಾಯಿಕವಲ್ಲದ ಪುಷ್ಪಗಳ ಉತ್ಪಾದನೆಯಲ್ಲಿ ಮೂರನೆಯ ಸ್ಥಾನದಲ್ಲಿದ್ದರೂ ಪಶ್ಚಿಮ ಬಂಗಾಳದೊಡನೆ ಹೋಲಿಸಿದರೆ ನಮ್ಮ ರಾಜ್ಯದ ಪುಷ್ಪ ಉತ್ಪಾದನೆ ತೀರಾ ಕಡಿಮೆಯಿರುವುದು ವೇದ್ಯವಾಗುತ್ತದೆ. ಈ ನಿಟ್ಟಿನಲ್ಲಿ ಕರ್ನಾಟಕವು ಪಶ್ಚಿಮ ಬಂಗಾಳದಿಂದ ತುಂಬಾ ಪಾಠ ಕಲಿಯಲಿಕ್ಕಿದೆ ಎನಿಸುತ್ತದೆ.

## ೨.೪ ಭಾರತದ ಪುಷ್ಪೋದ್ಯಮದ ಉದ್ಯೋಗಾವಕಾಶಗಳು

ಭಾರತ ಕೃಷಿ ಪ್ರಧಾನವಾದ ರಾಷ್ಟ್ರವೆನ್ನುವುದನ್ನು ಯಾರಿಂದಲೂ ಅಲ್ಲಗಳೆಯಲು ಸಾಧ್ಯವಿಲ್ಲ. ಭಾರತದ ವೃತ್ತಿ ರಚನೆಯಲ್ಲಿ ಶೇ.೬೭.೫ರಷ್ಟು ದುಡಿಯುವ ಜನ ಕೃಷಿಯನ್ನು ಅವಲಂಬಿಸಿಕೊಂಡಿದ್ದಾರೆ. ಕೃಷಿಯು ಶ್ರಮ ಆಧರಿತ ವೃತ್ತಿ ಆದುದರಿಂದ ಅದು ಬಹು ಜನರನ್ನು ತನ್ನಡೆಗೆ ಸೆಳೆದುಕೊಳ್ಳುತ್ತದೆ. ಕೃಷಿರಂಗದ ಒಂದು ಭಾಗವೆನಿಸಿದ ಪುಷ್ಪೋದ್ಯಮವು ಕೂಡಾ ಒಂದು ಶ್ರಮ ಆಧರಿತ ಉದ್ಯಮವಾಗಿದೆ. ಇದು ನೇರವಾಗಿ ಮತ್ತು ಪರೋಕ್ಷವಾಗಿ ವಿಪುಲವಾದ ಉದ್ಯೋಗಾವಕಾಶ ನೀಡುವುದರಿಂದ ಗ್ರಾಮೀಣ ಮತ್ತು ನಗರವಾಸಿಗಳ ಬದುಕಿಗೆ ಆಧಾರವಾಗಬಲ್ಲ ಕ್ಷೇತ್ರವಾಗಿದೆ. ಪುಷ್ಪೋದ್ಯಮದ ಬಗೆಗಿನ ಉದ್ಯೋಗಾವಕಾಶಗಳ ಬಗ್ಗೆ ಕೆಲವು ಅಧ್ಯಯನಗಳು ನಡೆದಿದ್ದು, ಹೂವಿನ ಕ್ಷೇತ್ರದ ಕಾಯಕ ಬಹುಮಂದಿಗೆ ಉದ್ಯೋಗ ಮತ್ತು ಆದಾಯ ನೀಡಬಲ್ಲುದು ಎನ್ನುವ ವಿಚಾರ ಈ ಅಧ್ಯಯನಗಳಿಂದ ಸಾಬೀತಾಗಿದೆ.

ಕ್ರಿ.ಶ. ೧೯೯೭ರಲ್ಲಿ ನಡೆದ ಒಂದು ಅಧ್ಯಯನದ ಪ್ರಕಾರ ಕನಕಾಂಬರ ಹೂವಿನ ಬೆಳೆಯಲ್ಲಿ ಹೆಕ್ಟೇರ್ ಒಂದರಲ್ಲಿ ೯೧೩ ಮಾನವ ದಿನಗಳ ಉದ್ಯೋಗ ಸೃಷ್ಟಿಯಾಗುವುದನ್ನು ಕಂಡುಕೊಳ್ಳಲಾಗಿದೆ[೨೬]. ಇದೇ ರೀತಿಯ ಅಧ್ಯಯನ ಮಲ್ಲಿಗೆ ಕೃಷಿಯಲ್ಲು ನಡೆಸಲಾಗಿದ್ದು ಮಲ್ಲಿಗೆ ಬೆಳೆ ಹೆಕ್ಟೇರ್ ಒಂದರಲ್ಲಿ ೧೨೧೦ ಮಾನವ ದಿನಗಳ ಉದ್ಯೋಗ ನೀಡಬಲ್ಲುದು ಎಂದು ತಿಳಿದು ಬಂದಿದೆ.[೨೭] ತುಲನೆ ಮಾಡಿದಾಗ ಮಲ್ಲಿಗೆ ಕೃಷಿಯು ಕನಕಾಂಬರಕ್ಕಿಂತಲೂ ಹೆಚ್ಚು ಉದ್ಯೋಗಾವಕಾಶಗಳನ್ನು ನೀಡಬಲ್ಲುದು ಎಂದು ತಿಳಿದು ಬರುತ್ತದೆ. ಆದುದರಿಂದ ಉದ್ಯೋಗ ಸೃಷ್ಟಿಯಲ್ಲಿ ಮಲ್ಲಿಗೆ ಬೆಳೆಗೆ ಹೆಚ್ಚು ಅವಕಾಶಗಳಿವೆ ಎಂಬ ತೀರ್ಮಾನಕ್ಕೆ ನಾವು ಬರಬಹುದು.

ಬೆಂಗಳೂರು ಕೃಷಿ ವಿಜ್ಞಾನ ವಿಶ್ವವಿದ್ಯಾಲಯವು ಚಿತ್ರದುರ್ಗ ಜಿಲ್ಲೆಯಲ್ಲಿ ಕನಕಾಂಬರ ಹೂವಿನ ಕೃಷಿಯಲ್ಲಿ ಉದ್ಯೋಗಾವಕಾಶಗಳ ಬಗ್ಗೆ ನಡೆಸಿದ ಅಧ್ಯಯನದ ಪ್ರಕಾರ ಕನಕಾಂಬರ ಹೂಗಳ ಉದ್ಯಮವು ಹೆಕ್ಟೇರ್ ಒಂದರಲ್ಲಿ ೧೪೬೧ ಮಾನವ ದಿನಗಳ ಉದ್ಯೋಗ ಸೃಷ್ಟಿಸಿದ್ದು, ಅದರಲ್ಲಿ ಶೇಕಡಾ ೬೫ ಮಹಿಳೆಯರ ಪಾಲಾಗಿರುವುದು ತಿಳಿದು ಬರುತ್ತದೆ[೨೮]. ಪುಷ್ಪೋದ್ಯಮದಲ್ಲಿ ಮಹಿಳೆಯರಿಗೆ ಹೆಚ್ಚಿನ ಅವಕಾಶವಿರುವುದನ್ನು ಈ ಅಧ್ಯಯನವು ತಿಳಿಸುತ್ತದೆ. ಹಾಗಾಗಿ ಮಲ್ಲಿಗೆ ಪುಷ್ಪೋದ್ಯಮವು ಮಹಿಳಾ ಸಬಲೀಕರಣ ಸಾಧಿಸಲು ಪೂರಕವೆಂದು ತಿಳಿದುಕೊಳ್ಳಬಹುದು.

ಕ್ರಿ.ಶ೨೦೦೨ರಲ್ಲಿ ಸಾಂಪ್ರದಾಯಿಕ ಮತ್ತು ಸಾಂಪ್ರದಾಯಿಕವಲ್ಲದ ಪುಷ್ಪಗಳಲ್ಲಿ ದೊರೆಯಬಹುದಾದ ಉದ್ಯೋಗಾವಕಾಶಗಳ ಬಗ್ಗೆ ಅಧ್ಯಯನ ನಡೆದಿದ್ದು, ಸಾಂಪ್ರದಾಯಿಕ ಹೂಗಳು ಗ್ರಾಮೀಣ ಪ್ರದೇಶದಲ್ಲಿ ಹೆಚ್ಚು ಉದ್ಯೋಗಾವಕಾಶಗಳನ್ನು ಸೃಷ್ಟಿಸುವ ವಿಚಾರ ತಿಳಿದು ಬಂದಿರುತ್ತದೆ[೨೯]. ಈ ಅಧ್ಯಯನವು ಸಾಂಪ್ರದಾಯಿಕ ಪುಷ್ಪ ಕೃಷಿ ವಲಯವು ಕರ್ನಾಟಕದಲ್ಲಿ ಸುಮಾರು ೧೦,೦೦೦ ಕೃಷಿ ಕುಟುಂಬಗಳಿಗೆ ಹಾಗೂ ೮೦,೦೦೦ ಕೃಷಿ ಕಾರ್ಮಿಕರಿಗೆ ನೇರ ಉದ್ಯೋಗವನ್ನು ಮತ್ತು ೨.೫ ಲಕ್ಷ ಮಂದಿಗೆ ಪರೋಕ್ಷ ಉದ್ಯೋಗವನ್ನು ನೀಡಿರುವುದನ್ನು ತಿಳಿಸುತ್ತದೆ. ಕೃಷಿ ವಲಯದಲ್ಲಿರಬಹುದಾದ ಪ್ರಚ್ಛನ್ನ ನಿರುದ್ಯೋಗ ಋತುಮಾನದ ನಿರುದ್ಯೋಗಗಳಿಗೆ ಮಲ್ಲಿಗೆ ಪುಷ್ಪ ಕೃಷಿಯು ಪರಿಹಾರವನ್ನು ಒದಗಿಸಬಲ್ಲುದು ಎನ್ನುವುದನ್ನು ಈ ಅಧ್ಯಯನವು ಸಾಬೀತು ಮಾಡುತ್ತದೆ.

ಕ್ರಿ.ಶ. ೨೦೦೨ರಲ್ಲಿ ಆಧುನಿಕ ಪುಷ್ಪ ಕೃಷಿಯಲ್ಲಿ ಉದ್ಯೋಗಾವಕಾಶಗಳ ಬಗ್ಗೆ ನಡೆಸಿದ ಅಧ್ಯಯನದಲ್ಲಿ ಹೆಕ್ಟೇರ್ ಒಂದರಲ್ಲಿ ೬೧೨೧ ಮಾನವ ದಿನಗಳ ಉದ್ಯೋಗ ಸೃಷ್ಟಿಯಾಗುತ್ತದೆ ಎಂದು ಅಂದಾಜು ಮಾಡಲಾಗಿದೆ.[೩೦] ಆಹಾರ ಬೆಳೆಗಳ ಉದ್ಯಮದಲ್ಲಿ ಸೃಷ್ಟಿಯಾಗುವ ಉದ್ಯೋಗ ಅವಕಾಶಕ್ಕಿಂತ ಹೆಚ್ಚಿನ ಅವಕಾಶಗಳು ಗುಲಾಬಿ ಕೃಷಿಯಂತಹ ಅತ್ಯಾಧುನಿಕ ತಾಂತ್ರಿಕತೆಯ ಕೃಷಿ ಉದ್ಯಮದಲ್ಲಿ ಕಂಡು ಬಂದಿರುತ್ತದೆ.[೩೧] ಆಹಾರ ಬೆಳೆಗಳು

ಹೆಕ್ಟೇರಿಗೆ ಸರಾಸರಿ ೮೬೦ ಮಾನವ ದಿನಗಳ ಉದ್ಯೋಗ ಸೃಷ್ಟಿ ಮಾಡುತ್ತಿದ್ದು, ಅವುಗಳಲ್ಲಿ ಏಕದಳ ಧಾನ್ಯಗಳನ್ನು ಪ್ರತ್ಯೇಕವಾಗಿ ವಿಶ್ಲೇಷಿಸಿದಾಗ ಸೃಷ್ಟಿಯಾಗುವ ಉದ್ಯೋಗ ಭತ್ತದ ಕೃಷಿಯಲ್ಲಿ ಹೆಕ್ಟೇರಿಗೆ ೧೭೫, ಕಬ್ಬು ೨೮೫, ನೆಲಕಡಲ ೨೨೫ ಮಾನವ ದಿನಗಳು ಮಾತ್ರ[೩೨]. ಪುಷ್ಪ ಕೃಷಿಯು ಗ್ರಾಮೀಣ ಪ್ರದೇಶದಲ್ಲಿ ಹೆಚ್ಚು ಉದ್ಯೋಗಾವಕಾಶವನ್ನು ಸೃಷ್ಟಿಸಬಲ್ಲುದು ಎನ್ನುವುದನ್ನು ನಾವು ಈಗಾಗಲೇ ಕಂಡುಕೊಂಡಿದ್ದೇವೆ.

ಪುಷ್ಪೋದ್ಯಮದಲ್ಲಿ ಉದ್ಯೋಗಾವಕಾಶಗಳ ಹೊರತಾಗಿ ಆದಾಯ ಮತ್ತು ಖರ್ಚಿನ ಬಗ್ಗೆಯೂ ಅಧ್ಯಯನಗಳು ನಡೆದಿವೆ.[೩೩] ಉಳಿದ ಕೃಷಿ ಬೆಳೆಗಳಿಗೆ ಹೋಲಿಸಿದಾಗ ಪುಷ್ಪ ಬೆಳೆಯಲ್ಲಿ ಅಧಿಕ ಪ್ರತಿಫಲವಿರುವುದು ಕಂಡು ಬರುತ್ತದೆ. ತಮಿಳುನಾಡಿನ ಮಧುರೈ ಜಿಲ್ಲೆಯ ಕನಕಾಂಬರ ಹೂವಿನ ಬೆಳೆಗಾರರ ಆದಾಯದ ಬಗ್ಗೆ ನಡೆಸಿದ ಅಧ್ಯಯನದಲ್ಲಿ ಕೃಷಿಕನಿಗೆ ಹೆಕ್ಟೇರ್ ಒಂದಕ್ಕೆ ದೊರೆಯುವ ಆದಾಯ ರೂ.೯.೪೭ ಲಕ್ಷ ಮತ್ತು ಗುಲಾಬಿ ಕೃಷಿಯಲ್ಲಿ ರೂ.೮.೪೦ ಲಕ್ಷವೆಂದು ತಿಳಿದುಬರುತ್ತದೆ[೩೪]. ಇತರ ತೋಟಗಾರಿಕಾ ಬೆಳೆಗಳಾದ ಕಬ್ಬು (ರೂ.೨೪,೯೮) ಹಣ್ಣುಗಳು (ರೂ.೨೦,೦೦೦) ತರಕಾರಿ (ರೂ.೧೫,೦೦೦) ಭತ್ತ (ರೂ.೧೦,೦೦೦) ಹಾಗೂ ರಾಗಿ (ರೂ.೪,೦೦೦)ಇವುಗಳ ಆದಾಯಕ್ಕಿಂತ ಹೂವಿನ ಬೆಳೆಯ ಆದಾಯ ಅಧಿಕವೆನ್ನುವುದನ್ನು ಈ ಅಧ್ಯಯನ ತಿಳಿಸುತ್ತದೆ. ಇದು ಪುಷ್ಪೋದ್ಯಮದಲ್ಲಿ ತೊಡಗಿಸಿಕೊಳ್ಳಬಯಸುವವರಿಗೆ ಉತ್ತೇಜನಕಾರಿಯಾದ ವಿಷಯವಾಗಿದೆ.

ಉತ್ಪಾದನಾ ವೆಚ್ಚದ ವಿಚಾರದಲ್ಲಿ ನಡೆಸಲಾದ ಅಧ್ಯಯನಗಳು ಆಧುನಿಕ ತಾಂತ್ರಿಕತೆಯ ಉದ್ಯಮ ಹೆಚ್ಚು ವೆಚ್ಚದಾಯಕವಾದುದು ಎಂಬುದನ್ನು ತಿಳಿಸುತ್ತವೆ.[೩೫] ಅತ್ಯಾಧುನಿಕ ತಂತ್ರಜ್ಞಾನವನ್ನು ಒಳಗೊಳಿಸಲಾದ ಪುಷ್ಪೋದ್ಯಮದಲ್ಲಿ ಒಬ್ಬ ತಾಂತ್ರಿಕ ಪರಿಣತನ ವೇತನ ಮತ್ತು ಇತರ ಭತ್ಯೆಗಳು ಸೇರಿ ದಿನವೊಂದಕ್ಕೆ ರೂ.೧,೮೮೬ ತಗಲುವುದಾದರೆ ಸಾಮಾನ್ಯ ಸಾಂಪ್ರದಾಯಿಕ ಕೃಷಿಯಲ್ಲಿ ಆ ವೆಚ್ಚವು ಬರೇ ರೂ.೮೭ ಆಗಿರುವುದನ್ನು ಈ ಅಧ್ಯಯನ ಕಂಡುಕೊಂಡಿದೆ.[೩೬] ಕೌಶಲ್ಯರಹಿತನ ವೇತನವು ಕೌಶಲ್ಯಯುತ ಕಾರ್ಮಿಕನ ವೇತನಕ್ಕಿಂತ ಸುಮಾರು ೨೨ ಪಟ್ಟು ಕಡಿಮೆಯಾಗಿರುತ್ತದೆಂದು ಈ ಅಧ್ಯಯನವು ತಿಳಿಸುತ್ತದೆ. ಒಂದಿಷ್ಟು ತಾಂತ್ರಿಕ ಪರಿಣತಿಯಿಂದ ಓರ್ವ ನಿರುದ್ಯೋಗಿ ಕೃಷಿ ಉದ್ಯಮದಲ್ಲಿ ಕೈ ತುಂಬಾ ಗಳಿಸಲು ಸಾಧ್ಯವೆನ್ನುವುದನ್ನು ಈ ಅಧ್ಯಯನಗಳು ಬಹಿರಂಗಪಡಿಸುತ್ತವೆ.

## ೨.೫. ದೇಶೀಯ ಪುಷ್ಪ ಮಾರುಕಟ್ಟೆ

ಮಾರುಕಟ್ಟೆಗೆ ಹೂಗಳ ಪ್ರವೇಶವಾದೊಡನೆ ಪುಷ್ಪ ವ್ಯವಸಾಯವು ಉದ್ಯಮವಾಗಿ ರೂಪಾಂತರ ಹೊಂದಿ ವಿಪುಲ ಆರ್ಥಿಕಾವಕಾಶಗಳನ್ನು ಸೃಷ್ಟಿಸಿತು. ಮಾನವನ ಸೌಂದರ್ಯ ಪ್ರಜ್ಞೆ, ಆಚಾರ ವಿಚಾರಗಳು ಮತ್ತು ಸಂಸ್ಕೃತಿ ಹೂಗಳ ವಿಪರೀತ ಬಳಕೆಗೆ ಪ್ರೇರಣೆ ನೀಡಿದವು. ಪ್ರಾಚೀನ ಅರ್ಥವ್ಯವಸ್ಥೆಯಲ್ಲಿ ಹೂಗಳ ಮಾರಾಟವು, ವಸ್ತು ವಿನಿಮಯ ರೂಪದಲ್ಲಿ ನಡೆಯುತ್ತಿತ್ತು. ಶ್ರೀಮಂತ ವ್ಯಕ್ತಿಗಳ ಮನೆಗೆ ಹೂವಿನ ಮಾಲೆಗಳನ್ನು ಕೊಂಡೊಯ್ದು ಕೆಲವು ಅಗತ್ಯ ವಸ್ತುಗಳನ್ನು ಬದಲಿಯಾಗಿ ತರುವ ಪರಿಪಾಠವಿತ್ತು. ಹೂವನ್ನು ಮಾರುವ ಹೆಂಗಸರನ್ನು ಹೂವಾಡಗಿತ್ತಿಯರೆಂದು ಕರೆಯಲಾಗುತ್ತಿತ್ತು. ಹೂವಾಡಗಿತ್ತಿಯರು ಸೌಂದರ್ಯವತಿಯರೂ ಆಗಿರುತ್ತಾರೆ ಎನ್ನುವುದಕ್ಕೆ ಇದೊಂದು ಹನಿಗವನ ಸಾಕ್ಷಿ:

"ಹೂವಾಡಗಿತ್ತಿಯೆದುರಿರುವ ಸುಮ ರಾಶಿಯನು
ನೋಡುತ್ತಾ ನಿಂತುಬಿಟ್ಟಳು ತರುಣಿ ಸತಿಯು;
ಹೂವಾಡಗಿತ್ತಿಯನೆ ನೋಡುತ್ತ ಮೈಮರೆತು
ನಿಂತುಬಿಟ್ಟನು ಮತ್ತೆ ರಸಿಕ ಪತಿಯು."[೩೭]

ಈಗಲೂ ಹೂ ಮಾರುಕಟ್ಟೆಯಲ್ಲಿ ಪ್ರಮೀಳೆಯರದೇ ಮೇಲುಗೈ ಎನ್ನುವುದನ್ನು ಅಧ್ಯಯನ ಕಾಲದಲ್ಲಿ ಕಂಡುಕೊಳ್ಳಲಾಗಿದೆ.

ಪುಷ್ಪೋದ್ಯಮದಲ್ಲಿ ಮಾರಾಟ ಪ್ರಕ್ರಿಯೆಯು ಬಹಳ ಪ್ರಾಮುಖ್ಯ ವಿಷಯವಾಗಿದೆ. ಹೂಗಳು ಗಿಡಗಳ ಅತಿ ಕೋಮಲವಾದ ಉತ್ಪನ್ನವಾಗಿರುವುದರಿಂದ ಮತ್ತು ಸುದೀರ್ಘ ಕಾಲ ಬಾಳಿಕೆ ಬಾರದಿರುವುದರಿಂದ ಮಾರಾಟ ಕಾರ್ಯವು ಹೆಚ್ಚು ಸವಾಲಿನ ಆರ್ಥಿಕ ಚಟುವಟಿಕೆಯಾಗಿರುತ್ತದೆ. ದೇಶೀಯ ಅರ್ಥವ್ಯವಸ್ಥೆಯಲ್ಲಿ ದೈನಂದಿನ ಪುಷ್ಪ ಬೇಡಿಕೆಯನ್ನು ಮುನ್ನಂದಾಜು ಮಾಡುವುದು ಬಹಳ ಕಷ್ಟದ ಕೆಲಸ. ಒಂದು ವೇಳೆ ಬೇಡಿಕೆ ನಿರ್ಧರಿಸಲ್ಪಟ್ಟರೂ, ಅಲ್ಪಕಾಲದಲ್ಲಿ ಬೇಡಿಕೆಗೆ ಸರಿಸಮಾನವಾದ ಪೂರೈಕೆಯನ್ನು ಒದಗಿಸಿಕೊಡಲು ಸಾಧ್ಯವಾಗುವುದಿಲ್ಲ. ಈ ಕಾರಣದಿಂದಾಗಿ ಹೂವಿನ ಮಾರುಕಟ್ಟೆಯಲ್ಲಿ ಅಲ್ಪಾಯುಷಿ ಹೂವಿನ ಧಾರಣೆಯಲ್ಲಿ ತೀವ್ರ ತರದ ಏರಿಳಿತಗಳಾಗುತ್ತಿದ್ದು, ಹೂವಿನ ಉದ್ಯಮ ಹೆಚ್ಚು ಕಷ್ಟ ನಷ್ಟಗಳಿಗೆ ಎಡೆ ಮಾಡಿಕೊಡುತ್ತಿರುತ್ತದೆ. ಅತ್ಯಂತ ಅಲ್ಪಾವಧಿಯಲ್ಲಿ ಹೂವಿನ ಪೂರೈಕೆಯಲ್ಲಿ ಬದಲಾವಣೆ ಸಾಧ್ಯವಿಲ್ಲದಿರುವುದು ಇದಕ್ಕೆ ಕಾರಣವಾಗಿದೆ. ಆದುದರಿಂದ ಬೆಲೆ ನಿರ್ಧಾರದಲ್ಲಿ ಬೇಡಿಕೆಯು ಮಹತ್ತರವಾದ ಪಾತ್ರವನ್ನು ವಹಿಸುತ್ತದೆ.

ದೇಶೀಯ ಪುಷ್ಪ ಮಾರುಕಟ್ಟೆಯ ಬಗ್ಗೆ ಸಾಕಷ್ಟು ಅಧ್ಯಯನಗಳು ನಡೆಯದೇ ಇರುವುದರಿಂದ ಈ ಮಾರುಕಟ್ಟೆಗೆ ಸಂಬಂಧಿಸಿದ ವಿಷಯಗಳು ಹೆಚ್ಚು ಲಭ್ಯವಿಲ್ಲ. ಉತ್ಪಾದಕರು ಮತ್ತು ಮಾರಾಟಗಾರರಲ್ಲಿ ಪುಷ್ಪ ಉತ್ಪನ್ನಗಳ ಉತ್ಪಾದನೆ ಮತ್ತು ಮಾರಾಟದ

ಬಗ್ಗೆ ಸೂಕ್ತ ದಾಖಲೆಗಳನ್ನು ಇಟ್ಟುಕೊಳ್ಳುವ ಪ್ರವೃತ್ತಿಯಿಲ್ಲದಿರುವುದರಿಂದ ಮಾರುಕಟ್ಟೆ ಶಕ್ತಿಗಳ ಮುನ್ನಂದಾಜು ಬಹಳ ಕಷ್ಟದಾಯಕ. ಕ್ರಿ.ಶ. ೨೦೦೨ರಲ್ಲಿ ನಡೆಸಲಾದ ಅಧ್ಯಯನವೊಂದರಲ್ಲಿ ದೇಶದ ಆಂತರಿಕ ಪುಷ್ಪ ವಿನಿಮಯವನ್ನು ಅಂದಾಜು ಮಾಡಲಾಗಿದ್ದು, ಅದು ವಾರ್ಷಿಕ ಸುಮಾರು ರೂ.೫೦೦ ಕೋಟಿಗಳಿಗಿಂತಲೂ ಅಧಿಕವಾಗಿದೆ ಎಂದು ತಿಳಿದು ಬಂದಿರುತ್ತದೆ.[೩೮] ಅದರಲ್ಲಿ ದೆಹಲಿಯಂತಹ ಮಹಾನಗರವೊಂದರಲ್ಲೇ ಸುಮಾರು ರೂ.೫೦ ಕೋಟಿಗಿಂತಲೂ ಅಧಿಕ ಮೌಲ್ಯದ ಪುಷ್ಪ ವಿನಿಮಯವಾಗುತ್ತಿದೆ. ಮಹಾನಗರಗಳ ಪಟ್ಟಿಯಲ್ಲಿರುವ ಮುಂಬೈ, ಕೊಲ್ಕತ್ತಾ, ಚೆನ್ನೈ, ಬೆಂಗಳೂರು, ಹೈದರಾಬಾದ್ ಮೊದಲಾದೆಡೆ ವಾರ್ಷಿಕ ಸರಾಸರಿ ರೂಪಾಯಿ ಹತ್ತು ಕೋಟಿಗಳಿಗಿಂತಲೂ ಅಧಿಕ ಮೌಲ್ಯದ ಪುಷ್ಪ ವ್ಯಾಪಾರ ನಡೆಯುತ್ತದೆಂದು ಅಧ್ಯಯನವು ತಿಳಿಸುತ್ತದೆ.[೩೯]

ಪುಷ್ಪಗಳ ಅಲ್ಪಾಯುಷ್ಯ, ಬೆಳೆಗಾರರ ಹರಡಿರುವಿಕೆ ಮತ್ತು ಸಂಘಟನಾರಾಹಿತ್ಯತೆಯಿಂದಾಗಿ ಮಾರುಕಟ್ಟೆಯಲ್ಲಿ ಉತ್ಪಾದಕನ ಚೌಕಾಶಿ ಸಾಮರ್ಥ್ಯ ತೀರಾ ಕಡಿಮೆಯಾಗಿರುತ್ತದೆ. ಈ ಕಾರಣದಿಂದಾಗಿ ಆತನು ಪುಷ್ಪ ಮಾರುಕಟ್ಟೆಯ ಲಾಭದಲ್ಲಿ ಕಡಿಮೆ ಪಾಲನ್ನು ಪಡೆಯುತ್ತಾನೆ. ಗ್ರಾಹಕನು ತೆರುವ ಪುಷ್ಪ ಬೆಲೆಯಲ್ಲಿ ಉತ್ಪಾದಕರ, ಮಾರಾಟಗಾರರ ಹಾಗೂ ಮಧ್ಯವರ್ತಿಗಳ ಪಾಲನ್ನು ಲೆಕ್ಕಾಚಾರ ಮಾಡುವ ಸಲುವಾಗಿ ಕೆಲವು ಅಧ್ಯಯನಗಳು ನಡೆದಿರುತ್ತವೆ. ರಾಜಸ್ಥಾನದ ಜೈಪುರ ಜಿಲ್ಲೆಯಲ್ಲಿ ಚೆಂಡು ಹೂವಿನ ಬಗ್ಗೆ ನಡೆಸಲಾದ ಮಾರುಕಟ್ಟೆ ಅಧ್ಯಯನದ ಪ್ರಕಾರ ಉತ್ಪಾದಕನಿಗೆ ಬೆಲೆಯಲ್ಲಿ ಸಿಗುವ ಪಾಲು ಕೇವಲ ಶೇಕಡಾ ೩೧.೨೭. ಮಧ್ಯವರ್ತಿಗಳು ಮತ್ತು ಮಾರಾಟಗಾರರು ಬೆಲೆಯ ೬೮.೭೩ ಭಾಗವನ್ನು ತಮ್ಮದಾಗಿಸಿಕೊಳ್ಳುತ್ತಾರೆಂದು ತಿಳಿದು ಬಂದಿದೆ[೪೦].

ಕರ್ನಾಟಕದಲ್ಲಿ ಈ ವಿಚಾರವಾಗಿ ನಡೆಸಿದ ಅಧ್ಯಯನದ ಪ್ರಕಾರ ಮಲ್ಲಿಗೆ, ಚೆಂಡು ಹೂ ಮತ್ತು ಸೇವಂತಿಗೆ ಬೆಳೆಸುವ ರೈತರಿಗೆ ಮಾರುಕಟ್ಟೆ ಬೆಲೆಯಲ್ಲಿ ಸಿಗುವ ಪಾಲು ಏನೇನೂ ತೃಪ್ತಿದಾಯಕವಾಗಿಲ್ಲ. ಮಲ್ಲಿಗೆ ಹೂವಿನ ಮಾರುಕಟ್ಟೆ ಬೆಲೆಯಲ್ಲಿ ರೈತರ ಪಾಲು ಶೇ. ೫೬ ಆಗಿದ್ದು, ಚೆಂಡು ಹೂವಿನ ಬೆಲೆಯಲ್ಲಿ ಶೇ. ೪೨.೫ ಹಾಗೂ ಸೇವಂತಿಗೆಯ ಬೆಲೆಯಲ್ಲಿ ಶೇ. ೩೬ ಎಂದು ಅಧ್ಯಯನವೊಂದು ತಿಳಿಸುತ್ತದೆ.[೪೧] ಇಂತಹದೇ ಅಧ್ಯಯನವನ್ನು ಆಧುನಿಕ ಪುಷ್ಪಗಳಾದ ಗ್ಲೇಡಿಯೋಲಸ್, ಜರ್ಬೇರ ಮತ್ತು ಆಸ್ಟರ್ ಹೂವುಗಳಿಗೆ ಸಂಬಂಧಿಸಿದಂತೆ ನಡೆಸಲಾಗಿದ್ದು, ಈ ಹೂಗಳನ್ನು ಬೆಳೆಯುವ ರೈತರ ಸ್ಥಿತಿ ಇನ್ನೂ ಚಿಂತಾಜನಕವಾಗಿದೆ.[೪೨] ಗುಲಾಬಿ ಹೂವಿನ ಮಾರುಕಟ್ಟೆ ಬೆಲೆಯಲ್ಲಿ ರೈತರು ಶೇ.೨೫ ರಿಂದ ಶೇ೩೭ ರವರೆಗಿನ ಪಾಲು ಪಡೆಯಲು ಶಕ್ತರಾದರೆ ಗ್ಲೇಡಿಯಾಲಸ್‌ನಲ್ಲಿ ಶೇ.೨೮ ರಿಂದ ಶೇ. ೪೮, ಜರ್ಬೇರಾದಲ್ಲಿ ಶೇ. ೪೦ ಹಾಗೂ ಆಸ್ಟರ್ ಹೂವಿನಲ್ಲಿ ಶೇ.೨೫ ರಿಂದ ಶೇ.೩೭ ಉತ್ಪಾದಕರ ಪಾಲು ಪಡೆಯುತ್ತಾರೆ. ಇದು ಪುಷ್ಪೋದ್ಯಮದಲ್ಲಿ ಬೆಳೆಗಾರರ ಅಸಹಾಯಕ ಸ್ಥಿತಿಯನ್ನು ಬಿಂಬಿಸುತ್ತದೆ.[೪೩] ೧೯೮೧ರಲ್ಲಿ ಅಗರ್‌ವಾಲರು ನಡೆಸಿದ

ಅಧ್ಯಯನದ ಪ್ರಕಾರ ಮಾರುಕಟ್ಟೆಯ ಸಮಸ್ಯೆಗೆ ಸೇವಂತಿಗೆ ಬೆಳೆಗಾರರಿಗೆ ಮಾರುಕಟ್ಟೆಯ ಪುಷ್ಪ ಮೌಲ್ಯದಲ್ಲಿ ಸಿಗುವ ಪಾಲು ಕೇವಲ ಶೇ.೪೦ ಮಾತ್ರ.[೪೪] ಅದೇ ವರ್ಷ ಗಾಯಕ್‌ವಾಡ್‌ರವರು ಮಲ್ಲಿಗೆ ಕೃಷಿಯ ಮಾರಾಟ ಸಮಸ್ಯೆಯ ಬಗೆಗೆ ನಡೆಸಿದ ಅಧ್ಯಯನದಲ್ಲಿಯೂ ಕೂಡಾ ಇದೇ ಫಲಿತಾಂಶ ದೊರೆತಿರುವುದು ಗಮನಾರ್ಹವಾದ ವಿಷಯವಾಗಿದೆ.[೪೫]

ದೇಶೀಯ ಪುಷ್ಪ ಮಾರುಕಟ್ಟೆಯಲ್ಲಿ ಬೆಲೆ ನಿರ್ಧಾರದಲ್ಲಿ ಬೇಡಿಕೆಯ ಪಾತ್ರ ಹಿರಿದಾಗಿದೆ. ಹೂವಿನ ಪೂರೈಕೆಯ ಸ್ಥಿತಿಸ್ಥಾಪಕತೆಯು ಸಾಪೇಕ್ಷವಾಗಿ ಸ್ಥಿರವಾಗಿರುವುದರಿಂದ, ಪೂರೈಕೆಯ ಪ್ರಭಾವವು ಬೇಡಿಕೆಯಷ್ಟು ತೀವ್ರತೆಯನ್ನು ಹೊಂದಿರುವುದಿಲ್ಲ. ಬೇಡಿಕೆಯು ಹೂವಿನ ಬೆಲೆಯ ಪರಿಣಾಮಕ್ಕಿಂತಲೂ ಅಧಿಕವಾಗಿ ಸಂಪ್ರದಾಯ, ಆಚರಣೆ, ಸಾಮಾಜಿಕ ಸ್ಥಾನಮಾನದ ವಿಚಾರಗಳನ್ನು ಒಳಗೊಂಡಿರುತ್ತದೆ.[೪೬] ಹೂವಿನ ಬೇಡಿಕೆಯ ಮೇಲೆ ಹೂವಿನ ಗುಣಮಟ್ಟದ ಪ್ರಭಾವವಿದೆ. ಹೂವಿನ ಗುಣಮಟ್ಟವನ್ನು ಹೂವಿನ ಬಣ್ಣ, ಗಾತ್ರ, ಸುಗಂಧ ಮತ್ತು ನೈಸರ್ಗಿಕ ತಾಜಾತನ (Freshness) ರೈತನು ಮಾರುಕಟ್ಟೆ ಬೆಲೆಯ ಪಾಲನ್ನು ಹೆಚ್ಚಿಸಿಕೊಳ್ಳಲು ಮಾಡಿಕೊಳ್ಳುವ ಶೀತಲೀಕರಣದ ವ್ಯವಸ್ಥೆ, ಶ್ರೇಣೀಕರಣ, ಮತ್ತು ಬೆಳೆಗಾರರ ಸಂಘಟನೆ ಇತ್ಯಾದಿ ಅಂಶಗಳನ್ನು ಅವಲಂಬಿಸಿಕೊಂಡಿರುತ್ತದೆ.[೪೭]

ಪುಷ್ಪ ಮಾರುಕಟ್ಟೆಗೆ ಸಂಬಂಧಿಸಿದಂತೆ ಹಲವಾರು ಅಧ್ಯಯನಗಳು ನಡೆದಿದ್ದು, ಅವುಗಳಲ್ಲಿ ಮಾರುಕಟ್ಟೆಯ ವಿಭಿನ್ನ ವೆಚ್ಚಗಳ ಬಗ್ಗೆ ಮೊಗ್ಗು ಗುಲಾಬಿಗೆ ಸಂಬಂಧಿಸಿ ಪಶ್ಚಿಮ ಬಂಗಾಳದ ನೊಡಿಯ ಜಿಲ್ಲೆಯಲ್ಲಿ ನಡೆದಿರುವ ಅಧ್ಯಯನವೂ ಒಂದು.[೪೮] ಮೊಗ್ಗು ಗುಲಾಬಿಯ ಮಾರಾಟ ವೆಚ್ಚದಲ್ಲಿ ಶೇ.೨೩.೬ ರಷ್ಟು ಕೂಲಿ ಮತ್ತು ಇತರ ಶ್ರಮ ಸಂಬಂಧಿ ಪಾವತಿಯಾಗಿದ್ದರೆ ಮಾರುಕಟ್ಟೆಯಲ್ಲಿ ಸಾಗಾಣಿಕೆಗೆ ತಗಲಿದ ಒಟ್ಟು ವೆಚ್ಚ ಶೇ.೭.೪. ಬಾಡಿಗೆ ಮತ್ತು ತೆರಿಗೆ ಶೇ. ೫.೦೭. ಇತರ ಶುಲ್ಕಗಳು ಶೇ.೨.೮೨ ಮತ್ತು ಪುಷ್ಪಗಳ ಗುಣಮಟ್ಟದ ಕುಸಿತ ಮತ್ತು ಹಾಳಾಗುವಿಕೆಯಿಂದ ಉಂಟಾಗುವ ನಷ್ಟವು ಶೇ.೯.೭೬. ಎಂದು ಈ ಅಧ್ಯಯನವು ತಿಳಿಸುತ್ತದೆ. ಗ್ರಾಹಕರಿಗೆ ತಲಪುವ ವಿವಿಧ ಜಾಲಗಳ ಬಗ್ಗೆ ಕೆಲವು ಅಧ್ಯಯನಗಳು ನಡೆದಿರುತ್ತವೆ. ಅವುಗಳಲ್ಲಿ ಕ್ರಿ.ಶ. ೧೯೭೬ ರಲ್ಲಿ ನಡೆದ ವರದರಾಜನ್ ಮತ್ತು ರವೀಂದ್ರರ ಅಧ್ಯಯನ[೪೯] ಮತ್ತು ಜಿಯಾವುಲ್ಲಾರ ಅಧ್ಯಯನಗಳು ಮಾರುಕಟ್ಟೆಯ ವಿವಿಧ ಜಾಲಗಳನ್ನು ಸೂಚಿಸುತ್ತವೆ.[೫೦] ದೆಬಾಶಿಶ್ ಸೇನ್ ಗುಪ್ತಾ ಮತ್ತು ರಾಜ್‌ಕಮಲರ ಅಧ್ಯಯನದಲ್ಲಿ ಮಾರುಕಟ್ಟೆಯ ಜಾಲಗಳನ್ನು ಸವಿಸ್ತಾರವಾಗಿ ವಿವರಿಸಲಾಗಿದ್ದು, ಅವುಗಳನ್ನು ಆರು ವಿಭಾಗಗಳಾಗಿ ವಿಂಗಡಿಸಲಾಗಿದೆ.[೫೧]

- ಉತ್ಪಾದಕ → ಕಮಿಷನ್ ಏಜೆಂಟ್ → ಚಿಲ್ಲರೆ ವ್ಯಾಪಾರಿ → ಗ್ರಾಹಕ
- ಉತ್ಪಾದಕ → ಚಿಲ್ಲರೆ ವ್ಯಾಪಾರಿ → ಅಂತಿಮ ಗ್ರಾಹಕ
- ಉತ್ಪಾದಕ → ನೇರ ಗ್ರಾಹಕ
- ಉತ್ಪಾದಕ → ಸ್ಥಳೀಯ ಖರೀದಿಗಾರ → ಅಂತಿಮ ಗ್ರಾಹಕ
- ಉತ್ಪಾದಕ → ರಖಂ ವ್ಯಾಪಾರಿ → ಚಿಲ್ಲರೆ ವ್ಯಾಪಾರಿ → ಗ್ರಾಹಕ
- ಉತ್ಪಾದಕ → ಗುತ್ತಿಗೆದಾರ → ಚಿಲ್ಲರೆ ವ್ಯಾಪಾರಿ → ಗ್ರಾಹಕ

ಆದರೆ ಪುಷ್ಪ ವ್ಯವಹಾರದಲ್ಲಿ ನಿರ್ದಿಷ್ಟವಾದ ಜಾಲವನ್ನು ಉತ್ಪಾದಕ ಮತ್ತು ಗ್ರಾಹಕರ ಮಧ್ಯೆ ಗುರುತಿಸುವ ಹಾಗಿಲ್ಲ. ಅದು ಪ್ರದೇಶ ಮತ್ತು ಹೂವಿನ ಸ್ವರೂಪಕ್ಕನುಗುಣವಾಗಿ ವಿಭಿನ್ನವಾಗಿರುತ್ತದೆ.

## ೨.೬. ಅಂತಾರಾಷ್ಟ್ರೀಯ ಮಾರಾಟ ಮತ್ತು ಸಹಯೋಗ

ಭಾರತದ ಪುಷ್ಪಗಳು ವಿಶ್ವದ ಅನೇಕ ರಾಷ್ಟ್ರಗಳಿಗೆ ರಫ್ತಾಗುತ್ತಿವೆ. ಭಾರತದ ಪುಷ್ಪ ಮಾರಾಟದ ದಿಕ್ಕನ್ನು ಕೋಷ್ಟಕ ೨.೬ ತೋರಿಸುತ್ತದೆ.

ಭಾರತದಿಂದ ಅತ್ಯಧಿಕ ಹೂಗಳನ್ನು ಆಮದು ಮಾಡಿಕೊಳ್ಳುತ್ತಿರುವ ಪಂಚ ಮಹಾದೇಶಗಳೆಂದರೆ ಅಮೇರಿಕಾ (೨೨.೯%) ನೆದರ್‌ಲ್ಯಾಂಡ್ (೧೨.೪%) ಇಂಗ್ಲೆಂಡ್ (೧೧.೮%) ಜರ್ಮನಿ (೯.೭%) ಮತ್ತು ಜಪಾನು (೫.೭%). ಭಾರತದ ಪುಷ್ಪ ರಫ್ತಿನಲ್ಲಿ ಈ ಐದು ದೇಶಗಳ ಪಾಲು ಶೇ.೬೨.೫ ರಷ್ಟು. ಕೋಷ್ಟಕ ೨.೬ರಲ್ಲಿರುವ ೧೬ ರಾಷ್ಟ್ರಗಳು ಭಾರತದ ಒಟ್ಟು ಪುಷ್ಪ ರಫ್ತಿನ ಶೇ.೮೪.೫೭ ರಷ್ಟು ಪ್ರಮಾಣಕ್ಕೆ ಮಾರುಕಟ್ಟೆ ಒದಗಿಸುತ್ತದೆ. ಭಾರತದ ಪುಷ್ಪ ರಫ್ತಿನಲ್ಲಿ ಉಳಿದೆಲ್ಲಾ ದೇಶಗಳ ಪಾಲು ಕೇವಲ ಶೇ.೧೫.೪೩ ರಷ್ಟು ಮಾತ್ರ. ಆದರೆ ವಿಶ್ವದ ಬಹುತೇಕ ರಾಷ್ಟ್ರಗಳು ಭಾರತದಿಂದ ಹೂಗಳನ್ನು ತರಿಸಿಕೊಳ್ಳುತ್ತವೆ ಎನ್ನುವುದು ದೇಶದ ಪುಷ್ಪೋದ್ಯಮದ ಭವಿಷ್ಯವನ್ನು ಅಂದಾಜಿಸುವ ದೃಷ್ಟಿಯಿಂದ ಅತ್ಯಂತ ಮಹತ್ವ ಪೂರ್ಣವಾದ ವಿಷಯವಾಗಿದೆ[೫೨].

### ಕೋಷ್ಟಕ ೨.೬.

### ಭಾರತದ ಪುಷ್ಪ ಮಾರಾಟದ ದಿಕ್ಕು

| ರಾಷ್ಟ್ರ | ರಫ್ತು | ರಾಷ್ಟ್ರ | ರಫ್ತು |
|---|---|---|---|
| ಯು.ಎಸ್.ಎ. | ೪೮೭.೫ | ಆಸ್ಟ್ರೇಲಿಯಾ | ೪೧.೫ |
| ನೆದರ್ ಲ್ಯಾಂಡ್ | ೨೬೩.೮ | ಆಸ್ಟ್ರಿಯಾ | ೪೧.೪ |
| ಯುನೈಟೆಡ್ ಕಿಂಗ್‌ಡಂ | ೨೫೧.೨ | ಚೈನಾ | ೩೯.೪ |
| ಜರ್ಮನಿ | ೨೦೫.೭ | ಪೋಲೆಂಡ್ | ೩೪.೩ |
| ಜಪಾನ್ | ೧೨೧.೧ | ಸ್ಪೈನ್ | ೨೯.೯ |
| ಇಟಲಿ | ೮೫.೯ | ಕೆನಡಾ | ೨೨.೧ |
| ಫ್ರಾನ್ಸ್ | ೫೩.೧ | ಸ್ವೀಡನ್ | ೨೧.೨ |
| ಯು.ಎ.ಇ. | ೪೯.೦ | ಇತರ | ೩೨೮.೯ |
| ಬೆಲ್ಜಿಯಂ | ೪೯.೦ | | |
| ಭಾರತದ ಒಟ್ಟು ರಫ್ತು | | | ೨೧೨೭೦ |

ಆಧಾರ: **Debashi Sengupta, Floricultural Marketing in India, 2010,P.21.**

ಭಾರತದ ಪುಷ್ಪ ಮತ್ತು ಪುಷ್ಪ ಉತ್ಪನ್ನಗಳ ರಫ್ತು ಮೌಲ್ಯವನ್ನು ಕೋಷ್ಟಕ ೨.೭ ತೋರಿಸುತ್ತದೆ.

### ಕೋಷ್ಟಕ ೨.೭

### ಪುಷ್ಪ ಮತ್ತು ಪುಷ್ಪ ಉತ್ಪನ್ನಗಳ ರಫ್ತು

| ವರ್ಷ | ರಫ್ತು ಮೌಲ್ಯ | ಬದಲಾವಣೆ (%) |
|---|---|---|
| ೨೦೦೦-೦೧ | ೧೧೫೩೯.೧೪ | - |
| ೨೦೦೧-೦೨ | ೧೨೩೧೨.೩೧ | + ೬.೭೦ |
| ೨೦೦೨-೦೩ | ೧೬೫೮೫.೬೮ | + ೩೪.೭೧ |
| ೨೦೦೩-೦೪ | ೨೨೧೧೦.೯೮ | + ೩೩.೩೧ |
| ೨೦೦೪-೦೫ | ೨೯೯೪.೨೬ | + ೩೫.೪೨ |
| ೨೦೦೫-೦೬ | ೩೮೩೮.೬೪ | + ೨೮.೨ |
| ೨೦೦೬-೦೭ | ೪೪೮೭.೩೪ | + ೧೬.೯ |
| ೨೦೦೭-೦೮ | ೫೫೦೫.೯೪ | + ೨೨.೭ |

**Source : Agricultural and Processed Food Products Export Development Authority (APEDA) 2008.P.33.**

ಭಾರತದ ಪುಷ್ಪ ರಫ್ತಿನ ಗಳಿಕೆ ವರ್ಷದಿಂದ ವರ್ಷಕ್ಕೆ ಅವ್ಯಾಹತವಾಗಿ ಏರುತ್ತಾ ಹೋಗುವುದನ್ನು ಗಮನಿಸಬಹುದು. ೨೦೦೧-೦೨ರಲ್ಲಿ ರಫ್ತು ಮೌಲ್ಯದಲ್ಲಿ ಶೇ.೬.೭ ರಷ್ಟು ಏರಿಕೆ ಕಂಡು ಬಂದರೆ ಮರುವರ್ಷ ರಫ್ತು ಮೌಲ್ಯವು ಶೇ.೩೪.೭೧ರ ಏರಿಕೆಯನ್ನು ದಾಖಲಿಸಿದೆ. ೨೦೦೩-೦೪ ರಲ್ಲಿ ರಫ್ತು ಮೌಲ್ಯದಲ್ಲಿ ಶೇ.೩೩.೩೧ ರಷ್ಟು ಏರಿಕೆಯಾಗಿತ್ತು. ೨೦೦೪-೦೫ ರಲ್ಲಿ ರಫ್ತು ಮೌಲ್ಯವು ಶೇ.೩೫.೪೨ ರಷ್ಟು ಏರಿಕೆಯನ್ನು ದಾಖಲಿಸಿದರೆ ೨೦೦೫-೦೬ ರಲ್ಲಿ ಶೇ.೨೮.೨ರ ಏರಿಕೆಯನ್ನು ದಾಖಲಿಸಿದೆ.[೫೩] ಹೀಗೆ ಪ್ರತಿವರ್ಷ ಭಾರತದ ಪುಷ್ಪ ಮಾರಾಟ ವಿದೇಶಿ ವಿನಿಮಯ ಗಳಿಕೆಯು ಹೆಚ್ಚಾಗುತ್ತಲೇ ಹೋಗುತ್ತಿರುವುದು ಪುಷ್ಪೋದ್ಯಮಕ್ಕೆ ಈ ದೇಶದಲ್ಲಿ ಭವ್ಯ ಭವಿಷ್ಯವಿರುವುದನ್ನು ಸೂಚಿಸುತ್ತದೆ.

ಭಾರತದ ಕೃಷಿರಂಗದಲ್ಲಿ ಜಾಗತೀಕರಣ ನೀತಿ, ಬೀಜ ನೀತಿ, ವಿಶ್ವ ವ್ಯಾಪಾರ ಸಂಘಟನೆಯ ಉನ್ನತ ತಂತ್ರಜ್ಞಾನದ ಪುಷ್ಪ ಉದ್ಯಮದಲ್ಲಿ ಒಪ್ಪಂದ ಮತ್ತು ಆರ್ಥಿಕ ಸುಧಾರಣಾ ನೀತಿಗಳು ಅಂತಾರಾಷ್ಟ್ರೀಯ ಕಂಪೆನಿಗಳ ಬಂಡವಾಳ ಹೂಡಿಕೆಗೆ ಎಡೆ ಮಾಡಿಕೊಟ್ಟವು. ೧೯೯೧-೯೬ರಲ್ಲಿ ೪೫ಕ್ಕಿಂತಲೂ ಅಧಿಕ ವೈವಿಧ್ಯತೆಯ ಹೂವಿನ ೧೫೪೫ ಮಿಲಿಯ ಬಿಡಿ ಹೂಗಳ ಉತ್ಪಾದನೆಗಾಗಿ ಸುಮಾರು ೫೦೦ ಹೆಕ್ಟೇರ್ ಪ್ರದೇಶದಲ್ಲಿ ೧೫೦೦ ಕೋಟಿ ೧ಂತಲೂ ಅಧಿಕ ಬಂಡವಾಳವನ್ನು ಹೂಡಿಕೆ ಮಾಡಲಾಗಿದೆ.[೫೪] ಅವುಗಳಲ್ಲಿ ೭೦ ಘಟಕಗಳು ಪುಷ್ಪ ಉತ್ಪಾದನೆ ಮತ್ತು ರಫ್ತಿನಲ್ಲಿ ಸಂಪೂರ್ಣ ಯಶಸ್ಸನ್ನು ಕಂಡಿರುತ್ತವೆ. ಬಹುತೇಕ ಪುಷ್ಪ ಉದ್ದಿಮೆಗಳು ತಮ್ಮ ಪೂರ್ಣ ಉತ್ಪಾದನಾ ಮಟ್ಟದಲ್ಲಿ ಕಾರ್ಯವೆಸಗದ ಕಾರಣ ಬಂಡವಾಳ ಹೂಡಿಕೆಯ ಪೂರ್ಣ ಫಲ ದೊರಕಿಲ್ಲ. ಒಟ್ಟು ಘಟಕಗಳಲ್ಲಿ ೩೫ ಬೆಂಗಳೂರಿನ ಸುತ್ತ ಮುತ್ತ ಕಾರ್ಯವೆಸಗುತ್ತವೆ. ಉಳಿದಂತೆ ಮಹಾರಾಷ್ಟ್ರದ ೧೫೦ ಹೆಕ್ಟೇರ್ ಪ್ರದೇಶವನ್ನು ಒಳಗೊಂಡ ೩೯ ಘಟಕಗಳು ಹಾಗೂ ತಮಿಳುನಾಡಿನ ೧೫೨ ಹೆಕ್ಟೇರ್ ಪ್ರದೇಶವನ್ನು ಒಳಗೊಂಡ ೧೨ ಘಟಕಗಳು ಪುಷ್ಪೋದ್ಯಮದಲ್ಲಿ ಭಾಗಿಗಳಾಗಿವೆ.[೫೫] ಇವುಗಳು ಅಂತಾರಾಷ್ಟ್ರೀಯ ವಿಮಾನ ನಿಲ್ದಾಣದ ಆಸುಪಾಸಿನ ಪಟ್ಟಣ ಪ್ರದೇಶಗಳಲ್ಲಿ ನೆಲೆಗೊಂಡಿದ್ದು, ರಫ್ತು ಉದ್ದಿಮೆಯಾಗಿರುತ್ತವೆ. ಈ ಬಹು ಮೊತ್ತದ ಹೂಡಿಕೆಯ ಪುಷ್ಪ ಉದ್ದಿಮೆಗಳು ನೆದರ್‌ಲ್ಯಾಂಡ್ಸ್, ಇಸ್ರೇಲ್ ಮತ್ತು ಫ್ರಾನ್ಸ್‌ಗಳ ಸಹಯೋಗದಿಂದ ನಡೆಯುತ್ತವೆ.

ಹೊಸ ಆರ್ಥಿಕ ನೀತಿಯ ಅನುಷ್ಠಾನದ ತರುವಾಯ ದೇಶೀಯ ಪುಷ್ಪವಲಯದಲ್ಲಿ ರಫ್ತು ಉದ್ದೇಶಿತ ಪುಷ್ಪ ಯೋಜನೆಗಳನ್ನು ವಿದೇಶಿ ಸಹಯೋಗದೊಂದಿಗೆ ಅಭಿವೃದ್ಧಿ ಪಡಿಸಲು ತೀರ್ಮಾನಿಸಲಾಯಿತು. ಕ್ರಿ.ಶ. ೧೯೯೧ ರಲ್ಲಿ ೨೬ ವಿದೇಶಿ ಸಹಯೋಗದ ಪುಷ್ಪ ಅಭಿವೃದ್ಧಿ ಯೋಜನೆಗೆ ರಾಷ್ಟ್ರದ ವಿವಿಧ ಭಾಗಗಳಲ್ಲಿ ಚಾಲನೆ ನೀಡಲಾಯಿತು. ಇದರ

ಪರಿಣಾಮವಾಗಿ ಕ್ರಿ. ಶ. ೧೯೯೪ ರಲ್ಲಿ ಇಂಡೋ-ಡಚ್ ಸಹಯೋಗದೊಂದಿಗೆ ಬೆಂಗಳೂರು, ಪುಣೆ ಮತ್ತು ನಾಸಿಕ್ ನಗರಗಳಲ್ಲಿ ಪುಷ್ಪ ಉದ್ಯಮವನ್ನು ಅಭಿವೃದ್ಧಿ ಪಡಿಸುವ ಪ್ರಯತ್ನವನ್ನು ಅಂತಾರಾಷ್ಟ್ರೀಯ ಸಹಯೋಗದೊಂದಿಗೆ ಮಾಡಲಾಯಿತು.

ಭಾರತದ ಪ್ರಮುಖ ರಫ್ತು ಉತ್ತೇಜಕ ಪುಷ್ಪೋದ್ಯಮ ಯೋಜನೆಗಳು ಇವು:

- **ಬಂಬ್ನಾ ಮೇಜರ್ ಬಯೋಟಿಕ್ ಲಿಮಿಟೆಡ್**[೫೬] (Bumbna Major Biotech Ltd.): ಇದು ಶೇ. ೧೦೦ ರಫ್ತು ಉತ್ತೇಜನ ಪುಷ್ಪ ಯೋಜನೆಯಾಗಿದ್ದು, ಇದರ ಸ್ಥಾಪನಾ ವೆಚ್ಚ ರೂ.೭.೫ ಕೋಟಿ. ಮಹಾರಾಷ್ಟ್ರದ ಪುಣೆ ಜಿಲ್ಲೆಯ ಜಾಂಭುಲ್ ಗ್ರಾಮದಲ್ಲಿ ವಾರ್ಷಿಕ ೬ ಮಿಲಿಯ ಬಿಡಿ ಹೂಗಳ ಉತ್ಪಾದನಾ ಉದ್ದೇಶದಿಂದ ಇದರ ಸ್ಥಾಪನೆಯಾಗಿದೆ. ಇದಕ್ಕಾಗಿ ಹಾಲೆಂಡ್‌ನ ಪ್ರಸಿದ್ಧ ಬಂಬ್ನಾ ಪುಷ್ಪೋದ್ಯಮ ಕಂಪೆನಿಯೊಂದಿಗೆ ತಾಂತ್ರಿಕ ಸಹಯೋಗವನ್ನು ಮಾಡಿಕೊಳ್ಳಲಾಗಿದೆ.

- **ಡೆಕ್ಕಾನ್ ಪ್ಲೋರಾಬೇಸ್ ಲಿಮಿಟೆಡ್** (Deccan Florabase Ltd.): ಈ ಯೋಜನೆಯು ರೂ.೭ ಕೋಟಿ ಬಂಡವಾಳ ಹೂಡಿಕೆಯ ಸಂಪೂರ್ಣ ರಫ್ತು ಉದ್ದೇಶಿತ ಮಹಾರಾಷ್ಟ್ರದ ಪುಣೆ ಜಿಲ್ಲೆಯ ಲೋನಾವಾಲದ ಸಮೀಪ ತಲೆಗಾನ್‌ನಲ್ಲಿ ಗುಲಾಬಿ ಬೆಳೆಯುವ ಉದ್ಯಮವಾಗಿದೆ. ಇದರ ಉದ್ದೇಶ ೧೧.೨೫ ಹೆಕ್ಟೇರ್ ಪ್ರದೇಶದಲ್ಲಿ ವಾರ್ಷಿಕ ೯ ಮಿಲಿಯ ಬಿಡಿ ಹೂಗಳ ಉತ್ಪಾದನೆಯಾಗಿರುತ್ತದೆ. ಪ್ರಸಿದ್ಧ ಗುಲಾಬಿ ತಳಿಗಳಾದ ಅಲ್ಸಮೀರ್ ಗೋಲ್ಡ್, ಓಸಿಯಾನಾ ಸಮುರಾಯ್ ತಳಿಗಳನ್ನು ಅಭಿವೃದ್ಧಿಪಡಿಸುವುದಕ್ಕಾಗಿ ಇದನ್ನು ಸ್ಥಾಪಿಸಲಾಗಿದೆ.

- ಹ್ಯಾರಿಸನ್ಸ್ ಯುನಿವರ್ಸಲ್ ಫ್ಲವರ್ಸ್ ಲಿಮಿಟೆಡ್ (Harisens Universal Flowers Ltd.): ಬೆಂಗಳೂರು ನಗರದ ಹೊರವಲಯದಲ್ಲಿ ಎರಡು ಹೆಕ್ಟೇರ್ ಪ್ರದೇಶದಲ್ಲಿ ಗುಲಾಬಿ ಕೃಷಿಯ ಅಭಿವೃದ್ಧಿಯ ಉದ್ದೇಶದೊಂದಿಗೆ ಹಾರಿಸನ್ಸ್ ಯುನಿವರ್ಸಲ್ ಫ್ಲವರ್ಸ್ ತಲೆ ಎತ್ತಿದೆ. ಇದು ಫ್ರಾನ್ಸಿನ ಮೀಲಾಂಡ್ (Meilland) ಗ್ರೂಪ್‌ನೊಂದಿಗೆ ಮಾಡಿಕೊಂಡ ಒಪ್ಪಂದ ಪ್ರಕಾರ ಇದರಲ್ಲಿ ಆರು ಕೋಟಿ ಬಂಡವಾಳ ಹೂಡಲಾಗಿದೆ. ಈ ಯೋಜನೆಯಡಿ ಬೆಂಗಳೂರು ನಗರದ ಹೊರವಲಯದಲ್ಲಿ ಎರಡು ಹೆಕ್ಟೇರ್ ಪ್ರದೇಶದಲ್ಲಿ ರಫ್ತು ಉದ್ದೇಶಿತ ಗುಲಾಬಿ ಹೂವನ್ನು ಬೆಳೆಸಲಾಗುತ್ತಿದೆ.

- ಇಂದರ್ಯಾಣಿ ಬಯೋಟೆಕ್ (Indaryani Biotech): ಇದು ರೂ. ೭.೧೪ ಕೋಟಿ ಬಂಡವಾಳ ಹೂಡಿಕೆಯ ಮಹತ್ವಾಕಾಂಕ್ಷಿ ಪುಷ್ಪ ಉದ್ಯಮ ಯೋಜನೆಯಾಗಿದೆ. ಇದನ್ನು ಮಹಾರಾಷ್ಟ್ರದ ಪುಣೆ ನಗರದ ಮರ್ಕಾಲ್ ಗ್ರಾಮದಲ್ಲಿ ಸ್ಥಾಪನೆಗೊಳಿಸಿದ್ದು, ಮಲೇಶಿಯಾದ ಪ್ಲೋರಲ್ ಮ್ಯಾಕ್ಸ್(Floral Max) ಕಂಪೆನಿಯೊಂದಿಗೆ ಸಹಯೋಗ ಹೊಂದಿದೆ. ಇದು ಗುಲಾಬಿ ಹೂಗಳ ಉತ್ಪಾದನೆಗೆ ಸಂಬಂಧಿಸಿದ್ದು ಹಾಲೆಂಡ್‌ಗೆ ಈ ಹೂವುಗಳನ್ನು ರಫ್ತು ಮಾಡುವ ಉದ್ದೇಶದಿಂದ ಸ್ಥಾಪಿಸಲಾಗಿದೆ.

- **ಎಸ್ಸಾರ್ ಆಗ್ರೋಟೆಕ್ ಲಿಮಿಟೆಡ್** (Essar Agrotech Ltd.): ಮಹಾರಾಷ್ಟ್ರದ ಪುಣೆ ನಗರದ ಲೊನಾವಾಲ ಎಂಬಲ್ಲಿ ೫.೫.ಕೋಟಿ ಹೂಡಿಕೆಯಲ್ಲಿ ಗುಲಾಬಿ ಪುಷ್ಪದ ಉದ್ಯಮಕ್ಕಾಗಿ ಹಾಲೆಂಡ್‌ನ ತಾಂತ್ರಿಕ ಸಹಯೋಗದೊಂದಿಗೆ ೭ ಹೆಕ್ಟೇರ್ ಪ್ರದೇಶದಲ್ಲಿ ಗುಲಾಬಿ ಹೂಗಳ ಉತ್ಪಾದನೆಗಾಗಿ ಈ ಕಂಪೆನಿ ಸ್ಥಾಪಿಸಲ್ಪಟ್ಟಿದೆ. ಅತ್ಯುನ್ನತ ಗುಣಮಟ್ಟದ ವಿವಾಲ್ಡಿ (Vivaldi), ಪಾರಿಯೋ (Pareo), ಕಿಸ್ (Kiss) ಮತ್ತು ಸಾಂಗ್ರಿಯ (Sangriya) ತಳಿಗಳ ಗುಲಾಬಿ ಹೂವುಗಳನ್ನು ಇಲ್ಲಿ ಬೆಳೆಸಲಾಗುತ್ತಿದೆ.

- **ಇಂಡೋ ಬ್ಲೂಮ್ ಲಿಮಿಟೆಡ್** (Indo Bloom Ltd) : ಇದು ಬಾಲಿನೂರ್ ಪ್ಲಾಂಟೇಶನ್ಸ್ ಮತ್ತು ಇಂಡಸ್ಟ್ರೀಸ್‌ನ ಸಹಸಂಸ್ಥೆಯಾಗಿದ್ದು ನೆದರ್‌ಲ್ಯಾಂಡ್‌ನ ಪ್ಲೋಡರ್ ಬಿ.ವಿ. ಕಂಪೆನಿಯೊಂದಿಗೆ ತಾಂತ್ರಿಕ ಸಹಯೋಗ ಹೊಂದಿ ಪುಷ್ಪ ಉತ್ಪಾದನೆ ಮಾಡುವ ಘಟಕವಾಗಿದೆ.

- **ಕರಿಷ್ಮಾ ಪ್ಲೋರಿಕಲ್ಚರ್ ಲಿ.** (Karishma Floriculture Ltd.): ಇದು ಹರಿಯಾನದ ನಸೊಹ್ನಾದಲ್ಲಿ ಸ್ಥಾಪನೆಗೊಂಡ ಹಾಲೆಂಡ್‌ನ ಸಹಯೋಗದಿಂದ ನಡೆಯವ ಆಧುನಿಕ ಪುಷ್ಪೋದ್ಯಮ ಘಟಕ.

- **ಲಕ್ಷ್ಮಿ ಪ್ಲೋರಿಟೆಕ್ ಲಿ.** (Lakshmi Floritech Ltd): ಈ ಘಟಕ ಆಧುನಿಕ ಪುಷ್ಪ ಉದ್ಯಮಕ್ಕೆ ಸಂಬಂಧಿಸಿದ್ದು ಬೆಂಗಳೂರಿನ ಸಮೀಪ ನೆಲಮಂಗಲದಲ್ಲಿ ರೂ. ೫.೧ ಕೋಟಿ ಹೂಡಿಕೆ ಮಾಡಲಾದ ನೆದರ್‌ಲ್ಯಾಂಡ್ ಸಹಯೋಗದ ಘಟಕವಾಗಿರುತ್ತದೆ.

ಇವಲ್ಲದೆ ಮಾಕ್ಸ್‌ವರ್ತ್ ಓರ್ಚಾಡ್ಸ್ (ಇಂಡಿಯಾ) ಲಿಮಿಟ್ (Maxworth Orchard Ltd), ಓರಿಯಂಟಲ್ ಪ್ಲೋರಾಟೆಕ್ ಲಿ. (Oriental Flora Tech

Ltd), ಸದರ್ನ್ ಗ್ರೀನ್ ಫೀಲ್ಡ್ ಲಿಮಿಟೆಡ್ (Southern Green Field Ltd), ಟಾಬ್ರೋ ಇಂಡಸ್ಟ್ರೀಸ್ ಲಿಮಿಟೆಡ್ (Tabro Industries Ltd), ವಾಲ್‌ಪ್ಲಸ್ ಬಯೋಟೆಕ್ ಲಿಮಿಟೆಡ್ (Valplus Biotech Ltd) ಮೊದಲಾದವುಗಳು ಪ್ರಮುಖ ರಫ್ತು ಉದ್ದೇಶಿತ ಪುಷ್ಪ ಉದ್ಯಮ ಘಟಕಗಳು. ಇವುಗಳೊಂದಿಗೆ ಬಿರ್ಲಾ ಕಂಪೆನಿಯ ಮಂಜುಶ್ರೀ ಪ್ಲಾಂಟೇಶನ್ಸ್, ಮಹಾರಾಷ್ಟ್ರದ ಹೈಬ್ರಿಡ್ ಸೀಡ್ ಕಂಪೆನಿ, ಕಲ್ಕತ್ತಾ ಮೂಲದ ಸಿಂಘ್ವಿ ಇಂಟರ್‌ನ್ಯಾಶನಲ್ (Singhvi International) ಮತ್ತು ಮೈನೆಕ್ಸ್ ಏಜೆನ್ಸಿ (Minex Agency) ಗಳು ಒಣ ಪುಷ್ಪಗಳ ರಫ್ತಿನಲ್ಲಿ ನಿರತವಾಗಿದ್ದು ಇವು ಸರಾಸರಿ ವಾರ್ಷಿಕ ರೂ.೧೨ ಕೋಟಿಯ ಅಂತಾರಾಷ್ಟ್ರೀಯ ಪುಷ್ಪ ವ್ಯವಹಾರವನ್ನು ನಡೆಸುತ್ತವೆ.

ಪುಷ್ಪೋದ್ಯಮದಲ್ಲಿ ಬೊನ್‌ಸ್ಸಾ ಸಂಸ್ಕೃತಿ ಪ್ರಾಚೀನವಾದದ್ದು. ಇದು ಅಲಂಕಾರಿಕ ಗಿಡಗಳನ್ನು ಕುಬ್ಜ ರೂಪದಲ್ಲಿ ಬೆಳೆಸುವ ಉದ್ಯಮವಾಗಿದೆ. ಮೂಲತಃ ಚೀನೀಯರ ಸಂಸ್ಕೃತಿಯಿಂದ ಹುಟ್ಟಿಕೊಂಡ ಈ ಕಲೆ ಜಪಾನ್‌ನಲ್ಲಿ ಪೂರ್ಣ ಪ್ರಮಾಣದ ಬೆಳವಣಿಗೆಯನ್ನು ಕಂಡಿತು. ಈ ಉತ್ಪನ್ನಗಳಿಗೆ ಅಂತಾರಾಷ್ಟ್ರೀಯ ಮಟ್ಟದಲ್ಲಿ ಭಾರಿ ಬೇಡಿಕೆ ಇರುವುದರಿಂದ ಇವುಗಳ ಉತ್ಪಾದನೆಯು ಲಾಭದಾಯಕವಾಗಿದೆ. ಪುಷ್ಪೋದ್ಯಮದಲ್ಲಿ ಲಾಭದಾಯಕವಾದ ಇನ್ನೊಂದು ಪುಷ್ಪ ಉತ್ಪನ್ನ ಎಂದರೆ ಪುಷ್ಪ ಸುಗಂಧ ದ್ರವ್ಯ. ಸಾಂಪ್ರದಾಯಿಕ ಪುಷ್ಪವಾದ ಮಲ್ಲಿಗೆಯಿಂದ ಸುಗಂಧ ದ್ರವ್ಯವನ್ನು ತಯಾರಿಸಿ ಅಧಿಕ ಗಳಿಕೆಯನ್ನು ಅಂತಾರಾಷ್ಟ್ರೀಯ ಮಟ್ಟದಲ್ಲಿ ಮತ್ತು ದೇಶೀಯ ಮಟ್ಟದಲ್ಲಿ ಪಡೆಯಬಹುದು. ದಕ್ಷಿಣ ಭಾರತದ ಕರ್ನಾಟಕ ಮತ್ತು ತಮಿಳುನಾಡಿನ ಕೆಲವು ಭಾಗಗಳಲ್ಲಿ ಮಾತ್ರ ಈ ಉದ್ದಿಮೆಯು ಅಸ್ತಿತ್ವದಲ್ಲಿದೆ. ಇದನ್ನು ಸಾರ್ವತ್ರಿಕಗೊಳಿಸಿದಾಗ ಮಾತ್ರ ಮಲ್ಲಿಗೆ ಬೆಳೆಗಾರರಿಗೆ ಬೆಲೆ ಕುಸಿತದ ತೊಂದರೆಯಿಂದ ಮುಕ್ತಿ ಸಿಗಬಹುದು. ಅದರಂತೆ ಭಾರತವು ಒಣ ಪುಷ್ಪಗಳನ್ನು ಪುಷ್ಪೋದ್ಯಮದಲ್ಲಿ ಬಳಕೆ ಮಾಡಿಕೊಳ್ಳುತ್ತಿದ್ದು ಅವುಗಳನ್ನು ಯು.ಕೆ, ಜರ್ಮನಿ, ಇಟಲಿ, ನೆದರ್‌ಲ್ಯಾಂಡ್ಸ್, ಯು.ಎಸ್.ಎ ಮತ್ತು ಜಪಾನ್ ರಾಷ್ಟ್ರಗಳಿಗೆ ರಫ್ತು ಮಾಡಿ ವಿದೇಶಿ ವಿನಿಮಯ ಗಳಿಸುತ್ತದೆ.



ಭಾರತದ ಪುಷ್ಪೋದ್ಯಮ ಒಂದು ಸಂಕ್ರಮಣ ಕಾಲಘಟ್ಟದಲ್ಲಿದೆ. ಹೆಚ್ಚುತ್ತಿರುವ ನಿರ್ಯಾತದಿಂದಾಗಿ ಉದ್ಯಮವು ಉತ್ಕರ್ಷದ ಪಥದಲ್ಲಿದೆ. ವಿದೇಶೀ ಸಹಯೋಗದೊಡನೆ ಅನೇಕ ಪುಷ್ಪ ಉತ್ಪಾದನಾ ಘಟಕಗಳು ದೇಶದಲ್ಲಿ ತಲೆ ಎತ್ತಿವೆ. ಜಾಗತೀಕರಣದ ಒಳಿತುಗಳನ್ನು ಬಳಸಿಕೊಂಡು ಭಾರತದ ಪುಷ್ಪೋದ್ಯಮ ಅಭಿವೃದ್ಧಿ ಪಥದಲ್ಲಿ ಸಾಗುತ್ತಿದೆ. ದೇಶೀಯವಾಗಿ ಇನ್ನಷ್ಟು ಮಂದಿ ಉದ್ಯಮ ಸಾಹಸಿಗಳು ಈ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಂಡರೆ ಪುಷ್ಪೋದ್ಯಮವು ದೇಶೀಯ ಆರ್ಥಿಕತೆಯಲ್ಲೊಂದು ಗಣನೀಯ ಸಾಮರ್ಥ್ಯದ ಕ್ಷೇತ್ರವಾಗಿ ಅಭಿವೃದ್ಧಿಗೊಳ್ಳಲಿದೆ.

## ಉಲ್ಲೇಖಗಳು ಮತ್ತು ಟಿಪ್ಪಣಿಗಳು


೧. India – at a Glance, 2010, P. 17.

೨. ಪ್ರಭಾಕರ ಶಿಶಿಲ; ೨೦೦೧, ಅಬಿವೃದ್ಧಿ ಮತ್ತು ಯೋಜನಾ ಅರ್ಥಶಾಸ್ತ್ರ, ಕಲಾ ಪ್ರಕಾಶನ ಬೆಂಗಳೂರು, ಪು.೩೪೮.

೩. Thippaiah P; 2005, Floriculture in Karnataka: Performance, Problems and Prospects, Agricultural Development and Rural Transformation Unit, ISEC, Bangalore. P-6.

೪. The Govt.of India has adopted a new Indian Trade Classification, which is based on Harmonized System (HS) of Commodity Description and Coding System. The H.S. codes of Govt. of India follow the Brussels Tariff Nomenclature.

೫. ರಾಮನ್ ಜಿ.ಎಸ್; ೨೦೦೧, ಭಾರತದ ಅರ್ಥವ್ಯವಸ್ಥೆ, ಯುನೈಟೆಡ್ ಪಬ್ಲಿಕೇಷನ್ಸ್, ಮಂಗಳೂರು, ಪು-೪೬.

೬. Kolavavlli Shashi; Atheeg, L.K. and Xavier, Jacob.; 1991 Floriculture Industry in India, Oxford and IBH Publishing Co. Ltd., New Delhi, India, PP. 88-89.

೭. Gajanana T.M. and Sudha M.; 2005, Production and Marketing Research in Traditional Flowers, Ornamental Horticulture, P.28.

୮. Shamnugam V.; 2007, Commercial Flower Cultivation, Mohit Publications, New Delhi, PP 184-186

୯. Thippaiah, P.; 2005, Floriculture in Karnataka, ISEC, Bangalore, P-13

୧୦. Debashish Sengupta and Rajkamal; 2010, Floricultural Marketing in India, Excel Publication, P.3.

11.Chengappa, P.G. and P.V. Reddy; 2002, Post harvest Handling and Marketing of Traditional Flowers, Indian Society of Ornamental Horticultural, NHB, PP. 19-21.

12. Sudha M; 2001, Economics of Protected Cultivation of Cut Roses for International Markets: Role of Price, Production with Marketing, Agricultural Economics Research Review, 14 (1): PP. 1-15.

13. Deccan Herald, June 24,206, P. 12.

14. Gajanana T.M. and M.Sudha; 2005; Production and Marketing Research on Traditional Flowers, Ornamental Horticulture, S.K. Bhattacharjee, P.25

15. Gamble J.S.; 1957, The Flora of Presidency of Madras, Botanical Survey of India, Calcutta, PP. 44-46.

16. Raman K.R. 1973, Ph.D., Thesis Tamil Nadu Agricultural University Coimbutore, P. 33.

17. Chandra V; 1982, Cultivation and Utilization of Aromatic Plants (eds. C.K. Atal and B.M. Kapoor), CSIR, New Delhi PP. 48-50.

18. Estimation of National Commission on Agriculture (NCA), 1976.

19. Thippaiah, P.; 2005, Floriculture in Karnataka, ISEC, Bangalore, P. 26.

20. Agricultural and Processed Food Products Export Development Authority (APEDA), 2003.

21. Raghava S.P.S.; 2000, Revival of Fortunes, The Hindu, Survey of Indian Agriculture, PP. 151-152.

22. National Horticulture Board (NHB), 2002, Database 2001.

23. Economic Survey 2001-2002, Government of India.

24. ತಿಪ್ಪಯ್ಯ, ಪೂರ್ವೋಕ್ತ, ಪು.೧೮

25. NHB- Data base 2002.

26. Nageshwara Rao.A.; 1997, Higher Employment and Income Potential of Horticultural crops, Indian Journal of Agricultural Econimics, 52(3); PP. 584-91.

27. Prakash T.N;2002, High Tech Floriculture, Sustainablity and food security issues in the case of Rose Cullitvation

around Bangalore City, lin Vandanasiva and Gitanjali Bedi (eds) Sustainable Agriculture and food security : The impact of Globalisation sage Publication, New Delhi, PP.116-119

28. Thippaiah P, Floriculture in Karnataka: Performance, Problems and Prodpects, ADRT Unit, ISEC, Bangalore PP. 71-72.

29. Govt. of India Report 1996

30. Prakash T.N, 2002, High- Tech-Floriculture, Sage Publication. P. 78.

31. Alagumani TS; 1997, Performance of Flower Crops, Vis–a-Vis Field crops in Madhurai District, Tamilnadu, India, PP. 112-114.

32. ಚಂಗಪ್ಪ, ಪೂರ್ವೋಕ್ತ ಪು.೨೭

33. Dadlani N.K.; 2002, Post Harvest Management of Cutflowers- issues and strategies, Floriculture Today, Janvary, 2002.

34. Ramesh,G.R.; 1997, Economics of Production and Marketing Crossandra flower in Madhurai District, Tamilnadu, M.Sc Thesis(unpub)

35. Jadhav. M.S, P.P. Inamdar and B.V. Pagire; 2000, Export Potential and Marketing of flowers in India, Indian

Journal of Agricultural Marketing (conference special), 14(3); PP.125-134.

36. Govt. of Karnataka; 2000, Floriculture in Karnataka, Floriculture Division, Directorate of Floriculture, Bangalore.

37. ಪ್ರಭಾಕರ ಶಿಶಿಲ, ಹನಿಗವನಗಳು, ಯುಗಪುರುಷ, ಜುಲೈ ೧೯೭೬.

38. Borude, S.G. and Talathi, J.M.; 2002, Organization and Flower Marketing System of Bombay Flower Market, PP. 158-160.

39. Debashi Sengupta and Rajkamal; 2010; Floricultural Marketing in India –Excel books, New Delhi, P-31.

40. Sharma and Purushotham; 2001, Economics of Production and Marketing of Marigold in Jaipur District of Rajasthan, Agricultural Economics, Research Review, 14(2) PP. 163-69.

41. Chagaleru, Jiyaulla,; Economics of Production and Marketing of Chrysanthemum Flowers in Kolar District, (Unpub) M.Sc. Thesis, UAS, Bangalore.

42. Debashi Sengupta, 2010, floriculture marketing in India, P.74.

43. Debashi Sengupta, 2010, floriculture marketing in India, P. 74.

44. Agarwal V.K; 1981; Problems of Agricultural Marketing in India, Indian Journal Marketing 11(19), PP. 23-26.

45. Gayaikwad M.R, 1981, Jasmine- A Flower of commercial value in Maharashtra, Indian Horticulture, 26(3) PP. 14-20.

46. Prasad S and U.Kumar; 2003, Flower- A Greener Vision, Commercial Floriculture, Agrobios India, PP. 11-12.

47. Shanmugam V., 2007, Commercial Flower Cultivation, Mohit Publications New Delhi, P. 9.

48. Das T.K., A.K.Mitra and S.C.Sarkar, 1988, Economics of Tuberose Cultivation in Noida District, West Bengal.

49. Thippaiah P. ಪೂರ್ವೋಕ್ತ.

50. Chagaleru, Jiyaulla,; opt.cit, PP.22

51. Debashi Sengupta.; opt.cit, PP.14

52. Debashi Sengupta.; opt.cit, PP. 21.

53. APEDA, opt.cit, 2008-09

54. Prasad S. and Kumar A. opt.cit, P.22.

55. Prasad S. and Kumar A. opt.cit, P.29.

56. ಪ್ಲೋರೀಂ ರೋಸಸ್ ಎಂಡ್ ಟ್ರೇಡಿಂಗ್: ಹಾಲೆಮಡ್‌ನ ಪ್ರಸಿದ್ಧ ಪುಷ್ಪ ಉತ್ಪಾದನಾ ಕಂಪೆನಿ.

# ಅಧ್ಯಾಯ -೩
# ಕರ್ನಾಟಕದ ಆರ್ಥಿಕತೆಯಲ್ಲಿ ಪುಷ್ಪೋದ್ಯಮ

## ೩.೧. ಕರ್ನಾಟಕದ ಆರ್ಥಿಕತೆಯ ಸ್ವರೂಪ

ದೇಶದ ಆರ್ಥಿಕತೆಯಂತೆ ಕರ್ನಾಟಕದ ಆರ್ಥಿಕತೆಯು ಕೂಡಾ ಕೃಷಿ ಪ್ರಧಾನವಾದುದು. ಬೌಗೋಳಿಕ ವಿಸ್ತೀರ್ಣದಲ್ಲಿ ಕರ್ನಾಟಕ ರಾಜ್ಯವು ಭಾರತದಲ್ಲಿ ಎಂಟನೆಯ ಸ್ಥಾನ ಪಡೆದಿರುವ ವಿಶಾಲವಾದ ರಾಜ್ಯ. ಇದರ ವಿಸ್ತೀರ್ಣ ೧,೯೧,೭೯೧ ಚ.ಕಿ.ಮೀ. ಭಾರತದ ಒಟ್ಟು ವಿಸ್ತೀರ್ಣದಲ್ಲಿ ಕರ್ನಾಟಕದ ಪಾಲು ಶೇ.೭.೭೫. ಇದು ದಕ್ಷಿಣದ ಪ್ರಸ್ತ ಭೂಮಿಯ ಪಶ್ಚಿಮ ಭಾಗದಲ್ಲಿದ್ದು ೧೧.೫° ಮತ್ತು ೧೮.೫° ಉತ್ತರ ಅಕ್ಷಾಂಶ ಹಾಗು ೭೪° ಮತ್ತು ೭೮.೫° ಪೂರ್ವ ರೇಖಾಂಶಗಳ ಮಧ್ಯೆ ನೆಲೆಗೊಂಡಿದೆ. ರಾಜ್ಯದ ಉತ್ತರಕ್ಕೆ ಮಹಾರಾಷ್ಟ್ರ , ದಕ್ಷಿಣಕ್ಕೆ ಕೇರಳ ಮತ್ತು ತಮಿಳುನಾಡು, ಪಶ್ಚಿಮಕ್ಕೆ ಅರಬ್ಬೀ ಸಮುದ್ರ, ವಾಯುವ್ಯಕ್ಕೆ ಗೋವಾ ಮತ್ತು ಪೂರ್ವ ದಿಕ್ಕಿಗೆ ಆಂದ್ರ ಪ್ರದೇಶವಿದೆ. ಇದು ಪೂರ್ವದಿಂದ ಪಶ್ಚಿಮಕ್ಕೆ ೪೦೦ ಕಿ. ಮೀ. ಹಾಗೂ ಉತ್ತರದಿಂದ ದಕ್ಷಿಣಕ್ಕೆ ೭೦೦ ಕಿ. ಮೀ. ವರೆಗೆ ವ್ಯಾಪಿಸಿದೆ.[ನೋಡಿ ನಕ್ಷೆ ೩.೧.]

ಕರ್ನಾಟಕ ರಾಜ್ಯದಲ್ಲಿ ೨೯ ಜಿಲ್ಲೆಗಳು, ೧೭೬ ತಾಲೂಕುಗಳು, ೭೪೫ ಹೋಬಳಿಗಳು, ೨೭೦ ನಗರಗಳು ಹಾಗೂ ೨೭,೪೮೧ ಗ್ರಾಮಗಳಿವೆ.[೧] ಅತೀ ಹೆಚ್ಚಿನ ಸಂಖ್ಯೆಯ ಗ್ರಾಮಗಳಿರುವುದರಿಂದ ಕರ್ನಾಟಕವನ್ನು ಪ್ರಧಾನವಾಗಿ ಒಂದು ಗ್ರಾಮೀಣ ಅರ್ಥವ್ಯವಸ್ಥೆಯೆಂದು ಕರೆಯಲಾಗಿದೆ. ಈ ರಾಜ್ಯದ ದುಡಿಯುವ ಒಟ್ಟು ಜನರಲ್ಲಿ ಶೇ ೬೨ ಕೃಷಿಕರು ಮತ್ತು ಕೃಷಿ ಕಾರ್ಮಿಕರು. ಆರ್ಥಿಕತೆಯೊಂದರ ವೃತ್ತಿರಚನೆ, ಬೆಳೆವಿಧಾನ, ಆದಾಯದ ವಿವಿಧ ಮೂಲಗಳು ಮೊದಲಾದ ವಿಚಾರಗಳು ಆರ್ಥಿಕತೆಯ ಸ್ವರೂಪವನ್ನು ತಿಳಿಸುತ್ತವೆ. ಕೃಷಿರಂಗವು ಕೈಗಾರಿಕೆ ಮತ್ತು ಸೇವಾರಂಗಗಳನ್ನು ಬಲಗೊಳಿಸುವ ಹಾಗೂ ಸುಸ್ಥಿರ ಅಭಿವೃದ್ಧಿಯನ್ನು ಉಂಟುಮಾಡುವ ಪ್ರಾಥಮಿಕ ರಂಗವಾಗಿದೆ. ಆದುದರಿಂದ ಆರ್ಥಿಕತೆಯಲ್ಲಿ ಕೃಷಿಗೆ ಬಹಳ ಮಹತ್ವವಿದೆ

ಕೃಷಿ ಉತ್ಪನ್ನಗಳ ಉತ್ಪಾದನೆ ಮತ್ತು ಮಾರಾಟಕ್ಕೆ ಸಂಬಂಧಪಟ್ಟಂತೆ ಕೆಲವು ಪ್ರತ್ಯೇಕತೆಗಳಿವೆ. ಕೃಷಿಯು ಪ್ರಾಕೃತಿಕ ಘಟಕಗಳಿಂದ ಹೆಚ್ಚು ಪ್ರಭಾವಿತವಾಗುವ ಉದ್ಯಮವಾಗಿರುವುದರಿಂದ ಕೈಗಾರಿಕೆ ಮತ್ತು ಸೇವಾರಂಗಗಳಿಗಿಂತ ಭಿನ್ನವಾದ ಸಮಸ್ಯೆಗಳು ಇಲ್ಲಿ ಕಾಣಿಸಿಕೊಳ್ಳುತ್ತವೆ. ಕೃಷಿರಂಗದ ಮೇಲಿನ ಅಧಿಕ ಒತ್ತಡ, ಮರೆಮಾಚಿದ ಹಾಗೂ ಋತುಮಾನದ ನಿರುದ್ಯೋಗ, ಕೃಷಿ ಉತ್ಪನ್ನದ ಬೆಲೆ ಅಸ್ಥಿರತೆ, ಇಳಿಮುಖವಾಗುತ್ತಿರುವ




ನಕ್ಷೆ ೩.೧: ಕರ್ನಾಟಕ ರಾಜ್ಯ

ಬಂಡವಾಳ ಹೂಡಿಕೆ, ಸಣ್ಣ ರೈತರ ಮತ್ತು ಕೃಷಿ ಕಾರ್ಮಿಕರ ಅಲ್ಪ ಆದಾಯ ನಶಿಸಿ ಹೋಗುತ್ತಿರುವ ಕೃಷಿ ಆಧಾರಿತ ಸಣ್ಣ ಹಾಗೂ ಗುಡಿಕೈಗಾರಿಕೆಗಳು, ಬದಲಿ ಉದ್ಯೋಗದ ಕೊರತೆ, ಕೃಷಿಕಾರ್ಮಿಕರ ವಲಸೆ, ಮೊದಲಾದವುಗಳು ಕೃಷಿವಲಯವನ್ನು ಇಂದು ಪ್ರಬಲವಾಗಿ ಬಾಧಿಸುತ್ತಿವೆ. ಇದರಿಂದಾಗಿ ಕೃಷಿವಲಯವೆಂದೆನಿಸಿರುವ ಗ್ರಾಮಿಣ ಪ್ರದೇಶವು ಬಡತನದ ತೊಂದರೆಗೆ ಸಿಲುಕಿಕೊಂಡಿದೆ. ಇದು ಅತ್ಯಂತ ಕಳವಳಕಾರಿ ವಿಷಯವಾಗಿದೆ.

## ೩.೨ ಕರ್ನಾಟಕದಲ್ಲಿ ತೋಟಗಾರಿಕೆಯ ಪ್ರಗತಿ.

ಭಾರತದಲ್ಲಿ ಗ್ರಾಮಿಣ ಪ್ರದೇಶದ ಅಭಿವೃದ್ಧಿಯ ಚಿಂತನೆ ಕ್ರಿ.ಶ. ೧೯೫೨ರಿಂದಲೇ ಪ್ರಾರಂಭವಾಗಿತ್ತು. ಕೇಂದ್ರ ಮತ್ತು ರಾಜ್ಯ ಸರಕಾರಗಳು ಗ್ರಾಮಿಣ ಪ್ರದೇಶದಲ್ಲಿ ಉದ್ಯೋಗ ಮತ್ತು ಆದಾಯ ಸೃಷ್ಟಿಯ ಹಲವಾರು ಯೋಜನೆಗಳನ್ನು ಅನುಷ್ಠಾನಗೊಳಿಸಿದರೂ ಬಡತನ ನಿರ್ಮೂಲನೆ ಸಾಧ್ಯವಾಗಲಿಲ್ಲ. ರೈತರು ತಮ್ಮ ಕೃಷಿ ವೃತ್ತಿಯಲ್ಲಿ ಸಾಂಪ್ರದಾಯಕ ಬೆಳೆಗಳಿಗೆ ಮಾತ್ರ ಅಂಟಿಕೊಳ್ಳದೆ ಹೆಚ್ಚುವರಿ ಉದ್ಯೋಗ ಮತ್ತು ಆದಾಯ ನೀಡಬಲ್ಲ ಕೆಲವು ಕಾರ್ಯಗಳನ್ನು ರೂಢಿಸಿಕೊಳ್ಳುವಂತೆ ಉತ್ತೇಜನ ನೀಡಲಾಯಿತು. ಇವುಗಳು ಕೃಷಿ ಸಂಬಂಧೀ ಚಟುವಟಿಕೆಗಳಾಗಿದ್ದು ಕಡಿಮೆ ಭೂಮಿ, ಬಂಡವಾಳ, ಶ್ರಮ ಮತ್ತು ತಂತ್ರಜ್ಞಾನದಿಂದ ನಿರ್ವಹಿಸಬಹುದಾದ ಆರ್ಥಿಕ ಚಟುವಟಿಕೆಗಳಾಗಿವೆ. ಸಾಂಪ್ರದಾಯಕ ಕೃಷಿಯೊಂದಿಗೆ ಕೃಷಿಯ ಪೂರಕ ಚಟುವಟಿಕೆಗಳಾದ ಹೈನುಗಾರಿಕೆ, ತೋಟಗಾರಿಕೆ, ಕೃಷಿ ಆಧರಿತ ಗುಡಿ ಕೈಗಾರಿಕೆ ಹಾಗೂ ಸಣ್ಣ ಕೈಗಾರಿಕೆ, ಕೋಳಿಸಾಕಣೆ, ರೇಷ್ಮೆ ವ್ಯವಸಾಯಗಳ ಅನುಷ್ಠಾನದ ಬಗ್ಗೆ ಪ್ರಸ್ತಾಪಿಸಲಾಗಿದೆ.[೨] ಇವುಗಳಲ್ಲಿ ತೋಟಗಾರಿಕಾ ಬೆಳೆಗಳಿಗೆ ಹೆಚ್ಚಿನ ಮಹತ್ವವಿದೆ.

ಕ್ರಿ.ಶ. ೧೯೫೬ರಲ್ಲಿ ಬಾಷಾವಾರು ಪ್ರಾಂತ್ಯಗಳ ರಚನೆಯಾಗಿ ಮೈಸೂರು ರಾಜ್ಯ ಉದಯವಾಯಿತು.[೩] ಈ ರಾಜ್ಯ 'ಕರ್ನಾಟಕ'ವಾಗಿ ರೂಪಗೊಳ್ಳುವುದರ ಮೊದಲೇ ಕರ್ನಾಟಕದಲ್ಲಿ ತೋಟಗಾರಿಕೆಯ ಬಗೆಗಿನ ಒಲವು ಕಾಣಿಸಿಕೊಂಡಿತು. ೧೯೬೫ ರ ನವಂಬರ್ ೩ ರಂದು ಮೈಸೂರು ರಾಜ್ಯ ಎಂದು ಕರೆಯಲ್ಪಡುತ್ತಿದ್ದ ಇಂದಿನ ಕರ್ನಾಟಕದಲ್ಲಿ ತೋಟಗಾರಿಕೆ ಇಲಾಖೆ ಅಸ್ಥಿತ್ವಕ್ಕೆ ಬಂತು. ಇಂದು ಸಮಸ್ತ ಭಾರತದಲ್ಲಿ ತೋಟಗಾರಿಕೆಯ ಮಂತ್ರಾಲಯ ಹೊಂದಿದ ರಾಜ್ಯವೆಂದರೆ ಕರ್ನಾಟಕ ಮಾತ್ರ. ೧೯೬೬ ರಲ್ಲಿ ಸೀಮ್ಲಾದಲ್ಲಿ ನಡೆದ ಅಖಿಲ ಭಾರತ ತೋಟಗಾರಿಕಾ ಅಭಿವೃದ್ಧಿ ಸಮಾವೇಶದಲ್ಲಿ ಮೈಸೂರು ರಾಜ್ಯದ ಪ್ರತಿನಿಧಿಗಳು ಪಾಲ್ಗೊಂಡಿದ್ದು ಅಲ್ಲಿ ಈ ರಾಜ್ಯ ಪ್ರಶಂಸೆಗೆ ಪಾತ್ರವಾಯಿತು. ಮಾತ್ರವಲ್ಲದೆ ಎಲ್ಲಾ ರಾಜ್ಯಗಳಲ್ಲೂ ತೋಟಗಾರಿಕೆ ಮಂತ್ರಾಲಯವನ್ನು ಸ್ಥಾಪಿಸುವ ಠರಾವನ್ನು ಅಲ್ಲಿ ಅಂಗೀಕರಿಸಿದರು. ಅದು ಇಂದಿನ ವರೆಗೂ ನನಸಾಗಲಿಲ್ಲ. ತೋಟಗಾರಿಕೆಯನ್ನು

ಸಾರ್ವತ್ರಿಕವಾಗಿ ಕರ್ನಾಟಕದಾದ್ಯಂತ ಪಸರಿಸಿದ ಕೀರ್ತಿ ಮಾನ್ಯ ಮರಿಗೌಡರಿಗೆ ಸಲ್ಲುತ್ತದೆ.[೪] ಅವರು ಇಂದು ತೋಟಗಾರಿಕೆಯ ಪಿತಾಮಹ ಎಂಬ ಹೆಗ್ಗಳಿಕೆಗೆ ಪಾತ್ರರಾಗಿರುವರು.

ತೋಟಗಾರಿಕೆಯೆಂದರೆ ತರಕಾರಿ ಹಣ್ಣು ಹಂಪಲು, ಔಷಧೀಯ ಗಿಡಗಳು, ಸುಗಂಧಿತ ಗಿಡಗಳು, ಮತ್ತು ಪುಷ್ಪಗಳನ್ನು ಬೆಳೆಯುವ ವ್ಯವಸಾಯವಾಗಿದೆ. ಇಂದಿನ ಆರ್ಥಿಕತೆಯಲ್ಲಿ ಈ ವ್ಯವಸಾಯವನ್ನು ಉದ್ಯಮವಾಗಿ ರೂಪಿಸಿ ಕೊಳ್ಳಲು ಸಾಕಷ್ಟು ಅವಕಾಶಗಳಿವೆ. ಇವು ಗ್ರಾಮಿಣ ಪ್ರದೇಶದ ಸಾಂಪ್ರದಾಯಿಕ ಕೃಷಿಯ ಸಮಸ್ಯೆಗಳಿಗೆ ಪರಿಹಾರ ರೂಪಿಸಬಲ್ಲ ಕೃಷಿ ಸಂಬಂಧೀ ಚಟುವಟಿಕೆಗಳಾಗಿವೆ. ಇವುಗಳಿಗೆ ಅಗತ್ಯವಾಗಿರುವ ಭೂಮಿ ಮತ್ತು ಬಂಡವಾಳದ ಪ್ರಮಾಣವು ಕಡಿಮೆಯಾಗಿರುವುದರಿಂದ ಗ್ರಾಮಿಣ ಪ್ರದೇಶದ ಬಹು ಮಂದಿ ಈ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳಲು ಅನುಕೂಲಕರವಾಗಿದೆ. ಕರ್ನಾಟಕ ರಾಜ್ಯವು ಭೌಗೋಳಿಕವಾಗಿ ತೋಟಗಾರಿಕಾ ಬೆಳೆಗಳಿಗೆ ಸೂಕ್ತವಾಗಿದೆ. 'ಕರ್ನಾಟಕ' ಎಂಬ ಪದವು ಇದಕ್ಕೆ ಅನ್ವರ್ಥನಾಮ. ಈ ಪದಕ್ಕೆ 'ಫಲವತ್ತಾದ ಪ್ರದೇಶ', 'ಎತ್ತರವಾದ ಪ್ರದೇಶ' ಮತ್ತು 'ಕರಿಮಣ್ಣಿನ ಪ್ರದೇಶ' ಎಂಬ ವಿಭಿನ್ನ ಅರ್ಥಗಳಿವೆ.[೫] ಕನ್ನಡದ ಈ ನೆಲ ಕಪ್ಪು ಮಣ್ಣಿನಿಂದ ಕೂಡಿದ್ದು, ಹೆಚ್ಚಿನ ಪ್ರದೇಶವು ಸಮುದ್ರ ಮಟ್ಟದಿಂದ ೨೦೦೦ ಅಡಿಗಳಷ್ಟು ಎತ್ತರದಲ್ಲಿದ್ದು, ಫಲವತ್ತಾದ ಮಣ್ಣನ್ನು ಹೊಂದಿರುವ ಕಾರಣ ರಾಜ್ಯವು ತೋಟಗಾರಿಕಾ ಉತ್ಪನ್ನಗಳಲ್ಲಿ ದೇಶೀಯ ಮಟ್ಟದಲ್ಲಿ ಉನ್ನತ ಸ್ಥಾನ ಪಡೆಯುಂತಾಯಿತು. ೨೦೦೮-೦೯ ರ ಅಂಕಿ ಅಂಶಗಳ ಪ್ರಕಾರ ಕರ್ನಾಟಕ ರಾಜ್ಯ ತೋಟಗಾರಿಕಾ ಬೆಳೆ ಪ್ರದೇಶದ ವಿಸ್ತೀರ್ಣದಲ್ಲಿ ೫ನೇ ಸ್ಥಾನ ಮತ್ತು ಬೆಳೆ ಉತ್ಪಾದನೆಯಲ್ಲಿ ೮ ನೇ ಸ್ಥಾನವಿದೆ. ಕರ್ನಾಟಕ ರಾಜ್ಯದ ತೋಟಗಾರಿಕಾ ಬೆಳೆ ಪ್ರದೇಶದ ವಿಸ್ತೀರ್ಣವು ೨೦೦.೮೭ ಲಕ್ಷ ಹೆಕ್ಟರ್ ಆಗಿದ್ದು ಒಟ್ಟು ಉತ್ಪಾದನೆಯು ೨೦೬.೧ ಲಕ್ಷ ಟನ್. ತೋಟಗಾರಿಕಾ ಬೆಳೆಗಳಲ್ಲಿ ಒಂದಾದ ತೋಟದ ಬೆಳೆಯಲ್ಲಿ ರಾಜ್ಯಕ್ಕೆ ದೇಶೀಯ ಮಟ್ಟದಲ್ಲಿ ಎರಡನೆಯ ಸ್ಥಾನವಿದೆ. ತರಕಾರಿ ಮತ್ತು ಹಣ್ಣಿನ ಬೆಳೆಗಳಲ್ಲಿ ಕರ್ನಾಟಕ ರಾಜ್ಯಕ್ಕೆ ಕ್ರಮವಾಗಿ ಏಳನೆಯ ಮತ್ತು ಎಂಟನೆಯ ಸ್ಥಾನವಿದೆ. ಪುಷ್ಪ ಬೆಳೆ ಪ್ರದೇಶದಲ್ಲಿ ನಾಲ್ಕನೆ ಸ್ಥಾನವಿದ್ದು ಪುಷ್ಪ ಉತ್ಪನ್ನದಲ್ಲಿ ೨ನೇ ಸ್ಥಾನವಿದೆ.[೬] ಈ ಎಲ್ಲಾ ಅಂಶಗಳು ರಾಜ್ಯದಲ್ಲಿ ತೋಟಗಾರಿಕಾ ಬೆಳೆಗಳ ಪ್ರಗತಿಯನ್ನು ಸೂಚಿಸುತ್ತದೆ.

## ೩.೩ ತೋಟಗಾರಿಕೆ ಬೆಳೆ ಪ್ರದೇಶ

ಕರ್ನಾಟಕದ ಒಟ್ಟು ಭೂಪ್ರದೇಶದಲ್ಲಿ ಶೇ ೬೩.೯ ಕೃಷಿ ಭೂಮಿ. ಈ ಬೆಳೆ ಪ್ರದೇಶದಲ್ಲಿ ೧೮ ಲಕ್ಷ ಹೆಕ್ಟರ್ ಪ್ರದೇಶದಲ್ಲಿ ತೋಟಗಾರಿಕಾ ಬೆಳೆಗಳಿವೆ. ಇದು ರಾಜ್ಯದ ಒಟ್ಟು ಬೆಳೆ ಪ್ರದೇಶದ ಶೇ. ೧೪.೭ ರಷ್ಟು ಪ್ರದೇಶದಲ್ಲಿದೆ. ಇದರಲ್ಲಿ ೭.೮ ಲಕ್ಷ ಹೆಕ್ಟರ್ ಪ್ರದೇಶವು (ಶೇ. ೪೩) ತೋಟದ ಬೆಳೆ, ೪.೨೧ ಲಕ್ಷ ಹೆಕ್ಟರ್ ಪ್ರದೇಶವು (ಶೇ. ೨೩)ತರಕಾರಿ,




**ಚಿತ್ರ ೩.೧**

**ತೋಟಗಾರಿಕೆ ಬೆಳೆಗಳಲ್ಲಿ ಕೃಷಿ ಭೂಮಿಯ ಬಳಕೆ**

ಕರ್ನಾಟಕದಲ್ಲಿ ಹಲವಾರು ತೋಟಗಾರಿಕಾ ಬೆಳೆಗಳಿವೆ. ಕರ್ನಾಟಕದ ಹವಾಮಾನ, ಭೂಗುಣ ಮತ್ತು ಜನರ ಅನುಭೋಗದ ಒಲವು ಹಲವಾರು ಬೆಳೆಗಳನ್ನು ಬೆಳೆಸುವಂತೆ ಪ್ರೇರಣೆ ನೀಡುತ್ತವೆ. ರಾಜ್ಯದಲ್ಲಿ ವಾಣಿಜ್ಯಕ್ಕಾಗಿ ಬೆಳೆಯಲಾಗುತ್ತಿರುವ ಪ್ರಧಾನವಾದ ತೋಟಗಾರಿಕಾ ಬೆಳೆಗಳೆಂದರೆ

- **ತೋಟದ ಬೆಳೆಗಳು** :- ತೆಂಗು, ಅಡಿಕೆ, ಕೊಕ್ಕೋ, ವೀಳ್ಯದೆಲೆ, ತಾಳೆ ಮತ್ತು ಗೇರು ಇವು ತೋಟದ ಬೆಳೆಗಳಾಗಿದ್ದು ಒಟ್ಟು ಬೆಳೆ ಪ್ರದೇಶದಲ್ಲಿ ಇವುಗಳ ಪಾಲು ಶೇ. ೪೩
- **ತರಕಾರಿ ಬೆಳೆಗಳು** : ಆಲೂಗಡ್ಡೆ, ಟೊಮೆಟೋ, ಹುರುಳಿಕಾಯಿ, ಈರುಳ್ಳಿ, ಹಸಿರು ಮೆಣಸು, ಮರಗೆಣಸು, ಸಿಹಿ ಗೆಣಸು, ಸುವರ್ಣಗಡ್ಡೆ, ಎಲೆಕೋಸು, ಹೂಕೋಸು, ನವಿಲುಕೋಸು, ಬಟಾಣಿ, ಬೆಂಡೆಕಾಯಿ, ಮೂಲಂಗಿ, ಬೀಟ್‌ರೋಟ್, ಕ್ಯಾರೆಟ್,

ದಪ್ಪ ಮೆಣಸಿನ ಕಾಯಿ, ನುಗ್ಗೆ, ಮೆಂತೆಸೊಪ್ಪು, ಕೊತ್ತಂಬರಿ ಸೊಪ್ಪು, ಪಾಲಾಕು, ಹರಿವೆ, ಕರಿಬೇವು ಸೊಪ್ಪು, ಬೂದು ಕುಂಬಳ, ಸಿಹಿ ಕುಂಬಳ, ಬದನೆ, ಪಡುವಲ, ಹಾಗಲ, ಹೀರೆಕಾಯಿ, ತೊಂಡೆಕಾಯಿ, ಬಿಡಿ ಸೌತೆ ಇವುಗಳು ತರಕಾರಿ ಬೆಳೆಗಳಾಗಿದ್ದು ಇವು ಶೇ. ೨೩ರಷ್ಟು ತೋಟಗಾರಿಕಾ ಭೂಪ್ರದೇಶದಲ್ಲಿ ಕಾಣಿಸಿಕೊಳ್ಳುತ್ತವೆ.

- **ಹಣ್ಣಿನ ಬೆಳೆಗಳು** ಮಾವು, ಬಾಳೆ, ಅಂಬೆ, ಕಿತ್ತಳೆ, ಮೂಸಂಬಿ, ಸೀಬೆ, ಸಪೋಟ, ಅನಾನಸ್, ದಾಳಿಂಬೆ, ಹಲಸು, ಪರಂಗಿ, ಬೋರೆ, ಸೀತಾಫಲ, ದ್ರಾಕ್ಷಿ, ಅಂಜೂರ, ಕಲ್ಲಂಗಡಿ, ಕರಬೂಜ ಇವುಗಳು ಪ್ರಮುಖ ಹಣ್ಣಿನ ಬೆಳೆಗಳಾಗಿದ್ದು ಒಟ್ಟು ತೋಟಗಾರಿಕಾ ಬೆಳೆ ಪ್ರದೇಶದಲ್ಲಿ ಇವುಗಳ ಪಾಲು ಶೇ. ೧೮.
- **ಸಂಬಾರ ಬೆಳೆ:** ಏಲಕ್ಕಿ, ಕಾಳುಮೆಣಸು, ಹುಣಸೆ, ಶುಂಠಿ, ಅರಶಿನ, ಬೆಳ್ಳುಳ್ಳಿ, ಒಣಮೆಣಸು, ದನಿಯ, ಮೆಂತೆ, ಜೀರಿಗೆ, ಲವಂಗ, ಜಾಯಿಕಾಯಿ, ದಾಲ್ಚೀನಿ, ವೆನಿಲ, ಸೊಂಪು, ಸಬ್ಬೀಗೆ, ಪಾಪ್ರಿಕಾ ಇವು ಸಾಂಬಾರ ಬೆಳೆಗಳಾಗಿದ್ದು ತೋಟಗಾರಿಕಾ ಬೆಳೆ ಪ್ರದೇಶದ ಶೇ. ೧೪ ರಷ್ಟು ಪ್ರದೇಶದಲ್ಲಿದೆ.

- **ಔಷದ ಗಿಡಗಳು** : ಬಜೆ, ಮಂಗನಬೇರು, ಹಿಪ್ಪಲಿ, ಕಣಗಿಲೆ, ವಾಟೆಹುಳಿ, ಇಸಬ್ಗೋಲ್, ತುಳಸಿ, ನೆಲ್ಲಿಕಾಯಿ, ಅಶ್ವಗಂಧ ಇವುಗಳು ಪ್ರಧಾನ ಔಷಧಗಿಡಗಳಾಗಿದ್ದು ತೋಟಗಾರಿಕಾ ಬೆಳೆ ಪ್ರದೇಶದಲ್ಲಿ ಇವುಗಳ ಪಾಲು ಶೇ. ೦.೧೨.

- **ಸುಗಂಧಿತ ಸಸ್ಯಗಳು** : ದವನ, ನಿಂಬೆಹುಲ್ಲು, ಲ್ಯಾವೆಂಡರ್, ಲಾವಂಚ, ಪನ್ನಿರು ಇವುಗಳು ಪ್ರಧಾನ ಸುಗಂಧಿತ ಸಸ್ಯಗಳಾಗಿದ್ದು ಇವುಗಳ ಪಾಲು ಶೇ. ೦.೧೨.

- **ಪುಷ್ಪಗಳು** : ಆಸ್ಟರ್, ಕನಕಾಂಬರ, ಚೆಂಡು ಹೂ, ಮಲ್ಲಿಗೆ, ಸೇವಂತಿಗೆ, ಸುಗಂಧರಾಜ, ಗ್ಲೇಡಿಯೋಲಸ್, ಗುಲಾಬಿ, ಬರ್ಡ್ ಆಫ್ ಪ್ಯಾರಡೈಸ್, ಕಾರ್ನೇಶನ್, ಅಂಥೂರಿಯಂ, ಜರ್ಬೇರಾ, ಸ್ಟಾಟೀಸ್ ಮೊದಲಾದವುಗಳು ಪ್ರಮುಖ ವಾಣಿಜ್ಯ ಪುಷ್ಪಗಳಾಗಿದ್ದು, ಇವುಗಳ ಪಾಲು ಒಟ್ಟು ತೋಟಗಾರಿಕೆ ಬೆಳೆ ಪ್ರದೇಶದ ಶೇ. ೧.೭೬.

## ೩.೪ ತೋಟಗಾರಿಕೆ ಬೆಳೆಗಳ ಉತ್ಪಾದನೆ ಮತ್ತು ಮೌಲ್ಯ

ಕರ್ನಾಟಕದ ತೋಟಗಾರಿಕೆ ಬೆಳೆಗಳ ಉತ್ಪನ್ನ ಮತ್ತು ಮೌಲ್ಯವನ್ನು ಕೋಷ್ಟಕ ೩.೧ ತೋರಿಸುತ್ತದೆ.

ಕೋಷ್ಟಕ ೩.೧

**ತೋಟಗಾರಿಕ ಬೆಳೆಗಳ ಉತ್ಪನ್ನ ಮತ್ತು ಮೌಲ್ಯ**

| ತೋಟಗಾರಿಕೆ ಬೆಳೆಗಳು | ಉತ್ಪಾದನೆ ಲಕ್ಷ ಮೆಟ್ರಿಕ್ ಟನ್ | ಉತ್ಪನ್ನದಲ್ಲಿ ಬೆಳೆಗಳ ಪಾಲು (ಶೇ ) | ಮೌಲ್ಯ (ಲಕ್ಷ ರೂಪಾಯಿ) | ಮೌಲ್ಯದಲ್ಲಿ ಬೆಳೆಗಳ (ಶೇ.) ಪಾಲು |
|---|---|---|---|---|
| ಹಣ್ಣುಗಳ ಬೆಳೆ | ೫೫.೩೪ | ೪೦.೫ | ೫೯೬೬೩೬ | ೩೩.೧೦ |
| ತರಕಾರಿ ಬೆಳೆ | ೬೭.೫೭ | ೪೯.೪ | ೪೧೫೨೭೩ | ೨೩.೧೦ |
| ಸಂಬಾರ ಬೆಳೆ | ೬.೫೦ | ೪.೭ | ೧೫೮೫೯೧ | ೮.೮೦ |
| ತೋಟದ ಬೆಳೆ | ೪.೭೭ | ೩.೪ | ೫೮೦೭೯೦ | ೩೨.೨೦ |
| ವಾಣಿಜ್ಯ ಪುಷ್ಪ | ೧.೯೮ | ೧.೪ | ೪೮೩೮೧ | ೨.೬೪ |
| ಔಷಧ ಗಿಡ | ೦.೧೯ | ೦.೩ | ೧೦೩೩ | ೦.೦೬ |
| ಸುಗಂಧಿತ ಗಿಡ | ೦.೧೯ | ೦.೩ | ೨೧೦೬ | ೦.೧೦ |
| **ಒಟ್ಟು** | ೧೩೬.೫೪ | ೧೦೦ | ೧೮೦೨೮೧೦ | ೧೦೦ |

**ಆಧಾರ : ೨೦೦೮-೦೯ ನೇ ಸಾಲಿನ ತೋಟಗಾರಿಕ ಬೆಳೆಗಳ ಅಂಕಿ ಅಂಶ, ತೋಟಗಾರಿಕಾ ಇಲಾಖೆ ಬೆಂಗಳೂರು.ಪುಟ೧೮.**

ತೋಟಗಾರಿಕೆ ಬೆಳೆಗಳಲ್ಲಿ ಅತ್ಯಧಿಕ ಪಾಲು ಶೇ. ೪೯.೪ ತರಕಾರಿಗಳಿಗೆ ಸಲ್ಲುತ್ತದೆ. ಎರಡನೆಯ ಸ್ಥಾನದಲ್ಲಿ ಶೇ. ೪೦.೫ ಪಾಲಿನಲ್ಲಿ ಹಣ್ಣು ಹಂಪಲುಗಳು ಬರುತ್ತದೆ. ಆ ಬಳಿಕದ ಸ್ಥಾನಗಳು ಅನುಕ್ರಮವಾಗಿ ಸಂಬಾರ ಬೆಳೆ (ಶೇ. ೪.೭), ತೋಟದ ಬೆಳೆ (ಶೇ. ೩.೪), ವಾಣಿಜ್ಯ ಪುಷ್ಪಗಳು (ಶೇ. ೧.೪), ಔಷಧ ಗಿಡಗಳು (ಶೇ. ೦.೩) ಹಾಗೂ ಸುಗಂಧಿತ ಗಿಡಗಳಿಗೆ (ಶೇ. ೦.೩) ಸಲ್ಲುತ್ತದೆ. ಆದರೆ ಮೌಲ್ಯದಲ್ಲಿ ಪ್ರಥಮ ಸ್ಥಾನ ಸಲ್ಲುವುದು ಹಣ್ಣು ಹಂಪಲುಗಳಿಗೆ ( ಶೇ. ೩೩.೧), ಆ ಬಳಿಕದ ಸ್ಥಾನಗಳನ್ನು ತೋಟದ ಬೆಳೆ (ಶೇ. ೩೨.೨) ತರಕಾರಿ ಬೆಳೆ (ಶೇ. ೨೩.೧), ಸಾಂಬಾರ ಬೆಳೆ (ಶೇ. ೮.೮), ವಾಣಿಜ್ಯ ಪುಷ್ಪಗಳು (ಶೇ೨.೬೪) ಔಷಧ ಗಿಡಗಳು (ಶೇ. ೦.೦೬) ಮತ್ತು ಸುಗಂಧಿತ ಗಿಡಗಳು (ಶೇ. ೦.೧) ಪಡೆಯುತ್ತವೆ. ಬೆಳೆಯುವ ಪ್ರದೇಶ, ಉತ್ಪಾದನೆ ಮತ್ತು ಮೌಲ್ಯ ಈ ಯಾವುದೇ ಮಾನದಂಡ

ನೋಡಿದರು ಪುಷ್ಪ ಬೆಳೆ ಕೊನೆಯ ಸ್ಥಾನದಲ್ಲಿದೆ. ಕರ್ನಾಟಕದ ಜನರು ಪುಷ್ಪೋದ್ಯಮದ ಸಾಧ್ಯತೆಗಳನ್ನು ಇನ್ನಷ್ಟು ಸೂರೆಗೊಳ್ಳಬೇಕಾಗಿದೆ. ಪ್ರಸ್ತುತ ಅಧ್ಯಯನವು ಈ ಹಿನ್ನಲೆಯಲ್ಲಿ ಅತ್ಯಂತ ಪ್ರಾಮುಖ್ಯತೆಯನ್ನು ಪಡೆದುಕೊಂಡಿದೆ.

### ೩.೫ .ಕರ್ನಾಟಕದ ಸಾಂಪ್ರದಾಯಿಕ ಪುಷ್ಪಗಳು

**೩.೫.೧ ಮಲ್ಲಿಗೆ** : ಕರ್ನಾಟಕ ರಾಜ್ಯದಾದ್ಯಂತ ಬಹುತೇಕ ಎಲ್ಲಾ ಜಿಲ್ಲೆಗಳಲ್ಲಿ ಮಲ್ಲಿಗೆ ಪುಷ್ಪವನ್ನು ಬೆಳೆಸಲಾಗುತ್ತದೆ. ಬೆಳೆಯುವ ಪ್ರದೇಶವನ್ನು ಹೊಂದಿಕೊಂಡು ಅವುಗಳ ಹೆಸರು ಪ್ರಸಿದ್ಧವಾಗಿದೆ.[೮] ಮಲ್ಲಿಗೆಯ ರೂಪ, ಬಣ್ಣ ಮತ್ತು ಸುಗಂಧಕ್ಕೆ ಆರ್ಥಿಕ ಆಯಾಮ ದೊರೆತ ಕಾರಣದಿಂದಾಗಿ ಈ ಪುಷ್ಪದ ಉದ್ಯಮ ರಾಜ್ಯಾದ್ಯಂತ ಮಾತ್ರವಲ್ಲದೆ ದೇಶೀಯ ಹಾಗೂ ಅಂತರ್ದೇಶೀಯ ಮಟ್ಟದಲ್ಲೂ ನಡೆಯುತ್ತಿದೆ. ಮಲ್ಲಿಗೆಯು ಸ್ಥಳೀಯ ಮಟ್ಟದಲ್ಲಿ ಸಾಂಪ್ರದಾಯಕ ಪುಷ್ಪಗಳಾಗಿದ್ದು ಬಿಡಿ ಹೂಗಳನ್ನು ಮಾಲೆ ಮಾಡಿದಾಗ ರೂಪ ತುಷ್ಟೀಗುಣ ಸೃಷ್ಟಿಯಾಗುತ್ತದೆ ಮತ್ತು ಅದರಿಂದಾಗಿ ಮಲ್ಲಿಗೆ ಹೂವಿನ ಮೌಲ್ಯ ಹೆಚ್ಚಾಗುತ್ತದೆ. ಕೇಶಾಲಂಕಾರ, ಧಾರ್ಮಿಕ ವಿಧಿ ವಿಧಾನಗಳು, ಸಾಂಸ್ಕೃತಿಕ ಕಾರ್ಯಕ್ರಮಗಳು, ಸಾಮಾಜಿಕ ಆಚರಣೆ ಮತ್ತು ಸಂಪ್ರದಾಯಗಳಲ್ಲಿ ಮಲ್ಲಿಗೆಯ ಬಳಕೆಯಾಗುತ್ತದೆ. ಸುಗಂಧ ದ್ರವ್ಯದ ಉತ್ಪಾದನೆಯಲ್ಲೂ ಮಲ್ಲಿಗೆಗೆ ಮಹತ್ವವಿದೆ. ಮಲ್ಲಿಗೆ ಹೂಗಳಲ್ಲಿ ಜಾಸ್ಮಿನಮ್ ಗ್ರಾಂಡಿಫ್ಲೋರಮ್ ಅಥವಾ ಜಾಜಿ ಮಲ್ಲಿಗೆ ಅತ್ಯಂತ ಹೆಚ್ಚು ಮತ್ತು ಸುಮಧುರ ಪುಷ್ಪ ದ್ರವ್ಯವನ್ನು ಹೊಂದಿರುತ್ತದೆ.[೯]

೨೦೦೮-೦೯ ಸಾಲಿನಲ್ಲಿ ಕರ್ನಾಟಕ ರಾಜ್ಯದ ಒಟ್ಟು ಮಲ್ಲಿಗೆ ಬೆಳೆಯುವ ಪ್ರದೇಶವು ೫೪೫೧ ಹೆಕ್ಟರ್. ಅದರಲ್ಲಿ ಅತ್ಯಂತ ಹೆಚ್ಚು ಪ್ರದೇಶವು ತುಮಕೂರು ಜಿಲ್ಲೆಯಲ್ಲಿದೆ. ಈ ಜಿಲ್ಲೆಯ ಒಟ್ಟು ಮಲ್ಲಿಗೆ ಬೆಳೆ ಪ್ರದೇಶವು ೯೫೫ ಹೆಕ್ಟರ್‌ಗಳಾಗಿದ್ದು ಅದು ರಾಜ್ಯದ ಒಟ್ಟು ಮಲ್ಲಿಗೆ ಬೆಳೆ ಪ್ರದೇಶದ ಶೇ.೧೭.೫ ಪ್ರದೇಶವಾಗಿರುತ್ತದೆ. ಎರಡನೆಯ ಸ್ಥಾನವು ಬಳ್ಳಾರಿ ಜಿಲ್ಲೆಗೆ ಸಲ್ಲುತ್ತಿದ್ದು ಅದರ ಉತ್ಪಾದನಾ ಪ್ರದೇಶವು ೮೨೧ ಹೆಕ್ಟರ್ ಆಗಿದ್ದು ಇದು ರಾಜ್ಯದ ಒಟ್ಟು ಬೆಳೆ ಪ್ರದೇಶದ ಶೇ. ೧೫. ದಕ್ಷಿಣ ಕನ್ನಡ ಜಿಲ್ಲೆಯ ಮಲ್ಲಿಗೆ ಬೆಳೆ ಪ್ರದೇಶದ ವಿಸ್ತೀರ್ಣವು ರಾಜ್ಯದ ಮಲ್ಲಗೆ ಬೆಳೆ ಪ್ರದೇಶದ ವಿಸ್ತೀರ್ಣದ ಶೇ.೧.೩ ಆಗಿದ್ದು ಜಿಲ್ಲೆಯಲ್ಲಿ ಒಟ್ಟು ೭೦ ಹೆಕ್ಟರ್ ಪ್ರದೇಶದಲ್ಲಿ ಮಲ್ಲಿಗೆ ಬೆಳೆಯಿದೆ.

ಮಲ್ಲಿಗೆ ಹೂವಿನ ಉತ್ಪನ್ನದಲ್ಲಿ ತುಮಕೂರು ಜಿಲ್ಲೆ ಪ್ರಥಮ ಸ್ಥಾನದಲ್ಲಿದೆ. ಅದು ೨೦೦೮-೦೯ ಸಾಲಿನಲ್ಲಿ ೪೮೯೩ ಮೆಟ್ರಿಕ್ ಟನ್‌ಗಳಾಗಿದ್ದು ರಾಜ್ಯದ ಒಟ್ಟು ಮಲ್ಲಿಗೆ

ಉತ್ಪಾದನೆಯ ಶೇಕಡಾ ೧೫.೫ ಆಗಿರುತ್ತದೆ. ರಾಜ್ಯದ ಮಲ್ಲಿಗೆ ಉತ್ಪಾದನೆಯ ಎರಡನೇ ಜಿಲ್ಲೆ ಎಂದರೆ ಹಾವೇರಿ. ಈ ಜಿಲ್ಲೆ ೨೦೦೮-೦೯ರಲ್ಲಿ ೩೫೧೪ ಟನ್ ಮಲ್ಲಿಗೆಯನ್ನು ಉತ್ಪಾದಿಸಿರುತ್ತದೆ. ಇದು ರಾಜ್ಯದ ಒಟ್ಟು ಮಲ್ಲಿಗೆ ಉತ್ಪಾದನೆಯ ಶೇ. ೧೧ ಆಗಿದೆ. ದಕ್ಷಿಣ ಕನ್ನಡ ಜಿಲ್ಲೆಯ ಮಲ್ಲಿಗೆ ಉತ್ಪಾದನೆ ೫೦೪ ಮೆಟ್ರಿಕ್ ಟನ್‌ಗಳಾಗಿದ್ದು ಅದು ರಾಜ್ಯದ ಒಟ್ಟು ಉತ್ಪಾದನೆಯ ಶೇ. ೧.೬ ಆಗಿದೆ. ರಾಜ್ಯದ ಮಲ್ಲಿಗೆ ಉತ್ಪಾದನೆಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಪಾಲು ರಾಜ್ಯದ ಒಟ್ಟು ಮಲ್ಲಿಗೆ ಬೆಳೆ ವಿಸ್ತೀರ್ಣದಲ್ಲಿ ದಕ್ಷಿಣ ಕನ್ನಡದ ಪಾಲಿಗಿಂತ ಅಧಿಕವಾಗಿದೆ. ಇದು ಮಲ್ಲಿಗೆ ಉತ್ಪಾದನ ದರ ಉತ್ತಮವಾಗಿರುವುದನ್ನು (ಶೇ. ೭.೨) ಸೂಚಿಸುತ್ತದೆ.

ಕೃಷಿ ಅಭಿವೃದ್ಧಿಯ ಅಧ್ಯಯನಕ್ಕಿರುವ ಇನ್ನೊಂದು ಮಾನದಂಡವೆಂದರೆ ಮೌಲ್ಯ ಹೆಚ್ಚಳದ ಲೆಕ್ಕಾಚಾರ. ಮೌಲ್ಯವೆಂದರೆ ಹಣದಲ್ಲಿ ನಮೂದಿಸಲ್ಪಟ್ಟ ವಸ್ತುವಿನ ಬೆಲೆ. ಹೂಗಳ ಮೌಲ್ಯ ನಿರ್ಧಾರದಲ್ಲಿ ಅದರ ಬೆಲೆ ಪ್ರಾಮುಖ್ಯ ಪಾತ್ರವಹಿಸುತ್ತದೆ. ಬೆಲೆ ನಿರ್ಧಾರವು ಬೇಡಿಕೆ ಮತ್ತು ಪೂರೈಕೆಯಿಂದ ತೀರ್ಮಾನಿಸಲ್ಪಟ್ಟರೂ ಪುಷ್ಪಗಳ ಬಗೆಗೆ ಬೇಡಿಕೆಯ ತೀವ್ರತೆಯು ಬೆಳೆಯ ಮೇಲೆ ಹೆಚ್ಚು ಪರಿಣಾಮ ಬೀರುವುದು.[೧೦] ಕರ್ನಾಟಕದಲ್ಲಿ ಬಹು ಬಗೆಯ ಮಲ್ಲಿಗೆಯನ್ನು ಬೆಳೆಸಲಾಗುತ್ತಿದ್ದು, ಅವುಗಳಿಗಿರುವ ಬೇಡಿಕೆಯು ಮತ್ತು ಅದರಿಂದ ನಿರ್ಧಾರವಾಗುವ ಬೆಲೆಯು ಭಿನ್ನವಾಗಿರುತ್ತದೆ. ಮೈಸೂರು ಮಲ್ಲಿಗೆ ಅಥವಾ ಕಾಕಡ ಮತ್ತು ಮಂಗಳೂರು ಮಲ್ಲಿಗೆಗಳನ್ನು ಹೋಲಿಸಿದರೆ ಕಾಕಡ ಹೂವಿನ ಮಾರುಕಟ್ಟೆ ದರವು ಮಂಗಳೂರು ಮಲ್ಲಿಗೆಗಿಂತ ಕಡಿಮೆ. ಕೋಷ್ಟಕ ೩.೨ ಕರ್ನಾಟಕದಲ್ಲಿ ಮಲ್ಲಿಗೆ ಬೆಳೆಯ ಪ್ರಧಾನ ಹತ್ತು ಜಿಲ್ಲೆಗಳನ್ನು ಮತ್ತು ಅವು ಸೃಷ್ಟಿಸುವ ಮಲ್ಲಿಗೆ ಮೌಲ್ಯವನ್ನು ಸೂಚಿಸುತ್ತದೆ.[೧೧]

ಮಲ್ಲಿಗೆ ಉತ್ಪಾದನೆಯಲ್ಲಿ ತುಮಕೂರು ಜಿಲ್ಲೆ ಪ್ರಥಮ. ಅದು ಸೃಷಿಸಿದ ಮಲ್ಲಿಗೆ ಹೂಗಳ ಮೌಲ್ಯ ಜಿಲ್ಲೆಗಳಲ್ಲಿ ಅತ್ಯಂತ ಹೆಚ್ಚು, ಮಲ್ಲಿಗೆ ಬೆಳೆಯಲ್ಲಿ ದಕ್ಷಿಣ ಕನ್ನಡದ ಸ್ಥಾನ ೧೮. ಅದರ ವಾರ್ಷಿಕ ಮಲ್ಲಿಗೆ ಉತ್ಪಾದನೆ ೫೦೪ ಟನ್ನುಗಳು. ಮೈಸೂರು ಮಲ್ಲಿಗೆಯನ್ನು ಬೆಳೆಯುವ ಮೈಸೂರು ಜಿಲ್ಲೆಯ ಸ್ಥಾನ ಉತ್ಪಾದನೆಯಲ್ಲಿ ೧೬. ಅದು ಉತ್ಪಾದನೆ ಮಾಡುವ ಒಟ್ಟು ಮಲ್ಲಿಗೆಯ ಪ್ರಮಾಣ ೫೫೬ ಟನ್. ಈ ಎರಡು ಜಿಲ್ಲೆಗಳ ಮಲ್ಲಿಗೆ ಉತ್ಪನ್ನದ ಮೌಲ್ಯವನ್ನು ಗಮನಿಸಿದಾಗ ಮೈಸೂರು ಮಲ್ಲಿಗೆಯ ಮೌಲ್ಯ ಬಹಳ ಕಡಿಮೆಯಾಗಿರುವುದು ಅಧ್ಯಯನದಿಂದ ವ್ಯಕ್ತವಾಗುತ್ತದೆ. ೫೫೬ ಟನ್ ಕಾಕಡ ಹೂವಿನ ಮಾರುಕಟ್ಟೆ ಮೌಲ್ಯವು ೨೦೦೮-೦೯ ರಲ್ಲಿ ರೂ. ೧೫೬ ಲಕ್ಷವಾದರೆ ೫೦೪ ಟನ್ ಮಂಗಳೂರು ಮಲ್ಲಿಗೆಯ ಮಾರುಕಟ್ಟೆ ಮೌಲ್ಯ ರೂ. ೩೩೨೬ ಲಕ್ಷ. ಅದರಂತೆ ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳು

ಮಲ್ಲಿಗೆಯ ಮೌಲ್ಯ ಸೃಷ್ಟಿಯಲ್ಲಿ ಅನುಕ್ರಮವಾಗಿ ಎರಡನೆಯ ಮತ್ತು ಮೂರನೇ ಸ್ಥಾನ ಪಡೆದಿರುವುದು ವ್ಯಕ್ತವಾಗುತ್ತದೆ.[೧೨]

ಕೋಷ್ಟಕ ೩.೨ ವಿವಿಧ ಜಿಲ್ಲೆಗಳ ಮಲ್ಲಿಗೆ ಬೆಳೆಯ ಉತ್ಪಾದನೆ ಮತ್ತು ಮೌಲ್ಯವನ್ನು ತೋರಿಸುತ್ತದೆ. ಮಲ್ಲಿಗೆ ಉತ್ಪಾದನೆಯಲ್ಲಿ ತುಮಕೂರು ಜಿಲ್ಲೆ ಪ್ರಥಮ ಸ್ಥಾನದಲ್ಲಿದೆ. ಅದು ಒಟ್ಟು ಮಲ್ಲಿಗೆ ಉತ್ಪಾದನೆಯ ಶೇ.೧೫.೫೨ರಷ್ಟು ಪ್ರಮಾಣವನ್ನು ಉತ್ಪಾದಿಸುತ್ತದೆ. ನಂತರದ ಸ್ಥಾನಗಳು ಅನುಕ್ರಮವಾಗಿ ಹಾವೇರಿ, ರಾಮನಗರ ಮತ್ತು ಬಳ್ಳಾರಿ ಜಿಲ್ಲೆಗೆ ಸಲ್ಲುತ್ತದೆ. ಉತ್ಪದನಾ ಮೌಲ್ಯದಲ್ಲಿ ತುಮಕೂರು ಜಿಲ್ಲೆ ಪ್ರಥಮ ಸ್ಥಾನದಲ್ಲಿದೆ. ಅದು ರೂ.೪೧೫೯ ಲಕ್ಷ ಮೌಲ್ಯದ ಮಲ್ಲಿಗೆಯನ್ನು ಉತ್ಪಾದಿಸಿರುತ್ತದೆ.

### ಕೋಷ್ಟಕ ೩.೨

### ಮಲ್ಲಿಗೆ ಬೆಳೆಯ ಪ್ರಧಾನ ಜಿಲ್ಲೆಗಳು, ಉತ್ಪಾದನೆ ಮತ್ತು ಮೌಲ್ಯ

| ಕ್ರ. ಸಂ. | ಜಿಲ್ಲೆಯ ಹೆಸರು | ಉತ್ಪಾದನೆ ಮೆಟ್ರಿಕ್ ಟನ್‌ಗಳಲ್ಲಿ | ಉತ್ಪಾದನೆಯಲ್ಲಿ ಜಿಲ್ಲೆಯ ಪಾಲು (ಶೇ) | ಮೌಲ್ಯ ಲಕ್ಷ ರೂ. ಗಳು | ಮೌಲ್ಯದಲ್ಲಿ ಜಿಲ್ಲೆಯ ಪಾಲು (ಶೇ) |
|---|---|---|---|---|---|
| ೧ | ತುಮಕೂರು | ೪೮೯೩ | ೧೫.೫೨ | ೪೧೫೯ | ೩೦.೦ |
| ೨ | ಹಾವೇರಿ | ೩೫೧೪ | ೧೧.೧೫ | ೪೫೫೫ | ೩.೫ |
| ೩ | ರಾಮನಗರ | ೩೩೨೭ | ೧೦.೫೫ | ೬೭೮ | ೪.೯ |
| ೪ | ಬಳ್ಳಾರಿ | ೨೭೦೨ | ೦೮.೫೦ | ೪೦೬ | ೨.೯ |
| ೫ | ಉಡುಪಿ | ೨೩೮೯ | ೦೭.೫೭ | ೭೭೬ | ೫.೭ |
| ೬ | ಚಿತ್ರದುರ್ಗ | ೧೬೨೧ | ೫.೧೫ | ೪೬೨ | ೩.೫ |
| ೭ | ಚಿಕ್ಕಬಳ್ಳಾಪುರ | ೧೩೭೧ | ೪.೩೫ | ೪೫೩ | ೩.೩ |
| ೮ | ಗದಗ | ೧೩೪೧ | ೪.೨೬ | ೨೬೮ | ೧.೫ |
| ೯ | ಕೊಪ್ಪಳ | ೧೩೩೬ | ೪.೨೪ | ೪೦೧ | ೨.೯ |
| ೧೦. | ದಾವಣಗೆರೆ | ೧೧೪೨ | ೩.೬೩ | ೨೨೭ | ೧.೭ |
| | ರಾಜ್ಯದ ಮೊತ್ತ | ೨೩೬೩೬ | ೭೪.೯೩ | ೮೨೮೫ | ೫೯.೯ |
| | ಒಟ್ಟು | ೩೧೫೪೧ | ೧೦೦ | ೧೩೮೩೧ | ೧೦೦ |

**ಆಧಾರ: ೨೦೦೮-೦೯ನೇ ಸಾಲಿನ ಕರ್ನಾಟಕ ರಾಜ್ಯದ ತೋಟಗಾರಿಕೆ ಬೆಳೆಗಳ ಜಿಲ್ಲಾವಾರು ವಿವರಗಳು ಪುಟ ೧೭.**

ಮಲ್ಲಿಗೆ ಬೆಳೆಯ ಹತ್ತು ಪ್ರಧಾನ ಜಿಲ್ಲೆಗಳಲ್ಲಿ ಬಳ್ಳಾರಿ, ಗದಗ, ಕೊಪ್ಪಳ, ದಾವಣಗೆರೆ, ಚಿಕ್ಕಬಳ್ಳಾಪುರ ಜಿಲ್ಲೆಗಳ ಪುಷ್ಪ ಮೌಲ್ಯ ಸೃಷ್ಟಿಯ ಪಾಲು ರಾಜ್ಯದ ಸರಾಸರಿ ಪಾಲಿಗಿಂತಲೂ ಕಡಿಮೆಯಾಗಿರುತ್ತದೆ. ಈ ಜಿಲ್ಲೆಗಳಲ್ಲಿ ಮಲ್ಲಿಗೆ ಹೂವಿನ ಮಾರುಕಟ್ಟೆ ಬೆಲೆಯು ಬಹಳ ಕಡಿಮೆಯಾಗಿದೆ.

**೩.೫.೨ ಸೇವಂತಿಗೆ**: ಸೇವಂತಿಗೆ ಪುಷ್ಪವು ಕರ್ನಾಟಕದ ಪ್ರಧಾನ ಬಿಡಿ ಪುಷ್ಪವಾಗಿದ್ದು ಈ ಹೂವಿಗೆ ದೇಶೀಯ ಹಾಗೂ ವಿದೇಶಿ ಮಟ್ಟದ ಬೇಡಿಕೆಯಿದೆ. ಇದರ ಉತ್ಪಾದನೆಯ ಬಹುಭಾಗವು ಅಲಂಕಾರಕ್ಕಾಗಿ ಬಳಕೆಯಾಗುತ್ತದೆ. ಸೇವಂತಿಗೆ ಉತ್ಪಾದನೆಯಲ್ಲಿ ೨೦೦೮-೦೯ ನೇ ಸಾಲಿನಲ್ಲಿ ತುಮಕೂರು ಜಿಲ್ಲೆ ಪ್ರಥಮ ಸ್ಥಾನದಲ್ಲಿದ್ದು ಅದು ರಾಜ್ಯದ ಒಟ್ಟು ಉತ್ಪಾದನೆಯಾದ ೫೪೮೯೨ ಟನ್ ಪುಷ್ಪದ ಶೇ. ೨೦ನ್ನು ಉತ್ಪಾದಿಸುತ್ತದೆ. ಸೇವಂತಿಗೆ ಬೆಳೆಯ ಇತರ ಪ್ರಧಾನ ಜಿಲ್ಲೆಗಳೆಂದರೆ ಹಾವೇರಿ, ಚಿತ್ರದುರ್ಗ, ಮಂಡ್ಯ, ದಾವಣಗೆರೆ ಮತ್ತು ಗದಗಳಾಗಿವೆ. ಈ ಆರು ಜಿಲ್ಲೆಗಳು ರಾಜ್ಯದ ಒಟ್ಟು ಸೇವಂತಿಗೆ ಉತ್ಪಾದನೆಯ ಶೇ. ೫೯ನ್ನು ಉತ್ಪಾದಿಸುತ್ತವೆ.

೨೦೦೮-೦೯ನೇ ಸಾಲಿನಲ್ಲಿ ಮಾಡಲಾದ ಅಂದಾಜಿನ ಪ್ರಕಾರ ಉತ್ಪಾದನ ಪ್ರದೇಶದಲ್ಲಿ ತುಮಕೂರು ಜಿಲ್ಲೆ ಪ್ರಥಮವಾಗಿದ್ದು ಅದರ ೭೦೫ ಹೆಕ್ಟರ್ ಪ್ರದೇಶದಲ್ಲಿ ಸೇವಂತಿಗೆ ಕೃಷಿಯಿದೆ. ರಾಜ್ಯದ ಒಟ್ಟು ಸೇವಂತಿಗೆ ಉತ್ಪಾದನಾ ಪ್ರದೇಶವು ೪೪೨೯ ಹೆಕ್ಟರ್‌ಗಳಾಗಿದ್ದು ಇದರಲ್ಲಿ ತುಮಕೂರು ಜಿಲ್ಲೆಯ ಪಾಲು ಶೇ. ೧೬. ಸೇವಂತಿಗೆ ಪುಷ್ಪದ ಬೆಳೆ ಪ್ರದೇಶವು ಬಹುತೇಕ ಹೆಚ್ಚಿನ ಜಿಲ್ಲೆಗಳಲ್ಲಿ ಹರಡಿಕೊಂಡಿದೆ. ಉತ್ತರ ಕನ್ನಡ ಮತ್ತು ಕೊಡಗು ಜಿಲ್ಲೆಗಳು ಸೇವಂತಿಗೆ ಹೂವನ್ನು ಆರ್ಥಿಕ ಚಟುವಟಿಕೆಯಲ್ಲಿ ಬಳಸಿ ಕೊಂಡಿರುವುದಿಲ್ಲ. ಸೇವಂತಿಗೆ ಉತ್ಪಾದನೆಯಲ್ಲಿ ತುಮಕೂರು ಜಿಲ್ಲೆ ಪ್ರಥಮವೆನಿಸಿದರೂ ಹೆಚ್ಚಿನ ಮಾರಾಟ ಮೌಲ್ಯ ಸೃಷ್ಟಿಸುವಲ್ಲಿ ಅದು ವಿಫಲವಾಗಿರುತ್ತದೆ. ೧೦೫೭೫ ಟನ್ ಪುಷ್ಪ ಮಾರಾಟದಲ್ಲಿ ಜಿಲ್ಲೆಗೆ ದೊರೆತ ಆದಾಯವು ಕೇವಲ ೨೬೪೬ ಲಕ್ಷಗಳಾಗಿವೆ. ಆದರೆ ರಾಮನಗರ ಜಿಲ್ಲೆಯು ೯೪೦ ಟನ್ ಪುಷ್ಪ ಬೆಳೆದು ರೂ. ೫೮೪೨ ಲಕ್ಷ ಆದಾಯ ಗಳಿಸಿರುತ್ತದೆ. ರಾಮನಗರ ಜಿಲ್ಲೆಯಲ್ಲಿ ಸೇವಂತಿಗೆ ಹೂವಿಗೆ ತುಮಕೂರು ಜಿಲ್ಲೆಗಿಂತ ಅಧಿಕ ಬೆಲೆ ದೊರಕುತ್ತಿದೆ. ಬೇಡಿಕೆಯ ತೀವ್ರತೆಗನುಗುಣವಾಗಿ ವಿವಿಧ ಪ್ರದೇಶಗಳಲ್ಲಿ ಹೂವಿನ ಬೆಲೆ ವಿಭಿನ್ನವಾಗಿದೆ.

**೩.೫.೩ ಆಸ್ಟರ್:** ಆಸ್ಟರ್ ಕರ್ನಾಟಕದಲ್ಲಿ ಬೆಳೆಯಲಾಗುವ ಒಂದು ಸಾಂಪ್ರದಾಯಕ ಪುಷ್ಪ. ಇದು ಸೇವಂತಿಯನ್ನು ಹೋಲುವ ಬಗೆ ಬಗೆಯ ಬಣ್ಣಗಳಲ್ಲಿ ಕಾಣುವ ಅಲಂಕಾರಿಕ

ಪುಷ್ಪ. ತೆರೆದ ಬಯಲಿನಲ್ಲಿ ಬೆಳೆಯುವ ಈ ಹೂವಿಗೆ ಪ್ರಾದೇಶಿಕ ಭಾಷೆಯಲ್ಲಿ ಜೀನಿಯಾ ಎಂಬ ಹೆಸರು ಇದೆ. ಉತ್ಪಾದನಾ ಪ್ರದೇಶದಲ್ಲಿ ೨೦೦೮-೦೯ನೇ ಸಾಲಿನ ರಾಜ್ಯದ ಒಟ್ಟು ಆಸ್ಟರ್ ಬೆಳೆ ಪ್ರದೇಶವು ೨೧೯೪ ಹೆಕ್ಟರ್, ಒಟ್ಟು ಉತ್ಪಾದನೆ ೨೦೬೪೨ ಟನ್ ಮತ್ತು ಒಟ್ಟು ಮೌಲ್ಯದ ಮೊತ್ತವು ರೂ. ೨೮೬೫ ಲಕ್ಷ. ಈ ಹೂವಿನ ಉತ್ಪಾದನಾ ಪ್ರದೇಶ, ಉತ್ಪನ್ನ ಮತ್ತು ಮೌಲ್ಯದಲ್ಲಿ ತುಮಕೂರು ಜಿಲ್ಲೆ ಪ್ರಥಮ. ತುಮಕೂರು ಜಿಲ್ಲೆಯ ಒಟ್ಟು ಉತ್ಪಾದನಾ ಪ್ರದೇಶವು ೯೫೫ ಹೆಕ್ಟರ್‌ಗಳಾಗಿದ್ದು ಇದು ರಾಜ್ಯದ ಮೊತ್ತದ ಶೇ. ೪೩.೫. ಒಟ್ಟು ಉತ್ಪಾದನೆಯಲ್ಲಿ ಜಿಲ್ಲೆಯು ೯೫೫೦ ಟನ್‌ಗಳಷ್ಟು ಆಸ್ಟರ್ ಹೂವುಗಳನ್ನು ಉತ್ಪಾದಿಸುತ್ತಿದ್ದು, ಇದು ರಾಜ್ಯದ ಒಟ್ಟು ಆಸ್ಟರ್ ಉತ್ಪಾದನಾ ಮೊತ್ತದ ಶೇ. ೪೩.೭ ಆಗಿರುತ್ತದೆ. ಆಸ್ಟರ್ ಹೂವಿನ ರಾಜ್ಯದ ಒಟ್ಟು ಮೌಲ್ಯದಲ್ಲಿ ತುಮಕೂರು ಜಿಲ್ಲೆಯ ಪಾಲು ಶೇ. ೫೦ ಆಗಿದ್ದು, ಜಿಲ್ಲೆಯ ವಾರ್ಷಿಕ ಆಸ್ಟರ್ ಪುಷ್ಪ ಆದಾಯ ರೂ. ೧೪೪೦ಲಕ್ಷ.

ಕರ್ನಾಟಕದ ರಾಮನಗರ, ಕೋಲಾರ, ಚಿಕ್ಕಮಗಳೂರು, ಬೆಂಗಳೂರು ಗ್ರಾಮಾಂತರ ಜಿಲ್ಲೆಗಳು ಅನುಕ್ರಮವಾಗಿ ಆಸ್ಟರ್ ಪುಷ್ಪ ಬೆಳೆಯುವ ಕೆಲವು ಪ್ರಧಾನ ಜಿಲ್ಲೆಗಳು. ಆಸ್ಟರ್ ಪುಷ್ಪಗಳ ಉತ್ಪಾದನೆಯಿಂದ ಮೌಲ್ಯ ಸೃಷ್ಟಿಯಲ್ಲಿ ಬೆಂಗಳೂರು ಗ್ರಾಮಾಂತರ ಮತ್ತು ರಾಮನಗರ ಜಿಲ್ಲೆಗಳು ಕ್ರಮವಾಗಿ ದ್ವಿತೀಯ ಮತ್ತು ತೃತೀಯ ಸ್ಥಾನ ಪಡೆದಿರುತ್ತವೆ. ಆಸ್ಟರ್ ಹೂವಿಗೆ ರಾಜ್ಯ ವ್ಯಾಪ್ತಿ ಬೇಡಿಕೆ ಇದ್ದು ಅದನ್ನು ಎಲ್ಲಾ ಜಿಲ್ಲೆಗಳಲ್ಲಿ ಬೆಳೆಸುವ ಸಾಧ್ಯತೆ ಇದ್ದರೂ ಕೆಲವು ಜಿಲ್ಲೆಗಳಲ್ಲಿ ಇದರ ಉತ್ಪಾದನೆ ಶೂನ್ಯವಾಗಿರುತ್ತದೆ. ಶಿವಮೊಗ್ಗ, ದಾರವಾಡ, ಉತ್ತರ ಕನ್ನಡ, ಬೀದರ್, ರಾಯಚೂರು, ಚಾಮರಾಜನಗರ, ದಕ್ಷಿಣ ಕನ್ನಡ, ಕೊಡಗು, ಮೈಸೂರು ಜಿಲ್ಲೆಗಳಲ್ಲಿ ಈ ಪುಷ್ಪದ ಉತ್ಪಾದನೆ ವಾಣಿಜ್ಯ ಕ್ಷೇತ್ರದಲ್ಲಿ ಕಾಣಿಸದಿರುವುದು ಅಧ್ಯಯನದಿಂದ ತಿಳಿದುಬರುತ್ತದೆ.

**೩.೫.೪ ಕನಕಾಂಬರ:** ಇದು ಕೇಶ ಶೃಂಗಾರ ಮತ್ತು ಅಲಂಕಾರಕ್ಕಾಗಿ ಬಳಸಲಾಗುವ ಸಾಂಪ್ರದಾಯಕ ಪುಷ್ಪವಾಗಿದ್ದು, ಇದರ ಉತ್ಪಾದನೆಯಲ್ಲಿ ರಾಜ್ಯವು ಪ್ರಸಿದ್ಧವಾಗಿದೆ. ಅಧಿಕ ಬಾಳಿಕೆಯಿರುವ ಒಣ ಹವೆಯ ಪ್ರದೇಶದಲ್ಲೂ ಬೆಳೆಸಬಹುದಾದ ಈ ಬಿಡಿ ಹೂವುಗಳ ಸಾಲಿಗೆ ಸೇರಿದ ಪುಷ್ಪ ಗ್ರಾಮೀಣಾಭಿವೃದ್ಧಿಗೆ ಸಹಾಯಕವಾಗುತ್ತದೆ. ೨೦೦೮-೦೯ನೇ ಸಾಲಿನಲ್ಲಿ ರಾಜ್ಯದ ಒಟ್ಟು ಕನಕಾಂಬರ ಪುಷ್ಪ ಉತ್ಪಾದನೆಯು ೧೦೪೬ ಟನ್ ಮತ್ತು ಉತ್ಪಾದನಾ ಪ್ರದೇಶವು ೨೩೭೨ ಹೆಕ್ಟರ್‌ಗಳು. ಆರ್ಥಿಕ ವರ್ಷದಲ್ಲಿ ರಾಜ್ಯಕ್ಕೆ ದೊರೆತ ಕನಕಾಂಬರ ಪುಷ್ಪ ಆದಾಯ ೩೯೦೦ ಲಕ್ಷ. ಪುಷ್ಪ ಬೆಳೆಯನ್ನಾಧರಿಸಿ ಜಿಲ್ಲೆಯ ಪ್ರಧಾನ ಕನಕಾಂಬರ ಪುಷ್ಪ ಜಿಲ್ಲೆಗಳೆಂದರೆ ಚಿಕ್ಕಬಳ್ಳಾಪುರ (ಶೇ. ೨೫), ಚಿತ್ರದುರ್ಗ (ಶೇ. ೧೩), ಹಾವೇರಿ (ಶೇ.೧೧.೪), ತುಮಕೂರು (ಶೇ. ೭.೪) ಮತ್ತು ಮಂಡ್ಯ (ಶೇ. ೭.೩). ಈ ಐದು ಜಿಲ್ಲೆಗಳು ರಾಜ್ಯದ ಒಟ್ಟು

ಕನಕಾಂಬರ ಹೂವಿನ ಉತ್ಪಾದನೆಯ ಶೇ. ೬೪.೧ ರಷ್ಟನ್ನು ಉತ್ಪಾದಿಸುತ್ತವೆ ಮತ್ತು ಒಟ್ಟು ಮೌಲ್ಯದ ಶೇ. ೬೯ ರಷ್ಟನ್ನು ಸೃಷ್ಟಿಸುತ್ತವೆ. ಶಿವಮೊಗ್ಗ, ಬಾಗಲಕೋಟೆ, ಬೆಳಗಾವಿ, ದಾರವಾಡ, ಉತ್ತರ ಕನ್ನಡ, ಬೀದರ್ ಮತ್ತು ಕೊಡಗು ಜಿಲ್ಲೆಗಳು ಈ ಪುಷ್ಪವನ್ನು ವಾಣಿಜ್ಯಕ್ಕಾಗಿ ಬಳಸಿಕೊಂಡಿರುವುದಿಲ್ಲ.

**೩.೫.೫ ಚೆಂಡು ಹೂವು** : ಚೆಂಡು ಹೂ (ಚೆಂಡು ಮಲ್ಲಿಗೆ) ಋತುಮಾನದ ಪುಷ್ಪ. ಇದು ವಾರ್ಷಿಕ ಬೆಳೆ ಪುಷ್ಪಗಳ ಸಾಲಿಗೆ ಸೇರಿದ್ದು ಈ ಹೂವಿನ ಗಿಡಗಳ ಆಯುಷ್ಯ ಕನಕಾಂಬರ ಮತ್ತು ಮಲ್ಲಿಗೆಯಂತೆ ದೀರ್ಘವಾಗಿ ಇರುವುದಿಲ್ಲ. ಈ ಹೂವುಗಳನ್ನು ಹೆಚ್ಚಾಗಿ ಅಲಂಕಾರದ ಉದ್ದೇಶಕ್ಕಾಗಿ ಬಳಸಲಾಗುತ್ತಿದ್ದು ಕೆಲವು ಪ್ರದೇಶಗಳಲ್ಲಿ ಕೇಶಾಲಂಕಾರಕ್ಕಾಗಿಯೂ ಬಳಕೆಯಾಗುತ್ತಿದೆ. ಇದರ ಮನಮೋಹಕ ಬಣ್ಣ ಮತ್ತು ರೂಪ ಇದಕ್ಕೆ ಮೌಲ್ಯ ಸೃಷ್ಟಿಸಿರುತ್ತದೆ. ರಾಜ್ಯದ ಒಟ್ಟು ಚೆಂಡು ಹೂ ಬೆಳೆ ಪ್ರದೇಶವು ೨೦೦೮-೦೯ರಲ್ಲಿ ೭೯೩೩ ಹೆಕ್ಟರ್‌ಗಳಾಗಿದ್ದು ಒಟ್ಟು ಉತ್ಪನ್ನವು ೯೯೪೫ ಟನ್‌ಗಳು. ಅದು ರಾಜ್ಯಕ್ಕೆ ೬೦೫೫ಲಕ್ಷ ರೂಪಾಯಿಗಳ ಆದಾಯವನ್ನು ಸೃಷ್ಟಿಸಿರುತ್ತದೆ. ಚಾಮರಾಜನಗರ ಜಿಲ್ಲೆಯನ್ನು ಕರ್ನಾಟಕದ ಚೆಂಡು ಹೂವು ಜಿಲ್ಲೆಯೆಂದು ಪರಿಗಣಿಸಲಾಗಿದ್ದು ಅದು ೨೦೭೦ ಹೆಕ್ಟರ್ ಪ್ರದೇಶದಲ್ಲಿ ೧೮೭೩೭ ಟನ್‌ಗಳಷ್ಟು ಚೆಂಡು ಹೂವುಗಳನ್ನು ಉತ್ಪಾದಿಸಿ ಜಿಲ್ಲೆಗೆ ೪೮೯ ಲಕ್ಷ ಆದಾಯವನ್ನು ಸೃಷ್ಟಿಸಿರುತ್ತದೆ. ಈ ಜಿಲ್ಲೆಯೊಂದೇ ರಾಜ್ಯದ ಒಟ್ಟು ಚೆಂಡು ಮಲ್ಲಿಗೆ ಪ್ರದೇಶದ ಶೇ. ೨೬ ವನ್ನು ಹೊಂದಿದ್ದು ಇದು ರಾಜ್ಯದ ಒಟ್ಟು ಚೆಂಡು ಹೂ ಉತ್ಪಾದನೆಯ ಶೇ. ೨೬.೮ ಆಗಿರುತ್ತದೆ. ಚೆಂಡು ಹೂವು ಬೆಳೆಯ ಇತರ ಪ್ರಧಾನ ಜಿಲ್ಲೆಗಳೆಂದರೆ ಮಂಡ್ಯ, ಹಾಸನ, ಹಾವೇರಿ ಮತ್ತು ಕೋಲಾರ. ಐದು ಜಿಲ್ಲೆಗಳ ಪಾಲು ರಾಜ್ಯದ ಒಟ್ಟು ಉತ್ಪಾದನೆಯಲ್ಲಿ ಶೇ. ೫೫.

**೩.೫.೬ ಸುಗಂಧರಾಜ** : ಸುಗಂದರಾಜ ಪುಷ್ಪದಲ್ಲಿ ಎರಡು ತಳಿಗಳಿವೆ- ಅವುಗಳೆಂದರೆ ಸುಗಂಧರಾಜ(ಒಂಟಿ) ಮತ್ತು ಸುಗಂಧರಾಜ(ಜಂಟಿ). ಸುಗಂಧರಾಜ ಒಂಟಿ ಸಾಂಪ್ರದಾಯಕ ಪುಷ್ಪಗಳಾಗಿದ್ದು ಬಹುತೇಕ ಕರ್ನಾಟಕದಾದ್ಯಂತ ಈ ಹೂವನ್ನು ಬೆಳೆಸಲಾಗುತ್ತದೆ. ಶಿವಮೊಗ್ಗ, ಉತ್ತರಕನ್ನಡ, ಚಿಕ್ಕಮಗಳೂರು, ಕೊಡಗು ಮತ್ತು ಉಡುಪಿ ಜಿಲ್ಲೆಗಳ ಹೊರತಾಗಿ ರಾಜ್ಯದ ಉಳಿದ ಎಲ್ಲಾ ಜಿಲ್ಲೆಗಳು ಈ ಪುಷ್ಪ ಉದ್ಯಮದಲ್ಲಿ ತೊಡಗಿಸಿಕೊಂಡಿದ್ದು ಆರ್ಥಿಕ ಪ್ರಯೋಜನವನ್ನು ಗಳಿಸುತ್ತಿವೆ. ರಾಜ್ಯದ ಒಟ್ಟು ಸುಗಂಧರಾಜ ಪುಷ್ಪ ಬೆಳೆ ಪ್ರದೇಶವು ೧೦೭೯ ಹೆಕ್ಟರ್ ಮತ್ತು ಒಟ್ಟು ಉತ್ಪನ್ನವು ೯೨೯೮ ಟನ್. ೨೦೦೮-೦೯ ರಲ್ಲಿ ರಾಜ್ಯವು ಒಟ್ಟು ರೂ. ೨೧೧೮ ಲಕ್ಷ ಆದಾಯದ ಸುಗಂಧರಾಜ(ಒಂಟಿ) ಪುಷ್ಪವನ್ನು ಉತ್ಪಾದಿಸಿರುತ್ತದೆ. ಸುಗಂಧರಾಜ ಪುಷ್ಪ ಬೆಳೆಯ ಪ್ರಧಾನ ಜಿಲ್ಲೆಗಳೆಂದರೆ ಚಿತ್ರದುರ್ಗ, ಹಾವೇರಿ ಮತ್ತು ಮೈಸೂರು. ಈ ಮೂರು ಜಿಲ್ಲೆಗಳು ಶೇ. ೩೯ ಉತ್ಪಾದನಾ ಪ್ರದೇಶವನ್ನು ಹೊಂದಿದ್ದು,

ಅವುಗಳ ಒಟ್ಟು ಉತ್ಪಾದನೆ ರಾಜ್ಯದ ಉತ್ಪಾದನೆಯ ಶೇ. ೩೦% ಆಗಿರುತ್ತದೆ. ಪುಷ್ಪ ಇಳುವರಿಯಲ್ಲಿ ರಾಯಚೂರು ಜಿಲ್ಲೆ ಪ್ರಥಮ ಸ್ಥಾನದಲ್ಲಿದ್ದು ಅದು ೨೦೦೮-೦೯ರಲ್ಲಿ ೬೨ ಹೆಕ್ಟರ್ ಪ್ರದೇಶದಲ್ಲಿ ೯೩೦ ಟನ್ ಸುಗಂಧರಾಜ ಪುಷ್ಪವನ್ನು ಉತ್ಪಾದಿಸಿ ರೂ.೭೬೩ ಲಕ್ಷ ಆದಾಯವನ್ನು ಸೃಷ್ಟಿಸಿರುತ್ತದೆ.

ಸುಗಂಧರಾಜ ಹೂವಿನ ಇನ್ನೊಂದು ಪ್ರಭೇದವೆಂದರೆ ಸುಗಂಧರಾಜ ಜಂಟಿ. ಪುಷ್ಪಗುಚ್ಛಗಳಲ್ಲಿ ಬಳಕೆಯಾಗುವ ಈ ಹೂವು ಆಕರ್ಷಣೀಯ ಮತ್ತು ಸುಮಧುರ. ಇದರ ಉತ್ಪಾದನೆಯನ್ನು ಎಣಿಕೆ ರೂಪದಲ್ಲಿ ಲೆಕ್ಕಾಚಾರ ಮಾಡುತ್ತಿದ್ದು ರಾಜ್ಯದ ಒಟ್ಟು ಉತ್ಪಾದನೆಯು ೧೦೨೫ ಲಕ್ಷ ಕಡ್ಡಿಗಳು. ಇದರ ಬೆಳೆ ವಿಸ್ತೀರ್ಣ ರಾಜ್ಯದಲ್ಲಿ ೨೮೫ ಹೆಕ್ಟರ್‌ಗಳಿದ್ದು ರಾಜ್ಯಕ್ಕೆ ೨೦೦೮-೦೯ನೇ ಸಾಲಿನಲ್ಲಿ ರೂ. ೩೧೩ ಲಕ್ಷ ಆದಾಯ ನೀಡಿರುತ್ತದೆ. ಈ ಪುಷ್ಪವನ್ನು ಬೆಳೆಯುವ ಪ್ರಧಾನ ಜಿಲ್ಲೆಗಳೆಂದರೆ ಗುಲ್ಬರ್ಗಾ, ರಾಯಚೂರು ಮತ್ತು ತುಮಕೂರು. ಒಟ್ಟು ಉತ್ಪಾದನೆಯಲ್ಲಿ ಈ ಎರಡು ಜಿಲ್ಲೆಗಳ ಪಾಲು ಶೇ.೭೮. ಈ ಹೂವಿಗೆ ಸಂಬಂಧಿಸಿದಂತೆ ರಾಯಚೂರು ಜಿಲ್ಲೆಯ ಮಾರುಕಟ್ಟೆ ದರವು ಗುಲ್ಬರ್ಗಾ ಜಿಲ್ಲೆಗಿಂತ ಹೆಚ್ಚಾಗಿರುತ್ತದೆ.

**೩.೫.೭ ಚಂಪಕ:** ಚಂಪಕ ಪುಷ್ಪವನ್ನು ಬೆಳೆಯುವ ಪ್ರಧಾನ ಐದು ಜಿಲ್ಲೆಗಳೆಂದರೆ ಅನುಕ್ರಮವಾಗಿ ಬೆಂಗಳೂರು(ನಗರ), ಶಿವಮೊಗ್ಗ, ಬೆಳಗಾಂ, ಉತ್ತರ ಕನ್ನಡ ಮತ್ತು ಬೆಂಗಳೂರು (ಗ್ರಾ). ಈ ಐದು ಜಿಲ್ಲೆಗಳ ಚಂಪಕ ಹೂವಿನ ಬೆಳೆ ಪ್ರದೇಶವು ೩೫೩ ಹೆಕ್ಟರ್. ರಾಜ್ಯದ ಒಟ್ಟು ಚಂಪಕ ಬೆಳೆ ಪ್ರದೇಶದಲ್ಲಿ ಈ ಜಿಲ್ಲೆಗಳ ಪಾಲು ಶೇ. ೫೯. ೨೦೦೮-೦೯ ರಲ್ಲಿ ರಾಜ್ಯದ ಚಂಪಕ ಹೂವಿನ ಒಟ್ಟು ಉತ್ಪಾದನೆಯು ೧೫೬೩ ಟನ್‌ಗಳಾಗಿದ್ದು ಅದರಲ್ಲಿ ಬೆಂಗಳೂರು (ನ) ಜಿಲ್ಲೆಯ ಉತ್ಪಾದನೆಯು ಒಟ್ಟು ಉತ್ಪಾದನೆಯ ಶೇ. ೩೦. ಚಂಪಕ ಬೆಳೆಯ ಪ್ರಧಾನ ಐದು ಜಿಲ್ಲೆಗಳು ಒಟ್ಟು ಉತ್ಪಾದನೆಯ ಶೇ. ೭೦ ರಷ್ಟು ಹೂಗಳನ್ನು ಉತ್ಪಾದಿಸುತ್ತವೆ.

## ೩.೬ ಕರ್ನಾಟಕದ ಅಸಾಂಪ್ರದಾಯಿಕ ಪುಷ್ಪಗಳು

**೩.೬.೧ ಕಾರ್ನೇಶನ್:** ಕಾರ್ನೇಶನ್ ಪುಷ್ಪ ಉತ್ಪಾದಿಸುವ ಕರ್ನಾಟಕದ ಜಿಲ್ಲೆಗಳೆಂದರೆ ಬೆಂಗಳೂರು (ನ) ಮತ್ತು ಬೆಂಗಳೂರು (ಗ್ರಾ). ಈ ಎರಡು ಜಿಲ್ಲೆಗಳ ಒಟ್ಟು ಉತ್ಪಾದನಾ ಪ್ರದೇಶವು ೩೦ ಹೆಕ್ಟರ್‌ಗಳಾಗಿದ್ದು ಇವು ೨೦೦೮-೦೯ರಲ್ಲಿ ೧೮೬ ಲಕ್ಷ ಕಾರ್ನೇಶನ್ ಕಡ್ಡಿಗಳನ್ನು ಉತ್ಪಾದಿಸಿರುತ್ತವೆ. ಈ ಹೂಗಳ ಮೌಲ್ಯ ರೂ. ೮೫ ಲಕ್ಷ. ಪುಷ್ಪ ಉತ್ಪಾದನೆಯಲ್ಲಿ ಬೆಂಗಳೂರು (ಗ್ರಾ) ಪ್ರಥಮವಾಗಿದ್ದು ೧೦೬ ಲಕ್ಷ ಹೂಗಳನ್ನು ಉತ್ಪಾದಿಸಿ ೬೫ ಲಕ್ಷ ಆದಾಯಗಳಿಸಿರುತ್ತದೆ. ಆದರೆ ಬೆಂಗಳೂರು (ನ) ಜಿಲ್ಲೆಯು ಕೇವಲ ೮೦ ಲಕ್ಷ ಕಾರ್ನೇಶನ್

ಕಡ್ಡಿಗಳನ್ನು ಉತ್ಪಾದಿಸಿ ೭೦ ಲಕ್ಷ ಆದಾಯಗಳಿಸಿರುತ್ತದೆ. ಕಾರ್ನೇಶನ್ ಹೂವಿನ ಕಡ್ಡಿಗಳ ಮಾರುಕಟ್ಟೆ ಮೌಲ್ಯವು ಬೆಂಗಳೂರು (ನ) ಜಿಲ್ಲೆಯಲ್ಲಿ ಅಧಿಕವಾಗಿದೆ.

**೩.೬.೨ ಬರ್ಡ್ ಆಫ್ ಪ್ಯಾರಡೈಸ್:** ಈ ಪುಷ್ಪವು ಆಧುನಿಕ ಪುಷ್ಪಗಳ ಸಾಲಿನಲ್ಲಿ ಸೇರಿಕೊಂಡಿದ್ದು, ಇದನ್ನು ಬೆಳೆಸುವ ಪ್ರಧಾನ ಜಿಲ್ಲೆಗಳೆಂದರೆ ಬೆಂಗಳೂರು (ನ), ಚಿಕ್ಕ ಬಳ್ಳಾಪುರ, ಬೆಂಗಳೂರು (ಗ್ರಾ), ಬಾಗಲಕೋಟೆ, ಕೋಲಾರ ಮತ್ತು ಗದಗ. ಒಟ್ಟು ಬೆಳೆಪ್ರದೇಶವು ೨೭ ಹೆಕ್ಟರ್‌ಗಳಾಗಿದ್ದು ಈ ಜಿಲ್ಲೆಗಳ ಒಟ್ಟು ಉತ್ಪಾದನೆ ೨೧ ಲಕ್ಷ ಕಡ್ಡಿಗಳು. ಒಟ್ಟು ಉತ್ಪಾದನೆಯಲ್ಲಿ ಶೇ. ೪೭ ಬೆಂಗಳೂರು (ನ) ಮತ್ತು ಶೇ. ೪೨ ಚಿಕ್ಕಬಳ್ಳಾಪುರ ಜಿಲ್ಲೆಯದು. ಒಟ್ಟು ಉತ್ಪಾದನೆಯ ಶೇ. ೮೯ ಎರಡು ಜಿಲ್ಲೆಗಳ ಪಾಲಾಗಿದ್ದು, ಉಳಿದ ನಾಲ್ಕು ಜಿಲ್ಲೆಗಳು ಶೇ. ೧೧ ರಷ್ಟು ಬರ್ಡ್ ಆಫ್ ಪ್ಯಾರಡೈಸ್ ಪುಷ್ಪವನ್ನು ಬೆಳೆಸುತ್ತವೆ.

**೩.೬.೩ ಅಂಥೋರಿಯಂ:** ಇದು ಕೊಡಗು ಜಿಲ್ಲೆಯ ಪ್ರಧಾನ ಪುಷ್ಪವಾಗಿದ್ದು ಒಟ್ಟು ಉತ್ಪಾದನೆಯ ಶೇ. ೬೬ ಭಾಗವನ್ನು ಈ ಜಿಲ್ಲೆ ಉತ್ಪಾದಿಸುತ್ತದೆ. ಒಟ್ಟು ಮೌಲ್ಯದಲ್ಲಿ ಕೊಡಗು ಜಿಲ್ಲೆಯ ಪಾಲು ಶೇ. ೬೩ ಅಂತೋರಿಯ ಪುಷ್ಪ ಬೆಳೆಯುವ ಇತರ ಜಿಲ್ಲೆಗಳೆಂದರೆ ಚಿಕ್ಕಮಗಳೂರು ದ್ವಿತೀಯ ಸ್ಥಾನದಲ್ಲಿದ್ದು ಒಟ್ಟು ಉತ್ಪಾದನೆಯ ಶೇ. ೨೪ ನ್ನು ಉತ್ಪಾದಿಸುತ್ತದೆ. ಈ ಎರಡು ಜಿಲ್ಲೆಗಳು ಒಟ್ಟು ಉತ್ಪಾದನೆಯ ಶೇ. ೮೭ ಭಾಗವನ್ನು ಉತ್ಪಾದಿಸುತ್ತದೆ. ಅಂತೋರಿಯಂ ಬೆಳೆಯುವ ಪ್ರದೇಶವು ೪೦ ಹೆಕ್ಟರ್‌ಗಳಾಗಿದ್ದು ಅದರಲ್ಲಿ ೨೦೦೮-೦೯ ರಲ್ಲಿ ೯೬ ಲಕ್ಷ ಅಂಥೋರಿಯಂ ಕಡ್ಡಿಗಳನ್ನು ಉತ್ಪಾದಿಸಲಾಗಿದೆ.

**೩.೬.೪ ಜರ್ಬೇರಾ :** ನವೀನ ಪುಷ್ಪಗಳ ಸಾಲಿನಲ್ಲಿ ಸೇರಿದ ಇನ್ನೊಂದು ಪುಷ್ಪವು ಇದಾಗಿದ್ದು, ರಾಜ್ಯದ ೩೩ ಹೆಕ್ಟರ್ ಪ್ರದೇಶದಲ್ಲಿ ಇದನ್ನು ಬೆಳೆಸಲಾಗುತ್ತಿದ್ದು, ರಾಜ್ಯದ ಜರ್ಬೇರಾ ಪುಷ್ಪದ ಒಟ್ಟು ಉತ್ಪಾದನೆಯು ೭೭ ಲಕ್ಷ ಕಡ್ಡಿಗಳಾಗಿದ್ದು ಅದನ್ನು ಬೆಂಗಳೂರು (ನ), ಬೆಂಗಳೂರು (ಗ್ರಾ), ಚಿಕ್ಕಬಳ್ಳಾಪುರ ಮತ್ತು ಬಿಜಾಪುರ ಜಿಲ್ಲೆಗಳಲ್ಲಿ ಬೆಳೆಸುತ್ತಾರೆ. ಈ ಪುಷ್ಪದ ಒಟ್ಟು ಮೌಲ್ಯದ ಶೇ. ೬೦ ಬೆಂಗಳೂರು (ನ)ದ ಪಾಲಾಗಿದೆ. ರಾಜ್ಯದ ಜರ್ಬೇರಾ ಉತ್ಪಾದನಾ ಪ್ರದೇಶವು ೩೩ ಹೆಕ್ಟರ್ ಪ್ರದೇಶವಾಗಿದ್ದು ಅದರಲ್ಲಿ ಶೇ. ೪೩ ಪಾಲು ಬೆಂಗಳೂರು (ಗ್ರಾ) ಜಿಲ್ಲೆಯದು. ಈ ಪುಷ್ಪ ಬೆಳೆ ಪ್ರದೇಶದ ವಿಸ್ತೀರ್ಣದ ಹೆಚ್ಚಳವು ವಾರ್ಷಿಕ ಸರಾಸರಿ ಶೇ.೦.೮ ಆಗಿದ್ದು ಉತ್ಪನ್ನದ ಹೆಚ್ಚಳವು ಶೇ. ೧.೭ ಆಗಿರುತ್ತದೆ.

**೩.೬.೫ ಸ್ಟಾಟೀಸ್:** ಆಧುನಿಕ ಪುಷ್ಪಗಳ ಸಾಲಿನಲ್ಲಿ ಸೇರಿದ ಸ್ಟಾಟೀಸ್‌ನಲ್ಲಿ ಎರಡು ವಿಧಗಳಿವೆ. ಅವುಗಳೆಂದರೆ ಸದಾ ಸ್ವಚ್ಛಂದವಾಗಿ ಹೂ ಬಿಡುವ ಮತ್ತು ನಿರ್ಧಿಷ್ಟ

ಋತುಮಾನಗಳಲ್ಲಿ ಮಾತ್ರ ಹೂ ಬಿಡುವ ತಳಿಗಳು. ಸ್ವಚ್ಛಂದವಾಗಿ ಹೂಬಿಡುವ ಸ್ಟಾಟಿಸ್ ಹೂ ಬೆಳೆಯ ಪ್ರಧಾನ ಜಿಲ್ಲೆಗಳೆಂದರೆ ಕರ್ನಾಟಕದ ಬೆಂಗಳೂರು (ನ) ಮತ್ತು ಬಿಜಾಪುರ ಜಿಲ್ಲೆ. ಸದಾ ಹೂ ಬಿಡುವ ಸ್ಟಾಟಿಸ್‌ನ ಒಟ್ಟು ಬೆಳೆಯುವ ಪ್ರದೇಶ ೮೧ ಹೆಕ್ಟರ್‌ಆಗಿದ್ದು ಅದರಲ್ಲಿ ಶೇ. ೭೪ ರಷ್ಟು ಪ್ರದೇಶ ಬಿಜಾಪುರ ಜಿಲ್ಲೆಯಲ್ಲಿದೆ. ಬೆಳೆ ಪ್ರದೇಶದ ಹೆಚ್ಚಳವು ವಾರ್ಷಿಕ ಶೇ.೨.೦ ಆಗಿದ್ದು ೧೨೨ ಲಕ್ಷ ಹೂ ಕಡ್ಡಿಗಳನ್ನು ಈ ಜಿಲ್ಲೆಯಲ್ಲಿ ಬೆಳೆಸಲಾಗುತ್ತದೆ. ಈ ಹೂವಿನ ಸರಾಸರಿ ಬೆಳವಣಿಗೆಯು ಶೇ. ೨.೭ ಆಗಿದ್ದು. ಉತ್ಪನ್ನದಲ್ಲಿ ಕಂಡುಬಂದ ಹೆಚ್ಚಳವು ಬೆಳೆಪ್ರದೇಶದ ಹೆಚ್ಚಳಕ್ಕಿಂತ ಅಧಿಕವಾಗಿದೆ. ಪ್ರಸಕ್ತ ರಾಜ್ಯದ ಉತ್ಪಾದನೆಯಲ್ಲಿ ಶೇ. ೬೦ ರಷ್ಟು ಪಾಲು ಬಿಜಾಪುರ ಜಿಲ್ಲೆಯದು. ಸ್ಟಾಟೀಸ್ ಋತುಕಾಲಿಕ ಪುಷ್ಪವು ಕೂಡಾ ಬೆಂಗಳೂರು (ನ) ಮತ್ತು ಬಿಜಾಪುರ ಜಿಲ್ಲೆಗಳಲ್ಲಿ ಬೆಳೆಯುವ ಪುಷ್ಪಗಳಾಗಿದ್ದು ರಾಜ್ಯದ ಒಟ್ಟು ಉತ್ಪಾದನಾ ಪ್ರದೇಶ ೪೫ ಹೆಕ್ಟರ್ ಮತ್ತು ಒಟ್ಟು ಉತ್ಪಾದನೆ ೫೮ ಲಕ್ಷ ಕಡ್ಡಿಗಳು. ಇದರಲ್ಲಿ ಶೇ. ೯೦ ರಷ್ಟು ಪುಷ್ಪ ಬಿಜಾಪುರ ಜಿಲ್ಲೆಯಲ್ಲಿ ಉತ್ಪಾದನೆಯಾಗುತ್ತದೆ. ಜಿಲ್ಲೆಯಲ್ಲಿ ಬೆಳೆಯುವ ಋತುಮಾನದ ಸ್ಟಾಟೀಸ್ ಪುಷ್ಪದ ಒಟ್ಟು ಮೌಲ್ಯ ರೂ. ೭ ಲಕ್ಷ.

**೩.೬.೬ ಸಾಲ್ಡಾಗೊ / ಗೋಲ್ಡನ್ ರಾಡ್:** ಆಧುನಿಕ ಪುಷ್ಪಗಳಲ್ಲಿ ಸಾಲ್ಡಾಗೊ ಪುಷ್ಪ ಕೃಷಿ ರಾಜ್ಯದ ೨೭ ಹೆಕ್ಟರ್ ಪ್ರದೇಶದಲ್ಲಿ ಬೆಳೆಯಲಾಗುತ್ತಿದ್ದು, ಒಟ್ಟು ಪ್ರದೇಶದಲ್ಲಿ ಶೇ. ೬೦ ಬೆಂಗಳೂರು (ನ) ಜಿಲ್ಲೆಯದು. ಮತ್ತು ಶೇ. ೪೦ ರಷ್ಟು ಪ್ರದೇಶ ಚಿಕ್ಕಬಳ್ಳಾಪುರ ಜಿಲ್ಲೆಯಲ್ಲಿದೆ. ಈ ಎರಡು ಜಿಲ್ಲೆಗಳು ವಾರ್ಷಿಕ ೮೫ ಲಕ್ಷ ಹೂಕಡ್ಡಿಗಳನ್ನು ಉತ್ಪಾದಿಸುತ್ತಿದ್ದು, ಅದರಲ್ಲಿ ೬೦ ಶೇ. ಬೆಳೆಯನ್ನು ಬೆಂಗಳೂರು (ನ) ಜಿಲ್ಲೆ ಉತ್ಪಾದಿಸುತ್ತದೆ. ರಾಜ್ಯದ ಒಟ್ಟು ಪುಷ್ಪ ಪ್ರದೇಶದಲ್ಲಿ ಈ ಹೂವಿನ ಪಾಲು ಕೇವಲ ಶೇ. ೦.೭ ಮತ್ತು ರಾಜ್ಯದ ಒಟ್ಟು ಹೂವಿನ ಉತ್ಪಾದನೆಯಲ್ಲಿ ಇದರ ಪಾಲು ಶೇ. ೧.೮.

**೩.೬.೭ ಕ್ಯಾಲಾ ಅಲ್ಲೀ:** ಇದು ಕರ್ನಾಟಕದ ಪುಷ್ಪ ಪ್ರದೇಶದಲ್ಲಿ ಅತ್ಯಂತ ಕಡಿಮೆ ಭಾಗವನ್ನು ಹೊಂದಿರುವ ಆಧುನಿಕ ಪುಷ್ಪ. ಇದನ್ನು ಬೆಂಗಳೂರು (ನ) ಜಿಲ್ಲೆಯ ೯ ಹೆಕ್ಟರ್ ಪ್ರದೇಶದಲ್ಲಿ ಬೆಳೆಯಲಾಗುತ್ತಿದ್ದು ೨೦೦೮-೦೯ರಲ್ಲಿ ಇದರ ಒಟ್ಟು ಉತ್ಪಾದನೆ ೧೦ ಲಕ್ಷ ಕಡ್ಡಿಗಳು. ಈ ಹೂವನ್ನು ಬೆಳೆಯುವ ಪ್ರದೇಶ ರಾಜ್ಯದ ಒಟ್ಟು ಹೂ ಪ್ರದೇಶದ ಶೇ. ೦.೨ ಮಾತ್ರ ಮತ್ತು ಒಟ್ಟು ಉತ್ಪಾದನೆ ರಾಜ್ಯದ ಒಟ್ಟು ಹೂವಿನ ಉತ್ಪಾದನೆಯ ಶೇ. ೦.೩. ಹೂವಿನ ಒಟ್ಟು ಮೌಲ್ಯ ರೂ. ೩ ಲಕ್ಷ.

**೩.೬.೮ ಆರ್ಕಿಡ್ಸ್ (ಸೀತಾಳೆ):** ಪುಷ್ಪೋದ್ಯಮದಲ್ಲಿ ಆರ್ಕಿಡ್ಸ್ ಪುಷ್ಪಕ್ಕೆ ಬಹಳ ಮಹತ್ವವಿದೆ. ಹೂ ಚಟ್ಟಿಗಳಲ್ಲಿ ಬೆಳೆಯಲಾಗುವ ಆರ್ಕಿಡ್‌ಗಳು ಸೊಬಗಿನ ಆಕರ್ಷಣೀಯ ಪುಷ್ಪ.

ಅಲಂಕಾರಕ್ಕಾಗಿ ಬಳಕೆಯಾಗುವ ಪುಷ್ಪಗಳಿಗೆ ನಗರ ಪ್ರದೇಶದಲ್ಲಿ ಹೆಚ್ಚಿನ ಬೇಡಿಕೆ ಇರುವುದರಿಂದ ಇದು ಪುಷ್ಪೋದ್ಯಮದಲ್ಲಿ ಆರ್ಥಿಕವಾಗಿ ಲಾಭದಾಯಕವಾದ ಆಧುನಿಕ ಪುಷ್ಪ ಪ್ರಭೇದವಾಗಿದೆ. ರಾಜ್ಯದ ೨೦೦೦ ಹೆಕ್ಟರ್ ಪ್ರದೇಶದಲ್ಲಿ ಈ ಹೂವನ್ನು ಬೆಳೆಸಲಾಗುತ್ತಿದ್ದು ರಾಜ್ಯದ ಒಟ್ಟು ಉತ್ಪಾದನೆ ೧೨ಲಕ್ಷ ಹೂಗಿಡಗಳು. ರಾಜ್ಯದ ಒಟ್ಟು ಪುಷ್ಪ ಉತ್ಪಾದನೆಯಲ್ಲಿ ಈ ಹೂವಿನ ಪಾಲು ಕೇವಲ ಶೇ. ೦.೩[೧೩].

**೩.೬.೯ ಹೈಬ್ರಿಡ್ ಗುಲಾಬಿ:** ಗುಲಾಬಿ ಪುಷ್ಪದಲ್ಲಿ ಸಾಂಪ್ರದಾಯಕ ಗುಲಾಬಿ ಮತ್ತು ಹೈಬ್ರಿಡ್ ಗುಲಾಬಿಗಳೆಂಬ ಎರಡು ಪ್ರಭೇದಗಳಿವೆ. ವಾಣಿಜ್ಯಕ್ಕಾಗಿ ಬಳಸುವ ಗುಲಾಬಿಯಲ್ಲಿ ಹೈಬ್ರಿಡ್ ಗುಲಾಬಿಯ ಪಾಲು ಶೇ. ೯೦. ಸಾಂಪ್ರದಾಯಿಕ ಗುಲಾಬಿ ಹೂವನ್ನು ಗ್ರಾಮೀಣ ಪ್ರದೇಶದಲ್ಲಿ ತೆರೆದ ಬಯಲಿನಲ್ಲಿ ಸ್ಥಳೀಯ ಮಾರುಕಟ್ಟೆಗಾಗಿ ಬೆಳೆಸಲಾಗುತ್ತದೆ. ಆಧುನಿಕ ಹೈಟೆಕ್ ಪುಷ್ಪೋದ್ಯಮದಲ್ಲಿ ಹೈಬ್ರಿಡ್ ಗುಲಾಬಿಗೆ ಮಹತ್ವ ನೀಡಲಾಗಿದೆ. ಹೈಬ್ರಿಡ್ ಗುಲಾಬಿಗಳಲ್ಲಿ ಕ್ವೀನ್ ಎಲಿಜಬೆತ್, ಸೂಪರ್ ಸ್ಟಾರ್, ಮೊಂಟೆಸುಮ (Motesuma), ಪಾಪ ಮೈಲಾಂಡ್ (Papa Meiland), ಕ್ರಿಶ್ಚಿಯನ್ ಡಿಯೊರ್ (Christain Diar), ಈಫೆಲ್ ಟವರ್ (Eiffel Tower), ಕಿಸ್ ಆಫ್ ಫೈರ್ (Kiss of fire), ಗೋಲ್ಡನ್ ಜಯಂಟ್ (Golden Giant), ಗಾರ್ಡ್ ಹೇಂಕಲ್ (Garde Hankel), ಫಸ್ಟ್ ಪ್ರೈಝ್ (First Prize) ಮೊದಲಾದವುಗಳು ಪ್ರಸಿದ್ಧವಾದವುಗಳು. ಇತ್ತೀಚಿನ ವರ್ಷಗಳಲ್ಲಿ ಇನ್ನೂ ಕೆಲವು ಹೊಸ ತಳಿಗಳನ್ನು ಆವಿಷ್ಕರಿಸಿದ್ದು ಅವುಗಳಲ್ಲಿ ಫಸ್ಟ್ ರೆಡ್ (First Red), ಗ್ರಾಂಡ್ ಗಾಲಾ (Grand Gala), ವಿರ್ಸಿಲಿಯಾ (Virsilia), ವಿವಾಲ್ಡಿ (Vivaldi) ಮೊದಲಾದವುಗಳು ವಾಣಿಜ್ಯಕ್ಕಾಗಿ ಬಳಸಲಾಗುವ ಗುಲಾಬಿ ಹೂಗಳು[೧೪]. ಇವುಗಳು ಪುಷ್ಪ ರಫ್ತು ಉದ್ಯಮದ ಪ್ರಧಾನ ಪುಷ್ಪವಾಗಿದ್ದು ಕರ್ನಾಟಕದಲ್ಲಿರುವ ಅಂತಾರಾಷ್ಟ್ರೀಯ ಪುಷ್ಪ ಹರಾಜು ಕೇಂದ್ರದ ಪ್ರಮುಖ ರಫ್ತು ವಸ್ತುವಾಗಿದೆ. ಗುಲಾಬಿ ಉತ್ಪನ್ನದ ಪ್ರಮಾಣವನ್ನು ಎಣಿಕೆ ವಿಧಾನದಲ್ಲಿ ಮಾಪನ ಮಾಡಲಾಗುತ್ತದೆ.

೨೦೦೮-೦೯ರಲ್ಲಿ ರಾಜ್ಯದ ಒಟ್ಟು ಗುಲಾಬಿ ಉತ್ಪಾದನಾ ಪ್ರದೇಶವು ೨೨೯೬ ಹೆಕ್ಟರ್ ಮತ್ತು ಒಟ್ಟು ಉತ್ಪನ್ನವು ೪೫೬೫ ಲಕ್ಷ ಹೂಗಳು. ರಾಜ್ಯದ ಒಟ್ಟು ಗುಲಾಬಿ ಮೌಲ್ಯ ರೂ. ೨೯೮೫ ಲಕ್ಷ. ಗುಲಾಬಿ ಹೂವಿನ ಅತ್ಯಂತ ಹೆಚ್ಚಿನ ಬೆಳೆ ಪ್ರದೇಶವಿರುವ ಮತ್ತು ಹೂ ಉತ್ಪಾದಿಸುವ ಜಿಲ್ಲೆ ಕೋಲಾರ. ಅದು ೪೪೮ ಹೆಕ್ಟರ್ ಪ್ರದೇಶದಲ್ಲಿ ಈ ಹೂವನ್ನು ಬೆಳೆಸುತ್ತಿದ್ದು ೮೯೦ ಲಕ್ಷ ಹೂಗಳನ್ನು ಉತ್ಪಾದಿಸುತ್ತದೆ ಮತ್ತು ಈ ಹೂವು ಜಿಲ್ಲೆಗೆ ರೂ. ೭೫೬ ಲಕ್ಷದ ಆದಾಯ ನೀಡುತ್ತದೆ. ಗುಲಾಬಿ ಬೆಳೆಯುವ ರಾಜ್ಯದ ಇತರ ಪ್ರಧಾನ ಜಿಲ್ಲೆಗಳೆಂದರೆ ಬೆಂಗಳೂರು (ಗ್ರಾ) ಚಿಕ್ಕಬಳ್ಳಾಪುರ, ಗುಲ್ಬರ್ಗಾ ಮತ್ತು ರಾಮನಗರ.[೧೫]

## ೩.೭ ಸಾಂಪ್ರದಾಯಿಕ ಪುಷ್ಪ ಬೆಳೆಯುವ ಪ್ರದೇಶ

ಪುಷ್ಪೋದ್ಯಮದ ಬೆಳವಣಿಗೆಯನ್ನು ಪುಷ್ಪ ಬೆಳೆ ಪ್ರದೇಶ ಮತ್ತು ಉತ್ಪಾದನೆ ಎಂಬ ಎರಡು ಮಾನದಂಡಗಳಲ್ಲಿ ಅಧ್ಯಯನ ಮಾಡಲಾಗಿದೆ. ೧೯೯೯-೨೦೦೪ರ ಅವಧಿಯ ಸರಾಸರಿ ಪುಷ್ಪ ಬೆಳೆ ಪ್ರದೇಶವು ೧೪೨೫೭ ಹೆಕ್ಟರ್ ಆಗಿದ್ದು ಅದು ಮುಂದಿನ ೨೦೦೫-೦೯ರ ಕಾಲಾವಧಿಯಲ್ಲಿ ಸರಾಸರಿ ೨೩೪೫೮ ಹೆಕ್ಟರ್‌ಗಳು. ಇದು ವಾರ್ಷಿಕ ಸರಾಸರಿ ೧೮೪೧ ಹೆಕ್ಟರ್ ಬೆಳೆ ಪ್ರದೇಶದ ಹೆಚ್ಚಳವನ್ನು ತೋರಿಸುತ್ತದೆ. ಬೆಳೆ ಪ್ರದೇಶದ ವಾರ್ಷಿಕ ಬೆಳವಣಿಗೆ ದರವು ಶೇ. ೧೫.೦೭ ಆಗಿದೆ. ಕೋಷ್ಟಕ ೩.೩ ಕರ್ನಾಟಕದ ಸಾಂಪ್ರದಾಯಕ ಪುಷ್ಪ ಪ್ರದೇಶದ ಬೆಳವಣಿಗೆ ದರವನ್ನು ಸೂಚಿಸುತ್ತದೆ.

ಕೋಷ್ಟಕ ೩.೩

**ಕರ್ನಾಟಕದ ಸಾಂಪ್ರದಾಯಿಕ ಪುಷ್ಪ ಪ್ರದೇಶದ ಬೆಳವಣಿಗೆ**

| ಪುಷ್ಪಗಳು | ೧೯೯೯-೨೦೦೪ರಸರಾಸರಿ | | ೨೦೦೫-೨೦೦೯ರ ಸರಾಸರಿ | | ಸರಾಸರಿ ವಿಸ್ತೀರ್ಣದ ಹೆಚ್ಚಳ (ಹೆ) | ಸರಾಸರಿ ವಿಸ್ತೀರ್ಣದ ಬೆಳವಣಿಗೆ |
|---|---|---|---|---|---|---|
| | ಬೆಳೆ ಪ್ರದೇಶ(ಹೆ) | ಹೂವಿನ ಪಾಲು(ಶೇ) | ಬೆಳೆ ಪ್ರದೇಶ (ಹೆ) | ಹೂವಿನ ಪಾಲು (ಶೇ) | | |
| ಚೆಂಡು ಹೂವು | ೪೫೮೩ | ೩೨.೨ | ೭೯೩೩ | ೩೩.೮ | ೬೭೦ | ೧೪.೬ |
| ಮಲ್ಲಿಗೆ | ೩೪೫೧ | ೨೪.೨ | ೫೪೫೧ | ೨೩.೨ | ೪೦೦ | ೧೧.೬ |
| ಸೇವಂತಿಗೆ | ೨೯೬೪ | ೨೦.೭ | ೪೪೨೯ | ೧೮.೯ | ೨೯೩ | ೯.೯ |
| ಕನಕಾಂಬರ | ೧೬೨೪ | ೨೪.೨ | ೨೩೭೨ | ೧೦.೧ | ೧೫೦ | ೯.೨೧ |
| ಸುಗಂಧರಾಜ | ೯೨೫ | ೬.೫ | ೧೦೭೯ | ೪.೬ | ೩೧ | ೩.೩೨ |
| ಆಸ್ಟರ್ | ೭೧೦ | ೫.೦ | ೨೧೯೪ | ೯.೪ | ೨೯೭ | ೪೧.೮ |
| ಒಟ್ಟು | ೧೪೨೫೭ | ೧೦೦ | ೨೩೪೫೮ | ೧೦೦ | ೧೮೪೧ | ೧೫.೦೭ |

**ಆಧಾರ: ದೆಬಾಶಿಶ್ ಸೇನ್‌ಗುಪ್ತಾ ಮತ್ತು ರಾಜಕಮಲ್, ಪ್ಲೋರಿಕಲ್ಚರಲ್ ಮಾರ್ಕೆಟಿಂಗ್ ಇನ್ ಇಂಡಿಯಾ ಮತ್ತು ಕರ್ನಾಟಕ ತೋಟಗಾರಿಕೆ ಇಲಾಖೆಯ ಅಂಕಿ ಅಂಶಗಳು ೨೦೦೫-೨೦೦೯.**

ವಿಸ್ತೀರ್ಣದ ಹೆಚ್ಚಳದಲ್ಲಿ ಆಸ್ಟರ್ ಹೂವಿನ ಬೆಳೆ ಪ್ರದೇಶದಲ್ಲಿ ಉಂಟಾದ ವಿಸ್ತೀರ್ಣದ ಹೆಚ್ಚಳವು ಅತ್ಯಂತ ಹೆಚ್ಚಾಗಿದ್ದು ಆಸ್ಟರ್ ಹೂವಿನ ಪ್ರದೇಶವು ವಾರ್ಷಿಕ ಶೇ. ೪೧.೮ರ ದರದಲ್ಲಿ ಹೆಚ್ಚಾಗುತ್ತಿದೆ. ಚೆಂಡು ಹೂವು ಮತ್ತು ಮಲ್ಲಿಗೆ ಅನುಕ್ರಮವಾಗಿ ದ್ವಿತೀಯ ಹಾಗೂ ತೃತೀಯ

ಸ್ಥಾನದಲ್ಲಿ ಬೆಳವಣಿಗೆ ಹೊಂದುತ್ತಿದ್ದು, ಅವುಗಳ ಬೆಳವಣಿಗೆ ದರವು ಶೇ. ೧೪.೬ ಮತ್ತು ೧೧.೬. ಸುಗಂಧರಾಜ ಪುಷ್ಪ ಪ್ರದೇಶದ ವಾರ್ಷಿಕ ಬೆಳವಣಿಗೆಯು ಅತ್ಯಂತ ಕಡಿಮೆಯಾಗಿರುತ್ತದೆ. ರಾಜ್ಯದ ಒಟ್ಟು ಪುಷ್ಪ ಬೆಳೆ ಪ್ರದೇಶದಲ್ಲಿ ಹೂವುಗಳ ಸಂಯೋಜನೆಯಲ್ಲಿ ಬದಲಾವಣೆಯಾಗುತ್ತಿದೆ. ೧೯೯೯ಲಿಂದ ೨೦೦೪ ರ ಮೊದಲ ಐದು ವರ್ಷಗಳ ಕಾಲಾವಧಿಯಲ್ಲಿ ಒಟ್ಟು ಬೆಳೆ ಪ್ರದೇಶದಲ್ಲಿ ಚೆಂಡು ಹೂವು ಅತ್ಯಂತ ಹೆಚ್ಚಿನ ಪಾಲನ್ನು ಹೊಂದಿದ್ದು ೨೦೦೫-೨೦೦೯ ರ ಐದು ವರ್ಷಗಳ ಕಾಲಾವಧಿಯಲ್ಲಿ ತನ್ನ ಪಾಲನ್ನು ಶೇ. ೩೩.೮ಕ್ಕೆ ಹೆಚ್ಚಿಸಿರುತ್ತದೆ. ಅದೇ ಪ್ರಕಾರ ಆಸ್ಟರ್ ಪುಷ್ಪ ಬೆಳೆ ಪ್ರದೇಶವು ಶೇ. ೪.೪ರಷ್ಟು ಹೆಚ್ಚಳವಾಗಿದೆ. ಆದರೆ ಮಲ್ಲಿಗೆ, ಸೇವಂತಿಗೆ, ಕನಕಾಂಬರ, ಸುಗಂಧರಾಜ ಪುಷ್ಪ ಬೆಳೆಯುವ ಪ್ರದೇಶದಲ್ಲಿ ಇಳಿಕೆಯುಂಟಾಗಿರುತ್ತದೆ. ೧೫ ಕೋಷ್ಟಕ ೩.೪ ಸಾಂಪ್ರದಾಯಿಕ ಹೂಗಳ ಉತ್ಪಾದನೆಯಲ್ಲಿ ಉಂಟಾದ ಬದಲಾವಣೆಯನ್ನು ತೋರಿಸುತ್ತದೆ.

ಕೋಷ್ಟಕ ೩.೪

**ಕರ್ನಾಟಕದ ಸಾಂಪ್ರದಾಯಿಕ ಪುಷ್ಪ ಉತ್ಪನ್ನದ ಬೆಳವಣಿಗೆ**

| ಪುಷ್ಪಗಳು | ೧೯೯೯-೨೦೦೪ರ ವರೆಗಿನ ಸರಾಸರಿ | | ೨೦೦೮-೨೦೦೯ರ ವರೆಗಿನ ಸರಾಸರಿ | | ಸರಾಸರಿ ವಾರ್ಷಿಕ ಬದಲಾವಣೆ | |
|---|---|---|---|---|---|---|
| | ಉತ್ಪಾದನೆ (ಟನ್) | ಪುಷ್ಪದ ಪಾಲು(ಶೇ) | ಉತ್ಪಾದನೆ (ಟನ್) | ಪುಷ್ಪದ ಪಾಲು(ಶೇ) | ಉತ್ಪನ್ನ (ಟನ್) | ಶೇ |
| ಚೆಂಡು ಹೂವು | ೪೯೭೭೭ | ೩೮.೬ | ೬೯೯೪೫ | ೩೫.೭ | ೪೦೩೪ | ೮.೧ |
| ಮಲ್ಲಿಗೆ | ೨೦೨೪೪ | ೧೫.೭ | ೩೧೫೪೧ | ೧೬.೨ | ೨೨೫೯ | ೧೧.೨ |
| ಸೇವಂತಿಗೆ | ೩೬೭೯೪ | ೨೮.೧ | ೫೪೮೯೨ | ೨೭.೬ | ೩೫೬೦ | ೯.೮ |
| ಕನಕಾಂಬರ | ೭೬೬೯ | ೬.೦ | ೧೦೪೬೯ | ೫.೩ | ೫೬೦ | ೭.೩ |
| ಸುಗಂಧರಾಜ | ೮೧೨೨ | ೬.೩ | ೯೭೯೮ | ೪.೭ | ೨೩೫ | ೨.೯ |
| ಆಸ್ಟರ್ | ೬೮೫೭ | ೫.೩ | ೨೦೬೪೬ | ೧೦.೫ | ೨೭೫೮ | ೪೦.೨ |
| ಒಟ್ಟು | ೨೮೯೬೩ | ೧೦೦ | ೧೯೫೯೯೧ | ೧೦೦ | ೧೩೪೦೬ | ೧೩.೨ |

**ಆಧಾರ: ದೆಬಾಶಿಶ್ ಸೇನ್‌ಗುಪ್ತಾ ಮತ್ತು ರಾಜಕಮಲ್, ಪ್ಲಾರಿಕಲ್ಚರ್ ಮಾರ್ಕೆಟಿಂಗ್ ಇನ್ ಇಂಡಿಯಾ ಪುಟ ೪೪.**

ರಾಜ್ಯದ ಒಟ್ಟು ಪುಷ್ಪ ಉತ್ಪಾದನೆಯಲ್ಲಿ ಸೇವಂತಿಗೆ, ಸುಗಂಧರಾಜ ಮತ್ತು ಕನಕಾಂಬರ ಹೂವಿನ ಪಾಲು ಕಡಿಮೆಯಾಗಿರುತ್ತದೆ. ಆದರೆ ಇತರ ಹೂಗಳಾದ ಮಲ್ಲಿಗೆ, ಸುಗಂಧರಾಜ, ಕನಕಾಂಬರ ಮತ್ತು ಆಸ್ಟರ್ ಹೂವಿನ ಪಾಲು ಅಧಿಕವಾಗಿರುತ್ತದೆ.

೧೯೯೪-೨೦೦೪ ಮತ್ತು ೨೦೦೮-೦೯ರ ಕಾಲಾವಧಿಯ ಸರಾಸರಿ ಉತ್ಪಾದನೆ ಮತ್ತು ಉತ್ಪಾದನೆಯಲ್ಲಿ ವಿವಿಧ ಹೂಗಳ ಪಾಲಿನಲ್ಲಿ ಉಂಟಾದ ಬದಲಾವಣೆಗಳು ಪುಷ್ಪ ಬೆಳೆಗಾರರ ಇತ್ತೀಚಿನ ಉತ್ಪಾದನೆ ಒಲವನ್ನು ಸೂಚಿಸುತ್ತದೆ. ಒಟ್ಟು ಉತ್ಪಾದನೆಯಲ್ಲಿ ಚೆಂಡು ಹೂ, ಸೇವಂತಿಗೆ, ಸುಗಂಧರಾಜ, ಕನಕಾಂಬರ ಹೂಗಳ ಉತ್ಪಾದನೆಯು ಶೇಕಡಾವಾರು ಇಳಿಮುಖವಾಗಿದ್ದು, ಮಲ್ಲಿಗೆ ಮತ್ತು ಆಸ್ಟರ್ ಹೂಗಳ ಮೇಲಿನ ಉತ್ಪಾದನಾ ಒಲವು ಅಧಿಕವಾಗಿರುವುದು ವ್ಯಕ್ತವಾಗುತ್ತದೆ. ಸರಾಸರಿ ವಾರ್ಷಿಕ ಬದಲಾವಣೆಯು ಎಲ್ಲಾ ಹೂಗಳಲ್ಲಿ ಧನಾತ್ಮಕವಾಗಿದ್ದು ಪುಷ್ಪ ಬೆಳೆ ಪ್ರಮಾಣವು ಹೆಚ್ಚುತ್ತಿರುವುದು ಕಂಡುಬರುತ್ತದೆ. ಪುಷ್ಪ ಬೆಳೆಯ ಹೆಚ್ಚಳವು ಆಸ್ಟರ್ ಪುಷ್ಪದಲ್ಲಿ ಅತ್ಯಂತ ಹೆಚ್ಚಾಗಿದ್ದು ಇದು ವಾರ್ಷಿಕ ಶೇ. ೪೦.೨ರಷ್ಟಿದೆ. ಮಲ್ಲಿಗೆ ಪುಷ್ಪ ಉತ್ಪಾದನೆಯ ಸರಾಸರಿ ದರವು ಶೇ. ೧೧.೨ರಷ್ಟಿದ್ದು ಬೆಳವಣಿಗೆಯಲ್ಲಿ ಎರಡನೇ ಸ್ಥಾನದಲ್ಲಿದೆ. ಸುಗಂಧರಾಜ (ಒಂಟಿ) ಪುಷ್ಪದ ಬೆಳವಣಿಗೆ ಅತ್ಯಂತ ನಿಧಾನದಲ್ಲಿದೆ.

ಪುಷ್ಪ ಬೆಳೆಯ ವಿಸ್ತೀರ್ಣದ ಹೆಚ್ಚಳ ಮತ್ತು ಪುಷ್ಪ ಉತ್ಪಾದನೆಯ ಹೆಚ್ಚಳದ ತುಲನಾತ್ಮಕ ಅಧ್ಯಯನದ ಚಿತ್ರಣವನ್ನು ಕೋಷ್ಟಕ ೩.೫ ನೀಡುತ್ತದೆ. ಎಲ್ಲಾ ಪುಷ್ಪಗಳ ಬೆಳೆ ಪ್ರದೇಶದ ವಿಸ್ತೀರ್ಣದಲ್ಲಿ ಉಂಟಾದ ಹೆಚ್ಚಳವು ಉತ್ಪಾದನೆಯಲ್ಲಿ ಉಂಟಾದ ಸರಾಸರಿ ಹೆಚ್ಚಳಕ್ಕಿಂತ ಹೆಚ್ಚಾಗಿರುತ್ತದೆ. ಇದು ಸರಾಸರಿ ಇಳುವರಿಯ ಇಳಿಕೆಯನ್ನು ಸೂಚಿಸುತ್ತದೆ. ಬೆಳೆ ಪ್ರದೇಶದ ಹೆಚ್ಚಳಕ್ಕಿಂತ ಅಧಿಕ ಪ್ರಮಾಣದ ಹೆಚ್ಚಳವು ಉತ್ಪಾದನೆಯಲ್ಲಿ ಉಂಟಾಗಬೇಕಾಗಿರುವುದು ಇಂದಿನ ಅಗತ್ಯವಾಗಿದೆ.

ಕೋಷ್ಟಕ: ೩.೫

**ಸಾಂಪ್ರದಾಯಿಕ ಪುಷ್ಪಗಳ ಬೆಳೆ ಪ್ರದೇಶ ಮತ್ತು ಉತ್ಪಾದನೆ ೨೦೦೯**

| | ಚೆಂಡು ಹೂವು | ಸೇವಂತಿಗೆ | ಮಲ್ಲಿಗೆ | ಸುಗಂಧರಾಜ (ಒಂಟಿ) | ಕನಕಾಂಬರ | ಆಸ್ಟರ್ |
|---|---|---|---|---|---|---|
| ಬೆಳೆ ಪ್ರದೇಶ | ೧೪.೬ | ೯.೯ | ೧೧.೬ | ೩.೩೨ | ೯.೨೧ | ೪೧.೮ |
| ಉತ್ಪಾದನೆ | ೮.೧ | ೯.೮ | ೧೧.೨ | ೨.೯ | ೭.೩ | ೪೦.೨ |

ಆಧಾರ: ದೆಬಾಶಿಶ್ ಸೇನ್‌ಗುಪ್ತಾ, ರಾಜಕಮಲ್, ಫ್ಲೋರಿಕಲ್ಚರಲ್ ಮಾರ್ಕೆಟಿಂಗ್ ಇನ್ ಇಂಡಿಯಾ

ಕರ್ನಾಟಕ ರಾಜ್ಯ ತೋಟಗಾರಿಕೆ ಇಲಾಖೆಯ ಅಂಕಿ ಅಂಶಗಳು ೨೦೦೮-೦೯.ಪುಟ ೪೪

## ೩.೮ ಕರ್ನಾಟಕದ ಸಾಂಪ್ರದಾಯಿಕೇತರ ಪುಷ್ಪಗಳು

ಕರ್ನಾಟಕದಲ್ಲಿ ಬೆಳೆಸಲಾಗುವ ಸಾಂಪ್ರದಾಯಿಕೇತರ ಪುಷ್ಪಗಳೆಂದರೆ ಹೈಬ್ರಿಡ್ ಗುಲಾಬಿ, ಗ್ಲಾಡಿಯೋಲಸ್, ಸ್ಟಾಟೀಸ್ ಸುಗಂಧರಾಜ (ಜಂಟಿ) ಅಂಥೂರಿಯಂ, ಕಾರ್ನೇಶನ್, ಜರ್ಬೇರ, ಬರ್ಡ್ ಆಫ್ ಪ್ಯಾರಡೈಸ್, ಗೋಲ್ಡನ್ ರಾಡ್, ಕ್ಯಾಲಾಲಿಲ್ಲೀ ಮತ್ತು ಓರ್ಕಿಡ್ಸ್ ಇವುಗಳು ವಿದೇಶಗಳಲ್ಲಿ ಹೆಚ್ಚಿನ ಬೇಡಿಕೆಯಿರುವ ಹೂವುಗಳು. ಸಂರಕ್ಷಿತ ವಾತಾವರಣದಲ್ಲಿ ಇವುಗಳನ್ನು ಬೆಳೆಸುತ್ತಿದ್ದು ಇವುಗಳ ಉತ್ಪಾದನೆಯನ್ನು ಎಣಿಕೆಯ ವಿಧಾನದಲ್ಲಿ ಲೆಕ್ಕಾಚಾರ ಮಾಡಲಾಗುತ್ತದೆ. ಈ ಪುಷ್ಪಗಳಲ್ಲಿ ಗುಲಾಬಿ ಉದ್ಯಮದಲ್ಲಿ ಕರ್ನಾಟಕ ಪ್ರಸಿದ್ಧವಾಗಿದೆ. ೨೦೦೮-೦೯ನೇ ಸಾಲಿನಲ್ಲಿ ಬೆಂಗಳೂರು ಅಂತಾರಾಷ್ಟ್ರೀಯ ಪುಷ್ಪ ಮಾರುಕಟ್ಟೆಯೊಂದರಲ್ಲೇ ಹರಾಜಾದ ಗುಲಾಬಿ ಹೂಗಳ ಸಂಖ್ಯೆ ೨.೧೧ ಕೋಟಿಗಳಾಗಿದ್ದು ದೊರೆತ ಆದಾಯವು ರೂ. ೪.೭ ಕೋಟಿ[೧೬]. ಕೋಷ್ಟಕ ೩.೫ ಕೆಲವು ಪ್ರಧಾನ ನವೀನ ಪುಷ್ಪಗಳ ಉತ್ಪಾದನೆಯ ಬಗ್ಗೆ ಮತ್ತು ಬೆಳೆ ಪ್ರದೇಶದ ಬಗ್ಗೆ ಮಾಹಿತಿ ನೀಡುತ್ತದೆ.

ಕೋಷ್ಟಕ ೩.೬

**ಆಧುನಿಕ ಪುಷ್ಪಗಳ ಉತ್ಪಾದನ ಪ್ರದೇಶ ಮತ್ತು ಉತ್ಪನ್ನ**

| ಕ್ರಮ ಸಂಖ್ಯೆ | ಹೆಸರು | ವಿಸ್ತೀರ್ಣ (ಹೆಕ್ಟರ್) | ವಿಸ್ತೀರ್ಣದ ಶೇಕಡಾ | ಉತ್ಪಾದನೆ (ಲಕ್ಷಗಳಲ್ಲಿ) | ಉತ್ಪಾದನೆ (ಶೇಕಡಾ) |
|---|---|---|---|---|---|
| 1 | ಆರ್ಕಿಡ್ಸ್ | ೨೦೦೨ | ೫೦.೩ | ೧೨ | ೦.೩ |
| 2 | ಗುಲಾಬಿ | ೧೫೫೦ | ೩೯.೦ | ೩೬೨೮ | ೭೮.೯ |
| 3 | ಗ್ಲಾಡಿಯೋಲಸ್ | ೧೩೫ | ೩.೪ | ೩೦೭ | ೬.೭ |
| 4 | ಸ್ಟಾಟೀಸ್ (ಸದಾ ಹೂ ಬಿಡುವ) | ೮೧ | ೨.೦ | ೧೨೨ | ೨.೭ |
| 5 | ಸ್ಟಾಟೀಸ್(ಋತುಮಾನದಲ್ಲಿಹೂ) | ೪೫ | ೧.೧ | ೫೮ | ೧.೩ |
| 6 | ಅಂಥೂರಿಯಂ | ೪೦ | ೧.೦ | ೯೬ | ೨.೦ |
| 7 | ಕಾರ್ನೇಶನ್ | ೩೦ | ೦.೮ | ೧೮೬ | ೪.೦ |
| 8 | ಜರ್ಬೇರ | ೩೩ | ೦.೮ | ೭೭ | ೧.೭ |
| 9 | ಬರ್ಡ್ ಆಫ್ ಪ್ಯಾರಡೈಸ್ | ೨೭ | ೦.೭ | ೨೧ | ೦.೪ |
| 10 | ಗೋಲ್ಡನ್ ರಾಡ್ | ೨೭ | ೦.೭ | ೮೫ | ೧.೮ |
| 11 | ಕ್ಯಾಲಾಲಿಲ್ಲೀ | ೯ | ೦.೨ | ೧೪ | ೦.೩ |
| | ಒಟ್ಟು | ೩೯೭೯ | ೧೦೦ | ೪೬೦೬ | ೧೦೦ |

ಆಧಾರ: **Debashish Sengupta Rajkamal, Foriculture Marketing in India, P – 5.**

ಸಾಂಪ್ರದಾಯಿಕೇತರ ಪುಷ್ಪಗಳಲ್ಲಿ ಆರ್ಕಿಡ್ಸ್ ಶೇ. ೫೦ ರಷ್ಟು ಪ್ರದೇಶವನ್ನು ಆವರಿಸಿಕೊಂಡಿದ್ದರೂ ಉತ್ಪಾದನೆ ಕೇವಲ ಶೇ. ೦.೩ ಗುಲಾಬಿ ಶೇ. ೩೯ ರಷ್ಟು ಪ್ರದೇಶದಲ್ಲಿ ಹರಡಿಕೊಂಡಿದ್ದು ಒಟ್ಟು ಉತ್ಪಾದನೆಯ ಶೇಕಡ ೭೮.೮ನ್ನು ಈ ಪುಷ್ಪವು ಉತ್ಪಾದಿಸುತ್ತದೆ. ಬೆಳೆ ಪ್ರದೇಶ ಮತ್ತು ಉತ್ಪಾದನೆಯಲ್ಲಿ ಸ್ಟಾಟೀಸ್, ಅಂಥೂರಿಯಂ, ಜರ್ಬೇರ, ಬರ್ಡ್ ಆಫ್ ಪ್ಯಾರಡೈಸ್, ಗೋಲ್ಡನ್ ರಾಡ್ ಮತ್ತು ಕ್ಯಾಲಾಲಿಲ್ಲೀ ಹೂಗಳ ಪಾಲು ತೀರ ಕಡಿಮೆಯಾಗಿದೆ. ರಾಜ್ಯದಲ್ಲಿ ೩೯೭೯ ಹೆಕ್ಟರ್ ಪ್ರದೇಶದಲ್ಲಿ ಆಧುನಿಕ ಪುಷ್ಪ ಬೆಳೆಯಿದ್ದು ಅದು ವಾರ್ಷಿಕ ೪೬ ಕೋಟಿ ಆಧುನಿಕ ಹೂವಿನ ಕಡ್ಡಿಗಳನ್ನು ಉತ್ಪಾದಿಸುತ್ತದೆ.

## ೩.೯ ಪುಷ್ಪೋದ್ಯಮದ ಬೆಳವಣಿಗೆ

ಕರ್ನಾಟಕ ರಾಜ್ಯದ ಒಟ್ಟು ವಾಣಿಜ್ಯ ಹೂ ಬೆಳೆ ಪ್ರದೇಶ ೨೭೦೨೪ ಹೆಕ್ಟರ್. ಪುಷ್ಪ ಬೆಳೆಯಲ್ಲಿ ಕೆಲವು ಜಿಲ್ಲೆಗಳು ವೈಶಿಷ್ಟ್ಯವನ್ನು ಹೊಂದಿರುತ್ತವೆ. ಕರ್ನಾಟಕದ ಒಟ್ಟು ಪುಷ್ಪ ಬೆಳೆ ಪ್ರದೇಶದ ಶೇ. ೧೧ ರಷ್ಟು ಪ್ರದೇಶವು ತುಮಕೂರು ಜಿಲ್ಲೆಯಲ್ಲಿದೆ. ತುಮಕೂರು ಕರ್ನಾಟಕದ ವಿಸ್ತಾರವಾದ ಜಿಲ್ಲೆಗಳಲ್ಲಿ ಒಂದಾಗಿದೆ. ಉತ್ತಮ ನೀರಾವರಿ, ತಂಪು ಹವಾಮಾನ, ಫಲವತ್ತಾದ ಮಣ್ಣು, ಪ್ರಧಾನ ಮಾರುಕಟ್ಟೆಗಳ ಸಂಪರ್ಕ ಮೊದಲಾದ ವಿಚಾರಗಳು ಈ ಪ್ರದೇಶದ ಪುಷ್ಪವ್ಯವಸಾಯಕ್ಕೆ ಪೂರಕ ಅಂಶಗಳು. ಕೋಷ್ಟಕ ೩.೭ ವಾಣಿಜ್ಯ ಪುಷ್ಪ ಬೆಳೆಯುವ ಪ್ರದೇಶದಲ್ಲಿ ಪ್ರಧಾನ ಹತ್ತು ಜಿಲ್ಲೆಗಳನ್ನು ಅವುಗಳ ಪುಷ್ಪ ಬೆಳೆ ಪ್ರದೇಶದ ವಿಸ್ತೀರ್ಣವನ್ನು ಹಾಗೂ ಒಟ್ಟು ಪ್ರದೇಶದಲ್ಲಿ ಜಿಲ್ಲೆಯ ಸ್ಥಾನವನ್ನು ನೀಡಲಾಗಿದೆ.

ಕೋಷ್ಟಕ ೩.೭

## ಪುಷ್ಪ ಬೆಳೆ ಪ್ರದೇಶದಲ್ಲಿ ಪ್ರಧಾನ ಹತ್ತು ಜಿಲ್ಲೆಗಳು

| ಕ್ರಮ ಸಂಖ್ಯೆ | ಜಿಲ್ಲೆಗಳು | ಪುಷ್ಪ ಬೆಳೆಯುವ ಪ್ರದೇಶ (ಹೆ) | ಒಟ್ಟು ಪ್ರದೇಶದಲ್ಲಿ ಜಿಲ್ಲೆಯಪಾಲು (ಶೇ) |
|---|---|---|---|
| ೧ | ತುಮಕೂರು | ೨೯೫೯ | ೧೧ |
| ೨ | ಚಾಮರಾಜನಗರ | ೨೧೯೫ | ೮ |
| ೩ | ಹಾವೇರಿ | ೨೦೭೫ | ೮ |
| ೪ | ಚಿಕ್ಕಬಳ್ಳಾಪುರ | ೧೮೩೪ | ೭ |
| ೫ | ಬಳ್ಳಾರಿ | ೧೭೫೩ | ೬.೫ |
| ೬ | ಕೋಲಾರ | ೧೭೫೧ | ೬ |
| ೭ | ಮಂಡ್ಯ | ೧೩೪೦ | ೫ |
| ೮ | ರಾಮನಗರ | ೧೧೫೩ | ೪ |
| ೯ | ಬೆಂಗಳೂರು (ಗ್ರಾ) | ೧೦೬೭ | ೪ |
| ೧೦ | ಚಿತ್ರದುರ್ಗಾ | ೧೦೫೯ | ೪ |
| | ಒಟ್ಟು | ೧೭೧೮೬ | ೬೩.೫ |
| | ರಾಜ್ಯದ ಮೊತ್ತ | ೨೭೦೨೪ | ೧೦೦ |

**ಆಧಾರ: ೨೦೦೮-೦೯ನೇ ಸಾಲಿನ ತೋಟಗಾರಿಕೆ ಇಲಾಖೆಯ ಬೆಳೆಗಳ ಜಿಲ್ಲಾವಾರು ವಿವರ ಪುಟ ೧೮.**

ಒಟ್ಟು ಹತ್ತು ಜಿಲ್ಲೆಗಳಲ್ಲಿ ರಾಜ್ಯದ ಒಟ್ಟು ಪುಷ್ಪ ಬೆಳೆ ಪ್ರದೇಶದ ಶೇ. ೬೩.೫ ರಷ್ಟು ಭಾಗವಿದೆ. ಬೆಳೆ ಪ್ರದೇಶದ ವಿಸ್ತೀರ್ಣದಲ್ಲಿ ಹಾವೇರಿ ಜಿಲ್ಲೆ ಮತ್ತು ಚಾಮರಾಜನಗರ ಬಹುತೇಕ ಒಂದೇ ಆಗಿದ್ದು ತಲಾ ಶೇ. ೮ ರಷ್ಟು ಪ್ರದೇಶವನ್ನು ಹೊಂದಿಕೊಂಡಿದೆ. ರಾಮನಗರ, ಬೆಂಗಳೂರು (ಗ್ರಾ) ಮತ್ತು ಚಿತ್ರದುರ್ಗಾ ಜಿಲ್ಲೆ ರಾಜ್ಯದ ಒಟ್ಟು ವಿಸ್ತೀರ್ಣದ ಶೇ. ೪ ರಷ್ಟು ಪುಷ್ಪ ಪ್ರದೇಶವನ್ನೂ ಹೊಂದಿರುತ್ತದೆ. ಈ ಜಿಲ್ಲೆಗಳ ಪುಷ್ಪ ಪ್ರದೇಶದ ಪಾಲು ರಾಜ್ಯದ ಸರಾಸರಿಗಿಂತ ಅಧಿಕವಾಗಿರುತ್ತದೆ.

ಕರ್ನಾಟಕ ರಾಜ್ಯದ ವಿವಿಧ ಜಿಲ್ಲೆಗಳ ಪುಷ್ಪ ಬೆಳೆಯ ಉತ್ಪಾದಕತೆ ಭಿನ್ನವಾಗಿದೆ. ಹಾಗಾಗಿ ಕೆಲವೊಂದು ಜಿಲ್ಲೆಗಳಲ್ಲಿ ವಿಸ್ತಾರವಾದ ಪುಷ್ಪ ಬೆಳೆ ಪ್ರದೇಶವಿದ್ದರೂ ಅವುಗಳ ಪುಷ್ಪ ಉತ್ಪಾದನಾ ಪ್ರಮಾಣವು ಪುಷ್ಪ ಪ್ರದೇಶಕ್ಕೆ ಅನುಗುಣವಾಗಿಲ್ಲ. ಮಂಡ್ಯ ಜಿಲ್ಲೆ ಪುಷ್ಪ ಬೆಳೆಯುವ ಪ್ರದೇಶದಲ್ಲಿ ೭ನೇ ಸ್ಥಾನದಲ್ಲಿದೆ. ಆದರೆ ಜಿಲ್ಲೆಯ ಉತ್ಪಾದಕತೆ ಹೆಚ್ಚಾಗಿರುವುದರಿಂದ ಅದು ಪುಷ್ಪ ಉತ್ಪಾದನೆಯಲ್ಲಿ ನಾಲ್ಕನೇ ಸ್ಥಾನವನ್ನು ಪಡೆದಿದೆ. ಚಿಕ್ಕಬಳ್ಳಾಪುರ ಜಿಲ್ಲೆ ಬೆಳೆ ಪ್ರದೇಶದ

ವಿಚಾರದಲ್ಲಿ ನಾಲ್ಕನೇ ಸ್ಥಾನ ಪಡೆದಿದೆ. ಆದರೆ ಪುಷ್ಪ ಉತ್ಪಾದನೆಯಲ್ಲಿ ಜಿಲ್ಲೆಗೆ ದೊರೆತ ಸ್ಥಾನ ಆರನೆಯದು. ಕೃಷಿಯಲ್ಲಿ ಆಧುನಿಕ ತಂತ್ರಜ್ಞಾನ, ಉತ್ತಮ ಬಿತ್ತನೆ ಬೀಜ, ಸೂಕ್ತವಾದ ರಸಗೊಬ್ಬರ ಮತ್ತು ನೀರಿನ ಲಭ್ಯತೆಯು ಕಡಿಮೆ ಪ್ರದೇಶದಲ್ಲಿ ಅಧಿಕ ಇಳುವರಿಯನ್ನು ನೀಡುತ್ತದೆ. ಕೋಷ್ಟಕ ೩.೮ ಕರ್ನಾಟಕ ರಾಜ್ಯದ ಪುಷ್ಪ ಉತ್ಪಾದನೆಯಲ್ಲಿ ಪ್ರಧಾನ ಹತ್ತು ಜಿಲ್ಲೆಗಳನ್ನು ತೋರಿಸುತ್ತದೆ.

ಕೋಷ್ಟಕ ೩.೮

**ಪುಷ್ಪ ಉತ್ಪಾದನೆಯಲ್ಲಿ ಪ್ರಧಾನ ಹತ್ತು ಜಿಲ್ಲೆಗಳು**

| ಕ್ರ. ಸಂ. | ಜಿಲ್ಲೆಗಳು | ಹೂಗಳ ಉತ್ಪಾದನೆ (ಮೆಟ್ರಿಕ್ ಟನ್‌ಗಳಲ್ಲಿ) | ಒಟ್ಟು ಉತ್ಪಾದನೆಯಲ್ಲಿ ಜಿಲ್ಲೆಯ ಪಾಲು (ಶೇ) |
|---|---|---|---|
| ೧ | ತುಮಕೂರು | ೨೭೫೮೮ | ೧೩.೯೧ |
| ೨ | ಚಾಮರಾಜನಗರ | ೧೯೩೯ | ೯.೮ |
| ೩ | ಹಾವೇರಿ | ೧೬೮೧೯ | ೮.೫ |
| ೪ | ಮಂಡ್ಯ | ೧೨೫೪೮ | ೬.೩೫ |
| ೫ | ಕೋಲಾರ | ೧೨೧೫೦ | ೬.೧೫ |
| ೬ | ಚಿಕ್ಕಬಳ್ಳಾಪುರ | ೧೧೪೭೧ | ೫.೮ |
| ೭ | ರಾಮನಗರ | ೮೯೪೨ | ೪.೫ |
| ೮ | ಚಿತ್ರದುರ್ಗಾ | ೯೬೧೫ | ೪.೮೬ |
| ೯ | ಬೆಳಗಾವಿ | ೮೫೮೭ | ೪.೩೪ |
| ೧೦ | ದಾವಣಗೆರೆ | ೭೧೬೭ | ೩.೬೨ |
| | ಒಟ್ಟು | ೧೩೪೨೮೪ | ೬೭.೮೩ |
| | ರಾಜ್ಯದ ಮೊತ್ತ | ೧೯೭೯೬೩ | ೧೦೦ |

ಮೂಲ: ತೋಟಗಾರಿಕೆ ಇಲಾಖೆಯ ಅಂಕೆ ಅಂಶಗಳು ೨೦೦೮–೦೯.ಪುಟ ೧೯

ರಾಜ್ಯದ ಒಟ್ಟು ಪುಷ್ಪ ಉತ್ಪಾದನೆ ೧,೯೭,೯೬೩ ಟನ್. ಇದರಲ್ಲಿ ಪ್ರಮುಖ ಹತ್ತು ಜಿಲ್ಲೆಗಳ ಪಾಲು ಶೇ. ೬೭.೮೩. ಉತ್ಪಾದನಾ ಪ್ರದೇಶದಲ್ಲಿರುವಂತೆಯೇ ಉತ್ಪನ್ನದಲ್ಲಿಯೂ ತುಮಕೂರು ಜಿಲ್ಲೆ ರಾಜ್ಯದಲ್ಲೇ ಪ್ರಥಮ. ಅದು ಒಟ್ಟು ಉತ್ಪಾದನೆಯ ಶೇ.೧೩.೯೧ ರಷ್ಟು ಹೂಗಳನ್ನು ಉತ್ಪಾದಿಸುವುದು. ಈ ಜಿಲ್ಲೆಯು ಆಸ್ಟರ್, ಮಲ್ಲಿಗೆ ಮತ್ತು ಸೇವಂತಿಗೆ ಹೂವಿನ ಉತ್ಪಾದನೆಯಲ್ಲಿ ಪ್ರಥಮ ಸ್ಥಾನದಲ್ಲಿದೆ. ಜಿಲ್ಲೆಯ ಪುಷ್ಪ ಇಳುವರಿಯು ೯.೩೨ ಆಗಿದ್ದು, ಅದು ರಾಜ್ಯದಲ್ಲೇ ಅತ್ಯಂತ ಹೆಚ್ಚು ಪುಷ್ಪ ಇಳುವರಿ ಜಿಲ್ಲೆಯಾಗಿದೆ. ಪುಷ್ಪ ಬೆಳೆಯಲ್ಲಿ ಎರಡನೆಯ ಸ್ಥಾನವನ್ನು ಚಾಮರಾಜನಗರ ಮತ್ತು ಮೂರನೇ ಸ್ಥಾನವನ್ನು ಹಾವೇರಿ ಜಿಲ್ಲೆ ಪಡೆದಿರುತ್ತದೆ.

ಅವು ಅನುಕ್ರಮವಾಗಿ ರಾಜ್ಯದ ಒಟ್ಟು ಉತ್ಪಾದನೆಯ ಶೇ. ೯.೮ ಮತ್ತು ಶೇ ೮.೫ ರಷ್ಟು ಪುಷ್ಪವನ್ನು ಉತ್ಪಾದಿಸುತ್ತವೆ. ಬೆಳಗಾವಿ ಜಿಲ್ಲೆಯ ಪುಷ್ಪ ಬೆಳೆ ಪ್ರದೇಶವು ಒಟ್ಟು ಬೆಳೆ ಪ್ರದೇಶದ ಶೇ. ೪ ಕ್ಕಿಂತ ಕಡಿಮೆಯಿದ್ದರೂ, ಅದು ರಾಜ್ಯದ ಒಟ್ಟು ಉತ್ಪಾದನೆಯ ಶೇ. ೪.೩೪ ರಷ್ಟು ಪುಷ್ಪವನ್ನು ಉತ್ಪಾದಿಸುತ್ತದೆ.

ಪುಷ್ಪ ಉತ್ಪಾದನೆ ಪ್ರದೇಶ ಮತ್ತು ಪುಷ್ಪ ಉತ್ಪನ್ನದಂತೆ ಪುಷ್ಪ ಮೌಲ್ಯದಲ್ಲೂ ತುಮಕೂರು ಜಿಲ್ಲೆ ಪ್ರಥಮ, ರಾಜ್ಯದ ಒಟ್ಟು ಪುಷ್ಪ ಮೌಲ್ಯದ ಶೇ. ೭೪.೪೩ ರಷ್ಟು ಭಾಗವನ್ನು ಹತ್ತು ಜಿಲ್ಲೆಗಳು ಸೃಷ್ಟಿಸುತ್ತವೆ. ಅದರಲ್ಲಿ ತುಮಕೂರು ಜಿಲ್ಲೆಯ ಪಾಲು ಶೇ. ೨೦.೫೧. ದ್ವಿತೀಯ ಸ್ಥಾನದಲ್ಲಿ ರಾಮನಗರ ಜಿಲ್ಲೆ. ಅವರ ಪಾಲು ಶೇ. ೧೪.೯೭. ೨೦೦೮-೦೯ ರಲ್ಲಿ ಪುಷ್ಪೋದ್ಯಮ ಸೃಷ್ಟಿಸಿದ ಒಟ್ಟು ಆದಾಯ ರೂ. ೩೬೦.೧೪ ಕೋಟಿ. ಕೋಷ್ಟಕ ೩.೯ ರಾಜ್ಯದ ಪ್ರಥಮ ೧೦ ಜಿಲ್ಲೆಗಳ ಜಿಲ್ಲಾವಾರು ಪುಷ್ಪ ಆದಾಯವನ್ನು ಸೂಚಿಸುತ್ತದೆ.

ಕೋಷ್ಟಕ ೩.೯

**ಅತ್ಯಧಿಕ ಪುಷ್ಪ ಆದಾಯದ ಹತ್ತು ಜಿಲ್ಲೆಗಳು**

| ಕ್ರ. ಸಂ. | ಜಿಲ್ಲೆಗಳ ಹೆಸರು | ಪುಷ್ಪೋದ್ಯಮದ ಆದಾಯ (ಲಕ್ಷಗಳಲ್ಲಿ) | ಒಟ್ಟು ಆದಾಯದಲ್ಲಿ ಜಿಲ್ಲೆಯ ಪಾಲು (ಶೇ) |
|---|---|---|---|
| ೧ | ತುಮಕೂರು | ೯೯೨೬ | ೨೦.೫ |
| ೨ | ರಾಮನಗರ | ೭೨೪೬ | ೧೪.೯೮ |
| ೩ | ದಕ್ಷಿಣ ಕನ್ನಡ | ೩೩೬೩ | ೬.೯೫ |
| ೪ | ರಾಯಚೂರು | ೨೭೪೬ | ೫.೬೮ |
| ೫ | ಚಿಕ್ಕಬಳ್ಳಾಪುರ | ೨೫೮೪ | ೫.೩೪ |
| ೬ | ಹಾವೇರಿ | ೨೫೭೩ | ೫.೩೨ |
| ೭ | ಬೆಂಗಳೂರು (ಗ್ರಾ) | ೨೨೧೨ | ೪.೫೭ |
| ೮ | ಚಿತ್ರದುರ್ಗಾ | ೨೧೧೭ | ೪.೩೮ |
| ೯ | ಕೋಲಾರ | ೧೯೧೭ | ೩.೯೬ |
| ೧೦ | ಬೆಳಗಾಂ | ೧೩೩೦ | ೨.೭೫ |
| | ಒಟ್ಟು | ೩೬೦೧೪ | ೭೪.೪೩ |
| | ರಾಜ್ಯದ ಮೊತ್ತ | ೪೮೩೮೧ | ೧೦೦ |

ಮೂಲ: ತೋಟಗಾರಿಕೆ ಬೆಳೆಗಳ ಅಂಕಿ ಅಂಶಗಳು, ೨೦೦೮-೦೯ ತೋಟಗಾರಿಕೆ ಇಲಾಖೆ ಬೆಂಗಳೂರು ಪುಟ ೨೮

## ಪುಷ್ಪೋದ್ಯಮ ಅಭಿವೃದ್ಧಿ ಕಾರ್ಯತಂತ್ರಗಳು

ಕೀನ್ಯಾ ಮತ್ತು ಕೊಲಂಬಿಯಾದಂತಹ ಸಣ್ಣ ರಾಷ್ಟ್ರಗಳ ಪುಷ್ಪ ಉದ್ಯಮವನ್ನು ಹೋಲಿಸಿದರೆ ವಿಶಾಲ ಭಾರತದ ಈ ಉದ್ಯಮ ತೃಪ್ತಿದಾಯಕವಾಗಿಲ್ಲ. ೧೯೯೧ ರ ತರುವಾಯ ಅಂತರಾಷ್ಟ್ರೀಯ ವ್ಯಾಪಾರದಲ್ಲಿ ಪುಷ್ಪೋದ್ಯಮದ ಮಹತ್ವ ಮನಗಂಡು ಸರಕಾರ ಅನೇಕ ಸವಲತ್ತುಗಳನ್ನು ನೀಡಿರುತ್ತದೆ.

**ಕಾರ್ಯಯೋಜನೆಗಳ ರೂಪೀಕರಣ:** ಪುಷ್ಪೋದ್ಯಮದ ಪರಿಣಿತ ತಂಡ ಕರ್ನಾಟಕವನ್ನು ಅದರಲ್ಲಿ ಪ್ರತ್ಯೇಕವಾಗಿ ಬೆಂಗಳೂರನ್ನು ಪುಷ್ಪೋದ್ಯಮದ ಪ್ರಧಾನ ಕ್ಷೇತ್ರವೆಂದು ಪರಿಗಣಿಸಿದ ತರುವಾಯ ಕರ್ನಾಟಕ ಸರಕಾರವು ಅನೇಕ ಕಾರ್ಯಯೋಜನೆಗಳನ್ನು ರೂಪಿಸಿತು. ೧೯೯೫ರ ಹೊಸ ಕೃಷಿ ನೀತಿಯಲ್ಲಿ ಪುಷ್ಪೋದ್ಯಮವನ್ನು ಪ್ರಧಾನ ಕೃಷಿ ಕ್ಷೇತ್ರವೆಂದು ಬಿಂಬಿಸಿತು. ಅಷ್ಟು ಮಾತ್ರವಲ್ಲದೆ ೧೯೬೧ ರ ಭೂಸುಧಾರಣ ಕಾಯ್ದೆಯನ್ನು ತಿದ್ದುಪಡಿಗೊಳಿಸಿ ಕೃಷಿಕರಲ್ಲದ ಆದರೆ ಪುಷ್ಪ ಉದ್ಯಮದಲ್ಲಿ ಆಸಕ್ತವಾದ ಬಂಡವಾಳ ಹೂಡಿಕೆದಾರನು ೧೦೮ ಎಕರೆವರೆಗಿನ ಭೂ ಹಿಡುವಳಿಯನ್ನು ಖರೀದಿಸಲು ಉಂಟಾಗುವ ಕಾನೂನಿನ ತೊಡಕನ್ನು ನಿವಾರಿಸಿತು.

ಪುಷ್ಪೋದ್ಯಮಕ್ಕಾಗಿ ಕರ್ನಾಟಕ ಕೈಗಾರಿಕಾ ಹೂಡಿಕೆಯ ನಿಗಮ ಕೈಗಾರಿಕಾ ಎಸ್ಟೇಟುಗಳನ್ನು ಮೀಸಲಾಗಿ ಇಟ್ಟಿರುತ್ತದೆ. ಕರ್ನಾಟಕ ಕೈಗಾರಿಕಾ ಪ್ರದೇಶ ಅಭಿವೃದ್ಧಿ ಮಂಡಳಿ (KIADB) ಮತ್ತು APEDA ಇದರ ಸಹಯೋಗದಲ್ಲಿ ನೆದರ್‌ಲೆಂಡ್‌ನ ಅಲ್ಸ್‌ಮೀರ್ ಅಂತರಾಷ್ಟ್ರೀಯ ಪುಷ್ಪ ಮಾರಾಟ ಕೇಂದ್ರ ಬೆಂಗಳೂರಿನಲ್ಲಿ ಸ್ಥಾಪಿಸುವ ಬಗ್ಗೆ ಒಪ್ಪಂದ ಮಾಡಿಕೊಂಡಿದ್ದು ಅದು ಇಂದಿಗೆ ಸಾಕಾರಗೊಂಡಿದೆ.[೧೭] ಕರ್ನಾಟಕ ಸರಕಾರವು ಪುಷ್ಪೋದ್ಯಮಕ್ಕಾಗಿಯೇ ಕರ್ನಾಟಕ ಪುಷ್ಪೋದ್ಯಮ ಅಭಿವೃದ್ಧಿ ಮಂಡಳಿ (KFDB)ನ್ನು ಸ್ಥಾಪಿಸಿತು.[೧೮] ಪುಷ್ಪೋದ್ಯಮಕ್ಕಾಗಿಯೇ ಪ್ರತ್ಯೇಕ ಕೃಷಿ ಆರ್ಥಿಕ ವಲಯವನ್ನು ಸ್ಥಾಪಿಸಲು ಕರ್ನಾಟಕ ಸರಕಾರವು ಅಪೆದಾ(APEDA)ದೊಂದಿಗೆ ಒಪ್ಪಂದದ ಒಡಂಬಡಿಕೆಯನ್ನು ಮಾಡಿಕೊಂಡಿತು.[೧೯] ಪುಷ್ಪೋದ್ಯಮದ ಅಭಿವೃದ್ಧಿಗಾಗಿ ನಬಾರ್ಡ್ ಹಣಕಾಸಿನ ಸಹಾಯವನ್ನು ಸಂಬಂಧಪಟ್ಟ ಎಲ್ಲಾ ಹಣಕಾಸು ಸಂಸ್ಥೆಗಳಿಗೆ ನೀಡುತ್ತಿದೆ. ಇವುಗಳ ಹೊರತಾಗಿ ರಾಜ್ಯ ಸರಕಾರವು ಪ್ರಾದೇಶಿಕ ವಿಸ್ತರಣೆಗಾಗಿ ಮಾರುಕಟ್ಟೆಯ ಮೂಲಭೂತ ಅವಶ್ಯಕತೆಗಳ ಸೃಷ್ಟಿ, ಪುಷ್ಪ ಪ್ರದರ್ಶನಾ ಕೇಂದ್ರಗಳು ಮತ್ತು ತಂತ್ರಜ್ಞಾನ ವರ್ಗಾವಣಾ ಕೇಂದ್ರಗಳ ಸ್ಥಾಪನೆ, ಪುಷ್ಪ ಸಂರಕ್ಷಣೆಯ ತಂತ್ರಜ್ಞಾನವನ್ನು ಒದಗಿಸಿದೆ. ಪುಷ್ಪೋದ್ಯಮ ಅಭಿವೃದ್ಧಿಗೆ ರೂಪಿಸಿದ ಇತರ ಕಾರ್ಯ ಯೋಜನೆಗಳೆಂದರೆ: ಮಾದರಿ ಪುಷ್ಪೋದ್ಯಮ ಕೇಂದ್ರ , ಹಸಿರುಮನೆ ನಿರ್ಮಾಣ, ಅಂಗಾಂಶ ಕೃಷಿ ಪ್ರಯೋಗ ಶಾಲೆ, ಮಾದರಿ ಪುಷ್ಪಗ್ರಾಮ ಮತ್ತು ಮಾರಾಟ ಯೋಜನೆಗಳು.[೨೦] ಇವು ಕರ್ನಾಟಕದ ಆರ್ಥಿಕತೆಯಲ್ಲಿ ಪುಷ್ಪೋದ್ಯಮವನ್ನು ಬಲಪಡಿಸುವುದು.

## ಉಲ್ಲೇಖಗಳು ಮತ್ತು ಟಿಪ್ಪಣಿ

1. ಕರ್ನಾಟಕ ರಾಜ್ಯ ತೋಟಗಾರಿಕಾ ಬೆಳೆಗಳ ಅಂಕಿ ಅಂಶ ೨೦೦೮-೦೯.
2. ಎಚ್. ಆರ್ ಕೃಷ್ಣಯ್ಯ ಗೌಡ, ಕರ್ನಾಟಕ ಆರ್ಥಿಕತೆ, ಸ್ಪಂದನ ಪ್ರಕಾಶನ, ಬೆಂಗಳೂರು, ಪು. ೧೪.
3. ಸರ್ಕಾರಿ ಆದೇಶ ಸಂಖ್ಯೆ G.O.No. AF ೭೭ AEG, ದಿನಾಂಕ ೩.೧೧.೧೯೬೫.
4. ದಕ್ಷಿಣ ಕನ್ನಡ ಜಿಲ್ಲಾ ತೋಟಗಾರಿಕೆ ಇಲಾಖೆಯ ಅಧಿಕಾರಿಗಳಿಂದ ದೊರೆತ ಮಾಹಿತಿ.
5. ಎಚ್. ಆರ್. ಕೃಷ್ಣಯ್ಯ ಗೌಡ, ಕರ್ನಾಟಕ ಆರ್ಥಿಕತೆ, ಪೂರ್ವೋಕ್ತ, ಪುಟ. ೨೭.
6. ಕರ್ನಾಟಕ ರಾಜ್ಯ ತೋಟಗಾರಿಕೆ ಇಲಾಖೆಯ ಅಂಕಿ ಅಂಶಗಳು ೨೦೦೮-೦೯, ಪೂರ್ವೋಕ್ತ.
7. ರಾಷ್ಟ್ರೀಯ ತೋಟಗಾರಿಕಾ ಮಂಡಳಿ (NHB) ಅಂಕಿ ಅಂಶಗಳು ೨೦೦೮-೦೯.
8. ಮೈಸೂರು ಮಲ್ಲಿಗೆ, ಮಂಗಳೂರು ಮಲ್ಲಿಗೆ, ಶಂಕರಪುರ ಮಲ್ಲಿಗೆ, ಹಡಗಲಿ ಮಲ್ಲಿಗೆ ಹೀಗೆ ಮಲ್ಲಿಗೆಯ ಪ್ರಭೇಧದ ಹಿಂದೆ ಅದರ ತವರೂರಿನ ಹೆಸರಿದೆ.
9. ಜಾಸ್ಮಿನಮ್ ಗ್ರಾಂಡಿಫ್ಲೋರಮ್ (Jasminum Grandiflorum) ಜಾಸ್ಮಿನಮ್ ಒರಿಕ್ಯುಲೇಟಮ್ (Jasminum Auriculatum) ಮತ್ತು ಜಾಸ್ಮಿನಮ್ ಸ್ಯಾಂಬಾಕ್ (Jasminum Sambao) ಎಂಬ ಮೂರು ತಳಿಗಳಲ್ಲಿ ಮಲ್ಲಿಗೆಯನ್ನು ಸುಗಂಧ ದ್ರವ್ಯ ಉತ್ಪಾದನೆಗೆ ಬಳಸಲಾಗುತ್ತದೆ.
10. Advances in Horticulture Vil. 11 – Medicinal and Aromatic Plants Eds, K.L. Chada and Rajendra Gupta – H.C. Srivastava – P. 805.
11. ಕೆಲವೊಂದು ವಿಶೇಷ ದಿನಗಳಲ್ಲಿ ತಲಾ ೯೦೦ ಹೂಗಳ ೪ ಚೆಂಡುಗಳ (ಅಟ್ಟಿಯೊಂದರ) ಬೆಲೆ ಸಾವಿರ ರೂಪಾಯಿಗಳು.
12. ೨೦೦೮-೦೯ನೇ ಸಾಲಿನ ಕರ್ನಾಟಕ ರಾಜ್ಯದ ತೋಟಗಾರಿಕೆ ಬೆಳೆಗಳ ಜಿಲ್ಲಾವಾರು ವಿವರಗಳು, ಪೂರ್ವೋಕ್ತ.
13. ತೋಟಗಾರಿಕೆ ಇಲಾಖೆಯ ಅಂಕಿ ಅಂಶಗಳ ಪೈಪಿಡಿ ೨೦೦೧ ಲಿಂದ ೨೦೦೯.
14. ಅಂತಾರಾಷ್ಟ್ರೀಯ ಹೂವಿನ ಮಾರುಕಟ್ಟೆ ಬೆಂಗಳೂರು, ಹೂವಿನ ಕಡ್ಡಿಗಳ ಹರಾಜಿನ ಅಂಕಿ ಅಂಶ ೨೦೦೮-೦೯, ತೋಟಗಾರಿಕಾ ಇಲಾಖೆ ಬೆಂಗಳೂರು.
15. P. Thippaiah, Floriculture in Karnataka Performance, Problems and Prospects, ISEC, Bangalore, P. 37.

16. Kiran Kumar P, Jayasheela and V. Basil Hans; Commercial Floriculture in India: Opportunities for Cut Flower Development, Southern Economist, October, 2007, 8:18.
17. ಕರ್ನಾಟಕ ಕೈಗಾರಿಕಾ ಪ್ರದೇಶ ಅಭಿವೃದ್ಧಿ ಮಂಡಳಿ (KIADB)ಯ ವರದಿ ೨೦೦೭.
18. ಪುಷ್ಪೋದ್ಯಮ ಇಲಾಖೆ, ತೋಟಗಾರಿಕಾ ನಿರ್ದೇಶನಾಲಯ, ಬೆಂಗಳೂರು ೨೦೦೮.
19. APEDA Statistics 2008.
20. ತೋಟಗಾರಿಕಾ ಬೆಳೆಗಳ ಅಂಕಿ ಸಂಖ್ಯೆಗಳ ವಿಭಾಗ ತೋಟಗಾರಿಕಾ ನಿರ್ದೇಶನಾಲಯ, ಕರ್ನಾಟಕ ಸರಕಾರ.

# ಅಧ್ಯಾಯ ೪

# ಅವಿಭಜಿತ ದಕ್ಷಿಣ ಕನ್ನಡದಲ್ಲಿ ಪುಷ್ಪೋದ್ಯಮ

ಕರ್ನಾಟಕದ ಕರಾವಳಿ ಜಿಲ್ಲೆಗಳಲ್ಲಿ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಗೆ ವಿಶೇಷವಾದ ಪ್ರಸಿದ್ಧಿಯಿದೆ.[೧] ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆ ೧೯೯೭ರಲ್ಲಿ ಎರಡು ಜಿಲ್ಲೆಗಳಾಗಿ ವಿಂಗಡಣೆಗೊಂಡ ಬಳಿಕ ದಕ್ಷಿಣ ಭಾಗ ದಕ್ಷಿಣ ಕನ್ನಡ ಎಂಬ ಹೆಸರನ್ನು ಉಳಿಸಿಕೊಂಡಿತು.[೨] ಈಗಿನ ದಕ್ಷಿಣ ಕನ್ನಡ ಜಿಲ್ಲೆಯ ಪೂರ್ವ ದಿಕ್ಕಿನಲ್ಲಿ ಹಾಸನ ಮತ್ತು ಚಿಕ್ಕಮಗಳೂರು, ದಕ್ಷಿಣದಲ್ಲಿ ಕೊಡಗು ಹಾಗೂ ಕೇರಳ ರಾಜ್ಯದ ಕಾಸರಗೋಡು ಜಿಲ್ಲೆ, ಉತ್ತರದಲ್ಲಿ ಉಡುಪಿ ಜಿಲ್ಲೆ ಮತ್ತು ಪಶ್ಚಿಮದಲ್ಲಿ ಅರಬ್ಬಿ ಸಮುದ್ರವಿದೆ. ಈ ಜಿಲ್ಲೆಯ ಇತಿಹಾಸ ಅತ್ಯಂತ ರೋಚಕ ಮತ್ತು ಆಸಕ್ತಿದಾಯಕವಾದುದು. ಅಳುಪರು, ಹೊಯ್ಸಳರು, ವಿಜಯ ನಗರದ ಅರಸರು, ಕೆಳದಿ ಅರಸರು, ಹೈದರಾಲಿ ಮತ್ತು ಟಿಪ್ಪು ಸುಲ್ತಾನ ಈ ಜಿಲ್ಲೆಯನ್ನು ವಿವಿಧ ಕಾಲಘಟ್ಟಗಳಲ್ಲಿ ಆಳಿದವರು.[೩] ಕ್ರಿ.ಶ. ೧೭೯೯ರಲ್ಲಿ ಟಿಪ್ಪು ಸುಲ್ತಾನನ ಮರಣಾ ನಂತರ ಈ ಜಿಲ್ಲೆ ಬ್ರಿಟಿಷರ ಆಡಳಿತಕ್ಕೆ ಒಳಪಟ್ಟಿತು. ಸ್ವಾತಂತ್ರ್ಯ ಕಳಕೊಂಡರೂ ಬ್ರಿಟಿಷರಿಂದ ದೊರೆತ ಆಧುನಿಕ ಶಿಕ್ಷಣ ಇಲ್ಲಿನ ಜನರನ್ನು ಬುದ್ಧಿವಂತರು ಎಂದು ಕರೆಯುವಂತೆ ಮಾಡಿತು.

## ೪.೧. ದಕ್ಷಿಣ ಕನ್ನಡದ ಸಂಕ್ಷಿಪ್ತ ಇತಿಹಾಸ

೧೯ನೇ ಶತಮಾನದ ಆದಿ ಭಾಗದಲ್ಲಿ ಕರಾವಳಿ ಜಿಲ್ಲೆಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡ ಬ್ರಿಟಿಷರು ನೀಲೇಶ್ವರದಿಂದ ಕಾರವಾರದವರೆಗಿನ ಪ್ರದೇಶವನ್ನು ಕೆನರಾ ಎಂದು ಕರೆದರು. ಈ ಪ್ರದೇಶದ ಬಹುತೇಕ ಜನರು ಕನ್ನಡ ಮಾತನಾಡುತ್ತಿದ್ದು, ಇಲ್ಲಿ ಪ್ರಬಲ ವ್ಯಾಪಾರ ಸಂಬಂಧ ಹೊಂದಿದ್ದ ಪೋರ್ಚುಗೀಸರು 'ಡ' ಕಾರವನ್ನು 'ರ' ಕಾರವಾಗಿ ಬಳಸಿ ಕೆನರಾ ಎಂದು ಈ ಪ್ರದೇಶಕ್ಕೆ ಹೆಸರು ಇರಿಸಿದರೆಂದು ಗೋವಿಂದ ಪೈಗಳು ಅಭಿಪ್ರಾಯ ಪಟ್ಟಿರುತ್ತಾರೆ.[೪] ಆ ಕಾಲದಲ್ಲಿ ದಕ್ಷಿಣ ಕನ್ನಡ ಜಿಲ್ಲೆಗೆ ಖಚಿತವಾದ ಭೌಗೋಳಿಕ ಎಲ್ಲೆ ಕಟ್ಟುಗಳಿರಲಿಲ್ಲ. ಈ ಪ್ರದೇಶವನ್ನು ಆಳುತ್ತಿದ್ದ ರಾಜರು ಬದಲಾದಾಗ ಭೌಗೋಳಿಕ ಎಲ್ಲೆಕಟ್ಟುಗಳು ಕೂಡಾ ಬದಲಾಗುತ್ತಿದ್ದುವು.[೫] ಇದು ಪರಶುರಾಮ ಕೊಡಲಿ ಎಸೆದ ಪರಿಣಾಮವಾಗಿ ಹಿಂದೆ ಸರಿದ ಸಮುದ್ರದ ತಟ ಪ್ರದೇಶವೆಂಬ ಕಾರಣಕ್ಕಾಗಿ ಪರಶುರಾಮ ಸೃಷ್ಟಿಯೆಂದು ಕರೆಯಲ್ಪಡುತ್ತಿತ್ತು. ಈ ವಿಚಾರ ಕಬ್ಬಿಣ ಯುಗವನ್ನು ಸಂಕೇತಿಸುತ್ತದೆ. ಆದರೆ ಈ ಜಿಲ್ಲೆಯ ಇತಿಹಾಸವನ್ನು ನವಶಿಲಾಯುಗದ ಕಾಲಕ್ಕೆ ಒಯ್ಯಬಹುದಾದ ಪಳೆಯುಳಿಕೆಗಳು ನೇತ್ರಾವತಿ ನದಿ ತಟದಲ್ಲಿ ದೊರೆತಿರುವುದು ಉಲ್ಲೇಖನೀಯ.[೬]

ಒಂದು ಕಾಲದಲ್ಲಿ ಇದನ್ನು ಸಪ್ತಕೊಂಕಣದ ಭಾಗವಾಗಿ ಪರಿಗಣಿಸಲಾಗಿತ್ತು.[೬] ಈ ಪ್ರದೇಶವನ್ನು ಒಬ್ಬನೇ ಸ್ಥಳೀಯ ರಾಜ ಆಳಿದ ಉದಾಹರಣೆಯಿಲ್ಲ. ನವ ಶಿಲಾಯುಗದಿಂದ ಆರಂಭಿಸಿ ಇತ್ತೀಚೆಗಿನವರೆಗಿನ ವೈವಿಧ್ಯಮಯ ಇತಿಹಾಸ ಘಟನೆಗಳನ್ನು ನಮಗೆ ಪರಿಚಯಿಸುವ ಅನೇಕ ಶಿಲಾಶಾಸನಗಳು, ತಾಮ್ರಪಟಗಳು, ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ, ಮುಖ್ಯವಾಗಿ ಬಾರ್ಕೂರಿನಲ್ಲಿ ಲಭ್ಯವಾಗಿದೆ. ಅವುಗಳ ಜತೆಗೆ ಇತಿಹಾಸದ ಅವಶೇಷಗಳು, ಐತಿಹ್ಯಗಳ ಸಂಧಿ ಪಾಡ್ದನಗಳು ಜಿಲ್ಲೆಯ ಇತಿಹಾಸವನ್ನು ದಾಖಲಿಸಲು ನೆರವಾಗಿದೆ. ರಾಜಕೀಯ ಸ್ವಾಲಂಬನೆ ಸಾಧಿಸದ ಈ ಜಿಲ್ಲೆಯಲ್ಲಿ ಇಂದಿಗೂ ಜಿಲ್ಲೆಗೆ ಬೇಕಾದ ಸವಲತ್ತುಗಳನ್ನು ತಂದು ಕೊಡಬಲ್ಲ ಸಮರ್ಥ ಮುತ್ಸದ್ಧಿ ನಾಯಕನಿಲ್ಲದೆ, ಸಂಪನ್ಮೂಲವಿದ್ದರೂ ಸಾಕಷ್ಟು ಅಭಿವೃದ್ಧಿ ಸಾಧಿಸದ ಜಿಲ್ಲೆಯಾಗಿ ಉಳಿದಿದೆ.

ಈ ಜಿಲ್ಲೆ ತುಳುನಾಡು ಎಂದು ಕರೆಯಲ್ಪಡುತ್ತದೆ. ಇದಕ್ಕೆ ಇಲ್ಲಿನ ಬಹುತೇಕರು ತುಳು ಭಾಷೆಯನ್ನು ಆಡುವುದು ಕಾರಣವೆಂದು ಹೇಳಲಾಗುತ್ತದೆ. ಸಂಶೋಧನಾಕಾರರ ಪ್ರಕಾರ 'ತೂಳ್' ಎನ್ನುವುದು ಜಲ ಸಂಪನ್ಮೂಲಕ್ಕೆ ಸಂಬಂಧಪಟ್ಟ ಶಬ್ದ. ಸಮೃದ್ಧ ನೀರಿನ ಆಶ್ರಯವಿರುವ ಈ ಜಿಲ್ಲೆಗೆ ಅದೇ ಕಾರಣದಿಂದ ಈ ಹೆಸರು ಬಂದಿರುವ ಸಾಧ್ಯತೆಗಳಿವೆ.[೭] ಅಳುಪರು ಈ ಜಿಲ್ಲೆಯನ್ನು ಹದಿನಾಲ್ಕನೆಯ ಶತಮಾನದವರೆಗೆ ಕರ್ನಾಟಕದ ಇತರ ಪ್ರದೇಶಗಳ ಅರಸರ ಸಾಮಂತರಾಗಿ ಆಳಿದರು. ಕ್ರಿ.ಶ. ೧೩೩೬ ರಿಂದ ಇದು ವಿಜಯನಗರ ಸಮ್ರಾಟನ ಆಳ್ವಿಕೆಗೆ ಒಳಪಟ್ಟಿತ್ತು. ಸಾಮ್ರಾಜ್ಯದ ಪತನಾನಂತರ ವಿವಿಧ ಕಾಲಘಟ್ಟಗಳಲ್ಲಿ ಇಕ್ಕೇರಿ ಅಥವಾ ಬಿದನೂರಿನ ನಾಯಕರು ಆಡಳಿತ ನಡೆಸಿರು. ಆ ಬಳಿಕ ಹೈದಾರಾಲಿ ಮತ್ತು ಟಿಪ್ಪು ಜಿಲ್ಲೆಯನ್ನು ಆಳಿದರು. ಕ್ರಿ.ಶ. ೧೯ನೇ ಶತಮಾನದ ಆದಿ ಭಾಗದಿಂದ ೧೯೪೭ರವರೆಗೆ ಈ ಜಿಲ್ಲೆ ಬ್ರಿಟಿಷರ ಆಡಳಿತಕ್ಕೆ ಒಳಪಟ್ಟಿತು. ೧೯೫೬ರಲ್ಲಿ ಮೈಸೂರು ರಾಜ್ಯ ಉಗಮಗೊಂಡಾಗ ಅದರ ಒಂದು ಭಾಗವಾಗಿ ಹೋಯಿತು. ೧೯೯೭ರವರೆಗೆ ಇದು ವಿಶಾಲವಾದ ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯಾಗಿಯೇ ಇತ್ತು. ಜಿಲ್ಲೆಯ ಕೆಲವು ಮಂದಿ ಕಾಸರಗೋಡು, ದಕ್ಷಿಣ ಕನ್ನಡ ಮತ್ತು ಉಡುಪಿಯನ್ನು ಸೇರಿಸಿ ವಿಶಾಲ ತುಳು ರಾಜ್ಯವನ್ನು ನಿರ್ಮಿಸಬೇಕೆಂಬ ಹಂಬಲದಿಂದ ಹೊರಟರೂ ದಕ್ಷಿಣ ಕನ್ನಡ ಜಿಲ್ಲೆಯ ಬಹುತೇಕರು ಕರ್ನಾಟಕದಲ್ಲೇ ಇರಬಯಸಿದುದರಿಂದ ಕರ್ನಾಟಕ ಹಾಗೆಯೇ ಉಳಿದುಕೊಂಡಿತು.[೮]

## ೪.೨ ದಕ್ಷಿಣ ಕನ್ನಡದ ಆರ್ಥಿಕತೆ

ಈಗಿನ ದಕ್ಷಿಣ ಕನ್ನಡ ಜಿಲ್ಲೆ ಮಂಗಳೂರು, ಬಂಟ್ವಾಳ, ಸುಳ್ಯ ಪುತ್ತೂರು ಮತ್ತು ಬೆಳ್ತಂಗಡಿ ಎಂಬ ಐದು ತಾಲೂಕುಗಳನ್ನು ಒಳಗೊಂಡಿದೆ. ನೇತ್ರಾವತಿ, ಕುಮಾರಧಾರ, ಪಯಸ್ವಿನಿ, ಗುರುಪುರ ಮತ್ತು ಶಾಂಭವಿ ಈ ಜಿಲ್ಲೆಯ ಪ್ರಮುಖ ನದಿಗಳು. ದಕ್ಷಿಣ ಕನ್ನಡ ಜಿಲ್ಲೆಯ ಒಟ್ಟು ವಿಸ್ತೀರ್ಣ ೪೭೭೦ ಚದರ ಕಿ.ಮೀ[೧೦]. ಜಿಲ್ಲೆಯನ್ನು ಆಡಳಿತಾತ್ಮಕವಾಗಿ ಮಂಗಳೂರು ಮತ್ತು ಪುತ್ತೂರು ಎಂಬ ಎರಡು ಉಪ ವಿಭಾಗಗಳಾಗಿ, ೧೭ ಹೋಬಳಿಗಳಾಗಿ, ೩೫೪ ಗ್ರಾಮಗಳಾಗಿ, ೧ ಮಹಾನಗರ ಪಾಲಿಕೆ, ೪ ಪುರಸಭೆ ಹಾಗೂ ೩ ನಗರ ಪಂಚಾಯತ್‌ಗಳಾಗಿ ವಿಂಗಡಿಸಲಾಗಿದೆ. ಈ ಜಿಲ್ಲೆಯನ್ನು ಪ್ರಾಕೃತಿಕವಾಗಿ ಕರಾವಳಿ ಪ್ರದೇಶ, ಒಳನಾಡು ಪ್ರದೇಶ ಹಾಗೂ ಪಶ್ಚಿಮ ಘಟ್ಟಗಳ ಪ್ರದೇಶ ಎಂಬ ಮೂರು ವಲಯಗಳನ್ನಾಗಿ ವಿಂಗಡಿಸಿದೆ.

ಕರ್ನಾಟಕದಲ್ಲಿ ದಕ್ಷಿಣ ಕನ್ನಡದ ಸ್ಥಾನಮಾನವನ್ನು ನಕ್ಷೆ ೪.೧ ತುಲನಾತ್ಮಕ ಅಧ್ಯಯನ ಮಾಡುತ್ತದೆ. ಕರ್ನಾಟಕ ರಾಜ್ಯದ ಒಟ್ಟು ವಿಸ್ತೀರ್ಣದಲ್ಲಿ ದ.ಕ. ಜಿಲ್ಲೆಯ ಪಾಲು ಶೇಕಡಾ ೨.೩೮ ಮತ್ತು ಜನಸಂಖ್ಯೆಯಲ್ಲಿ ಇದರ ಪಾಲು ಶೇ.೦.೩೬. ೨೦೦೧-೦೨ರ ಜನಗಣತಿಯ ಪ್ರಕಾರ ದ.ಕ. ಜಿಲ್ಲೆಯ ಜನಸಂಖ್ಯೆ ೧೮.೯೭ ಲಕ್ಷ. ಇದರಲ್ಲಿ ೯.೩೮ ಲಕ್ಷ ಗಂಡಸರು ಮತ್ತು ೯.೫೯ ಲಕ್ಷ ಹೆಂಗಸರು ಕರ್ನಾಟಕದ ಜನಸಾಂದ್ರತೆ ಪ್ರತಿ ಚದರ ಕಿ.ಮೀಟರಿಗೆ ೨೭೫ ಆಗಿದ್ದು, ದಕ್ಷಿಣ ಕನ್ನಡದ ಜನಸಾಂದ್ರತೆ ಪ್ರತಿ ಚದರ ಕಿ.ಮೀ.೪೧೬. ಈ ಜಿಲ್ಲೆಯಲ್ಲಿ ಜನದಟ್ಟಣೆಯು ಅಧಿಕವಾಗಿರುತ್ತದೆ. ಜಿಲ್ಲೆಯ ಸಾಕ್ಷರತಾ ಪ್ರಮಾಣವು ಶೇ.೭೯.೭. ಇದು ಅಖಿಲ ಭಾರತ ಮತ್ತು ಕರ್ನಾಟಕದ ಸಾಕ್ಷರತಾ ಪ್ರಮಾಣಕ್ಕಿಂತ ಅಧಿಕ. ದೇಶದ ಲಿಂಗಾನುಪಾತ ೧೦೦೦ : ೯೩೩, ಕರ್ನಾಟಕದ ಲಿಂಗಾನುಪಾತ ೧೦೦೦ : ೯೬೪ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಲಿಂಗಾನುಪಾತ ೧೦೦೦ : ೧೦೨೨.[೧೦] ಇದು ಈ ಜಿಲ್ಲೆಯಲ್ಲಿ ಹೆಣ್ಣು ಭ್ರೂಣ ಹತ್ಯೆ ನಡೆದಿಲ್ಲ ಎನ್ನುವುದಕ್ಕೆ ಮತ್ತು ಇಲ್ಲಿ ಅಳಿಯಕಟ್ಟು ಪದ್ಧತಿಗೆ ಈಗಲೂ ಸಾಮಾಜಿಕ ಮನ್ನಣೆಯಿದೆ ಎನ್ನುವುದಕ್ಕೆ ಸಾಕ್ಷಿಯಾಗಿದೆ. ದಕ್ಷಿಣ ಕನ್ನಡವು ಲಾಗಾಯ್ತಿನಿಂದಲೂ ಕೃಷಿ ಪ್ರಧಾನವಾದ ಆರ್ಥಿಕತೆಯನ್ನು ಹೊಂದಿತ್ತು. ಕ್ರಿ.ಪೂ. ಯುಗದಲ್ಲಿ ಗ್ರೀಕರು, ಆ ಬಳಿಕ ಅರಬರು ಮತ್ತು ಪೋರ್ಚುಗೀಸರು ಈ ಜಿಲ್ಲೆಗೆ ನಾವೆಗಳಲ್ಲಿ ಬರಲು ಇಲ್ಲಿ ದೊರೆಯುತ್ತಿದ್ದ ಸಮೃದ್ಧ ಅಕ್ಕಿ ಕಾರಣವಾಗಿತ್ತು.[೧೧] ಆಗ ಒಳನಾಡ ಸಾರಿಗೆ ವ್ಯವಸ್ಥೆ ಇರಲಿಲ್ಲ. ಆದರೆ ಜಲಸಾರಿಗೆಗೆ ಯಾವ ಆತಂಕಗಳೂ ಇದ್ದಂತೆ ಕಾಣಿಸುವುದಿಲ್ಲ. ಬರಡು ಬೆಂಗಾಡಿನ ಅರಬ ವರ್ತಕರು ಕುದುರೆಗಳನ್ನು ತಂದು ದ.ಕ.ದಲ್ಲಿ ಮಾರಾಟ ಮಾಡಿ ಇಲ್ಲಿಂದ ಅಕ್ಕಿ ಹೇರಿಕೊಂಡು ಅರಬಸ್ತಾನದಲ್ಲಿ ಮಾರಾಟ ಮಾಡಿ ಯಥೇಚ್ಛ

ಲಾಭಗಳಿಸುತ್ತಿದ್ದರು. ವ್ಯಾಪಾರದಲ್ಲಿ ಅಕ್ಕಿಯ ಬಳಿಕಿನ ಸ್ಥಾನಗಳನ್ನು ಅಡಿಕೆ, ಯಾಲಕ್ಕಿ, ಕರಿಮೆಣಸು, ಕಾಫಿ - ಇತ್ಯಾದಿಗಳು ಪಡಕೊಂಡಿದ್ದವು.[೧೨]

ಬ್ರಿಟಿಷರು ಈ ಜಿಲ್ಲೆಯ ಆಡಳಿತ ಚುಕ್ಕಾಣಿ ಹಿಡಿದುಕೊಂಡ ಮೇಲೆ ಒಂದು ಖಚಿತವಾದ ಕಂದಾಯ ವ್ಯವಸ್ಥೆ ರೂಪುಗೊಂಡಿತು. ಜಿಲ್ಲೆಯ ಮೊದಲ ಜಿಲ್ಲಾಧಿಕಾರಿ ಮನ್ರೋ ಇಲ್ಲಿ ರೈತವಾರಿ ವ್ಯವಸ್ಥೆಯನ್ನು ಜಾರಿಗೊಳಿಸಿ ಶಾಶ್ವತ ಕಂದಾಯ ವ್ಯವಸ್ಥೆಯನ್ನು ರೂಪಗೊಳಿಸಲು ಯತ್ನಿಸಿದ.[೧೩] ಆದರೆ ಅದು ಅವನಿಂದ ಸಾಧ್ಯವಾಗದೆ ಹೋಯಿತು. ಕ್ರಿಶ.೧೮೧೧ ರಲ್ಲಿ ಒಮ್ಮೆ ೧೮೩೦ರಲ್ಲಿ ಇನ್ನೊಮ್ಮೆ ಮತ್ತು ಕ್ರಿ.ಶ. ೧೮೩೭ರಲ್ಲಿ ಮತ್ತೊಮ್ಮೆ ಜಿಲ್ಲೆಯ ರೈತರು ವಸಾಹತು ಶಾಹಿ ಆಡಳಿತ ವ್ಯವಸ್ಥೆಯ ವಿರುದ್ಧ ಬಂಡೆದ್ದರು. ಕ್ರಿ.ಶ.೧೮೩೭ರ ರೈತದಂಗೆ ಬ್ರಿಟಿಷರ ಶೋಷಕ ಆರ್ಥಿಕ ನೀತಿಯ ವಿರುದ್ಧದ ಪ್ರಬಲ ಪ್ರತಿಭಟನೆಯಾಗಿತ್ತು.[೧೪] ಆದರೆ ಯಾವ ಬಂಡಾಯವೂ ಫಲಪ್ರದವಾಗಲಿಲ್ಲ. ಕಾಲಕ್ರಮೇಣ ಈ ಜಿಲ್ಲೆಯ ಜನರು ವಸಾಹತುಶಾಹಿಯ ವಾಸ್ತವವನ್ನು ಒಪ್ಪಿಕೊಂಡರು.

**೪.೨.೧. ದಕ್ಷಿಣ ಕನ್ನಡದ ಬೆಳೆಗಳು:** ಬ್ರಿಟಿಷರಿಂದ ವಿಮುಕ್ತಿ ದೊರೆತ ಬಳಿಕವೂ ಈ ಜಿಲ್ಲೆಯ ಕೃಷಿ ಪ್ರಾಧಾನ್ಯತೆ ಕಡಿಮೆಯಾಗಲಿಲ್ಲ. ಆದರೆ ಬೆಳೆಯ ಚಿತ್ರಣ ಬದಲಾಯಿತು. (ಕೋಷ್ಟಕ ೪.೧) ಕೋಷ್ಟಕ ೪.೧.ರ ಪ್ರಕಾರ ದ.ಕ.ದಲ್ಲಿ ಭತ್ತ ಅತ್ಯಧಿಕ ಪ್ರದೇಶದಲ್ಲಿ ಬೆಳೆಯಲಾಗುತ್ತದೆ. ಎಲ್ಲಾ ಬೆಳೆಗಳ ನಿವ್ವಳ ವಿಸ್ತೀರ್ಣದಲ್ಲಿ ಭತ್ತದ ಬೆಳೆಯ ಪಾಲು ಶೇ.೪೨.೯ ಆದರೆ ವಾಣಿಜ್ಯ ಬೆಳೆಗಳ ಪಾಲು ಶೇ.೫೭.೧ ರಷ್ಟು ವಾಣಿಜ್ಯ ಬೆಳೆಗಳು ಆಹಾರ ಬೆಳೆಗಳಿಗಿಂತ ಮಹತ್ವ ಪಡೆದಿರುವುದನ್ನು ಇಲ್ಲಿ ಗಮನಿಸಬಹುದು.

ಸರಕಾರವೇ ಒದಗಿಸಿರುವ ಈ ಅಂಕಿ ಅಂಶ ೨೦೦೮-೦೯ ರದ್ದು ಎಂದು ನಮೂದಿಸಲಾಗಿದ್ದರೂ ಇದರ ವಿಶ್ವಾಸಾರ್ಹತೆಯ ಬಗ್ಗೆ ಒಂದಷ್ಟು ಗೊಂದಲಗಳಿವೆ. ವಾಸ್ತವವಾಗಿ ಜಿಲ್ಲೆಯ ಎಲ್ಲಾ ತಾಲೂಕುಗಳಲ್ಲಿ ಭತ್ತದ ಕೃಷಿ ವರ್ಷದಿಂದ ವರ್ಷಕ್ಕೆ ಕಡಿಮೆಯಾಗುತ್ತಾ ಬರುತ್ತಿದೆ. ಭತ್ತದ ಕೃಷಿಗೆ ತಗಲುವ ಉತ್ಪಾದನಾ ವೆಚ್ಚದ ಏರಿಕೆ, ಕೃಷಿ ಕಾರ್ಮಿಕರ ಅಲಭ್ಯತೆ ಕೆರೆ-ಕಾಲುವೆ ನೀರಾವರಿ ಇಲ್ಲದಿರುವುದು ಇದಕ್ಕೆ ಬಹುಮುಖ್ಯ ಕಾರಣ. ದ.ಕ.ದಲ್ಲಿ ೭೦೬ ಹೆಕ್ಟೇರು ಭೂಮಿಗೆ ನೀರಾವರಿ ಸವಲತ್ತು ಇದೆ. ಇದರಲ್ಲಿ ೪೦೩೩೦

ಕೋಷ್ಟಕ ೪.೧.

## ದ.ಕ.ದ ಪ್ರಮುಖ ಬೆಳೆಗಳು

| ಬೆಳೆಗಳು | ಬೆಳೆಯುವ ಪ್ರದೇಶ | ನಿವ್ವಳ ವಿಸ್ತೀರ್ಣದಲ್ಲಿ ಪಾಲು ಶೇ. |
|---|---|---|
| ಭತ್ತ | ೫೫೯೪೫ | ೪೨.೯೦ |
| ಗೇರು | ೨೦೪೯೮ | ೧೫.೭೨ |
| ಅಡಿಕೆ | ೨೭೫೩೨ | ೨೧.೧೧ |
| ತೆಂಗು | ೧೬೧೨೨ | ೧೨.೩೭ |
| ರಬ್ಬರ್ | ೧೦೩೦೨ | ೭.೦೯% |
| ಎಲ್ಲಾ ಬೆಳೆಗಳ ನಿವ್ವಳ ವಿಸ್ತೀರ್ಣ | ೧೩೦೪೯ | ೧೦೦ |

**ಆಧಾರ: ದ.ಕ. ಜಿಲ್ಲೆಯ ಅಂಕಿ ಅಂಶಗಳ ನೋಟ ೨೦೦೮-೦೯ ಪುಟ ೧೧.**

ಹೆಕ್ಟೇರಿಗೆ ಬಾವಿ, ೯೬೮೬ ಹೆಕ್ಟೇರಿಗೆ ಕೊಳವೆ ಬಾವಿ, ೨೨೫೭ ಹೆಕ್ಟೇರಿಗೆ ಏತ ನೀರಾವರಿ ಸವಲತ್ತಿದೆ. ೧೮೩೭ ಹೆಕ್ಟೇರು ಭೂಮಿಗೆ ಇತರ ಜಲಮೂಲಗಳು ನೀರುಣಿಸುತ್ತವೆ. ಜಿಲ್ಲೆಯಲ್ಲಿ ಕಾಲುವೆ ಮತ್ತು ಕೆರೆ ನೀರಾವರಿ ವ್ಯವಸ್ಥೆ ಇರುವುದಿಲ್ಲ. ಹಾಗಾಗಿ ರೈತರು ಅನಿವಾರ್ಯವಾಗಿ ಅಡಿಕೆ ಮತ್ತು ರಬ್ಬರು ಕೃಷಿಯ ಮೊರೆ ಹೋಗುತ್ತಿದ್ದಾರೆ. ರಬ್ಬರ್ ಕೃಷಿ ಅತ್ಯಧಿಕ ಲಾಭದಾಯಕವಾದುದರಿಂದ ಮತ್ತು ಅದರ ನಿರ್ವಹಣೆ ತುಂಬಾ ಸುಲಭವಾದುದರಿಂದ ರಬ್ಬರ್ ಬೆಳೆಯುವ ಕೃಷಿಕರ ಸಂಖ್ಯೆ ಅಧಿಕವಾಗಿದೆ. ಇದರ ಪರಿಣಾಮವನ್ನು ಅಂತರ್ಜಲ ಮಟ್ಟ ಕುಸಿತದಲ್ಲಿ ಕಾಣಬಹುದು. ೨೦೦೩-೦೪ರಲ್ಲಿ ೬.೬ಮೀಟರ್ ಆಳದಲ್ಲಿ ಜಲ ಲಭ್ಯವಾಗುತ್ತಿತ್ತು. ೨೦೦೮-೦೯ರಲ್ಲಿ ಅಂತರ್ಜಲ ಮಟ್ಟ ೮.೬೭ ಮೀಟರುಗಳಿಗೆ ಇಳಿದಿರುವುದು ಮುನ್ನೆಚ್ಚರಿಕೆಯ ಕರೆಗಂಟೆಯಾಗಿದೆ.

ಕ್ರಿ.ಶ.೧೯೭೧ ರಿಂದ ಭತ್ತದ ಮಹತ್ವ ಕಡಿಮೆಯಾಗುತ್ತಾ ಬಂದು ವಾಣಿಜ್ಯ ಬೆಳೆಗಳು ಅದರ ಸ್ಥಾನವನ್ನು ಆಕ್ರಮಿಸಿಕೊಂಡಿವೆ. ೨೧ನೇ ಶತಮಾನದಲ್ಲಿ ಕೃಷಿಯೇ ಕುಸಿದು ಬೀಳುವುದರಲ್ಲಿದೆ. ಬೇಡವೆಂದರೂ ಜಿಲ್ಲೆಯ ಮೇಲೆ ಹೇರಲಾದ ವಿಶೇಷ ಆರ್ಥಿಕ ವಲಯ (Special Economic Zone) ಯೋಜನೆಯಿಂದಾಗಿ ರೈತರು ಕೃಷಿ ಭೂಮಿ ಕಳಕೊಳ್ಳುತ್ತಿದ್ದಾರೆ. ಬಂಟ್ವಾಳದಿಂದ ಮಂಗಳೂರುವರೆಗಿನ ಕೃಷಿ ಭೂಮಿ ನಗರೀಕರಣ

ಪ್ರಕ್ರಿಯೆಗೆ ಒಳಗಾಗುವುದನ್ನು ಅಭಿವೃದ್ಧಿಪರರು ಆತಂಕದಿಂದ ಗಮನಿಸುತ್ತಿದ್ದಾರೆ. ನಗರೀಕರಣದೊಂದಿಗೆ ಸಾಮಾಜಿಕ ಜೀವನ ಅಪರಾಧೀಕರಣಗೊಳ್ಳುತ್ತಿರುವುದು ಕೃಷಿವಲಯಕ್ಕೆ ಆತಂಕದ ವಿದ್ಯಮಾನವಾಗಿದೆ.

**೪.೨.೨. ದಕ್ಷಿಣ ಕನ್ನಡದ ಭೂಮಿಯ ಬಳಕೆ:** ದ.ಕ. ಜಿಲ್ಲೆಯಲ್ಲಿ ಭೂಮಿಯ ಬಳಕೆಯನ್ನು ಚಿತ್ರ ೪.೧ ತೋರಿಸುತ್ತದೆ. ದ.ಕ. ಜಿಲ್ಲೆಯ ಒಟ್ಟು ಭೂಪ್ರದೇಶ ೪೭೭೧೪೯ ಚದರ ಕಿ.ಮೀ. ಇದರಲ್ಲಿ ಕೃಷಿಗೆ ಬಳಕೆಯಾಗುತ್ತಿರುವುದು ಕೇವಲ ಶೇ.೨೭ ಮಾತ್ರ ಸರಕಾರದ ಅಂಕಿ ಅಂಶಗಳ ಪ್ರಕಾರ ಶೇ.೨೮ ರಷ್ಟು ಭೂಪ್ರದೇಶ ಅರಣ್ಯಮಯವಾಗಿದೆ.[೧೫] ಶೇ.೧೪ರಷ್ಟು ಭೂಮಿ ಕೃಷಿಯೇತರ ಉಪಯೋಗಗಳಿಗೆ ಬಳಕೆಯಾಗುತ್ತಿದೆ. ಶೇ.೧೨ ರಷ್ಟು ಬಂಜರು ಭೂಮಿಯಾಗಿದ್ದು ಉಳಿದ ಭೂಮಿಯಲ್ಲಿ ಗೋಮಾಳ ನೆಡುತೋಪು ಇತ್ಯಾದಿಗಳಿವೆ. ಕೃಷಿಯೋಗ್ಯ ಆದರೆ ಕೃಷಿಯಾಗದ ಭೂಮಿಯ ಪ್ರಮಾಣ ಶೇ.೬ರಷ್ಟು. ಜಿಲ್ಲೆಯ ಭೂಬಳಕೆಯ ವಿಶ್ಲೇಷಣೆ ಎರಡು ಮಹತ್ತರ ವಿಷಯಗಳನ್ನು ತಿಳಿಯಪಡಿಸುತ್ತದೆ. ಜಿಲ್ಲೆಯ ಒಟ್ಟು ಭೂಪ್ರದೇಶದಲ್ಲಿ ಕೃಷಿಯಾಗುತ್ತಿರುವುದು ಕೇವಲ ಕಾಲು ಭಾಗದಲ್ಲಿ ಮಾತ್ರ. ಶೇ.೧೨ರಷ್ಟಿರುವ ಬಂಜರು ಭೂಮಿಯನ್ನು ಕೃಷಿ ಭೂಮಿಯನ್ನಾಗಿ ಪರಿವರ್ತಿಸಲು ಸಾಧ್ಯವೇ ಎಂಬುದರ ಪರಿಶೀಲನೆಯಾಗಬೇಕು. ಕೃಷಿಯೋಗ್ಯವಾದರೂ ಕೃಷಿಗೆ ಬಳಕೆಯಾಗದಿರುವ ಶೇ.೬ರಷ್ಟು ಭೂಪ್ರದೇಶವನ್ನು ಭೂರಹಿತರಿಗೆ ಕೃಷಿಗಾಗಿ, ಮುಖ್ಯವಾಗಿ ಮಲ್ಲಿಗೆ ಬೆಳೆಗಾಗಿ ಹಂಚಬೇಕು.




ಚಿತ್ರ ೪.೧ ದ.ಕ.ದಲ್ಲಿ ಭೂಮಿಯ ಬಳಕೆ

ಪರಿಸರವಾದಿಗಳ ಪ್ರಕಾರ ಒಂದು ಭೂಪ್ರದೇಶದ ಶೇ.೩೩ ರಷ್ಟು ಭಾಗ ಅರಣ್ಯಮಯವಾಗಿರಬೇಕು. ಜಿಲ್ಲೆಯಲ್ಲಿ ಶೇ.೨೮ ರಷ್ಟು ಭೂಪ್ರದೇಶ ಅರಣ್ಯಮಯವಾಗಿದೆ. ಪಾಳು ಬಿದ್ದಿರುವ ಶೇ.೨ ರಷ್ಟು ಭೂಪ್ರದೇಶದಲ್ಲಿ ಅರಣ್ಯ ಬೆಳೆಯುವ ಕಾರ್ಯವಾಗಬೇಕು. ಬಂಜರು ಭೂಮಿಯಲ್ಲೂ ಅರಣ್ಯ ಬೆಳೆಸಲು ಸಾಧ್ಯವಿದೆ. ಪಾಳು ಬಿದ್ದರುವ ಭೂಮಿಯು ಕೃಷಿಯೋಗ್ಯವೆಂದಾದರೆ ಅಲ್ಲಿ ಮಲ್ಲಿಗೆ ಬೆಳೆಯ ಸಾಧ್ಯತೆಯನ್ನು ವೈಜ್ಞಾನಿಕವಾಗಿ ಪರಿಶೀಲಿಸಬಹುದು.

**೪.೨. ೩.ವೃತ್ತಿಯ ವಿವರಣೆ:** ದಕ್ಷಿಣ ಕನ್ನಡ ಜಿಲ್ಲೆಯ ಒಟ್ಟು ಜನಸಂಖ್ಯೆ ೧೮೯೭೭೩೦ ರಲ್ಲಿ ಪೂರ್ಣ ಕೆಲಸಗಾರರ ಪ್ರಮಾಣ ೪೪.೪ ಶೇಕಡಾ ಮಾತ್ರ. ಅರೆ ಕೆಲಸಗಾರರ ಪ್ರಮಾಣ ಶೇ.೫.೫. ಕೆಲಸಗಾರರಲ್ಲದವರ ಪ್ರಮಾಣ ಒಟ್ಟು ಜನಸಂಖ್ಯೆಯ ಅರ್ಧಾಂಶಕ್ಕಿಂತಲೂ ಅಧಿಕ (ಶೇ ೫೦.೧)ಎನ್ನುವುದು ಆತಂಕಕಾರಿ ವಿಷಯ. ಈ ಸಂಖ್ಯೆಯಲ್ಲಿ ದುಡಿಯಲಾಗದ ಮಕ್ಕಳು, ವೃದ್ಧರು ಮಾತ್ರವಲ್ಲದೆ ದುಡಿಯಲು ಮನಸ್ಸಿರುವ ನಿರುದ್ಯೋಗಿಗಳು ಮತ್ತು ದುಡಿಯಲು ಮನಸ್ಸಿಲ್ಲದ ನಿರುದ್ಯೋಗಿಗಳು ಸೇರಿದ್ದಾರೆ. ಇವರಲ್ಲಿ ಕೊನೆಯ ವರ್ಗಕ್ಕೆ ಸೇರಿದವರು ತೀರಾ ಅಪಾಯಕಾರಿಗಳು. ರಾಜಕೀಯ ಪಕ್ಷಗಳಲ್ಲಿ ಮತ್ತು ಕೋಮು ಸಂಘಟನೆಗಳಲ್ಲಿ ಸಕ್ರಿಯರಾಗಿರುವ ಈ ಅವಕಾಶವಾದಿಗಳು ಅಭಿವೃದ್ಧಿಗೆ ಅಡ್ಡಿಯಾಗಿದ್ದಾರೆ ಎನ್ನುವುದು ತೀರಾ ಆತಂಕದ ವಿಷಯ. ಈ ಮಾತು ಉಡುಪಿ ಜಿಲ್ಲೆಗೂ ಅನ್ವಯಿಸುತ್ತದೆ. ಈ ಗುಂಪನ್ನು ಅಭಿವೃದ್ಧಿಗೆ ಬಳಸುವುದರಲ್ಲಿ ಎರಡೂ ಜಿಲ್ಲೆಗಳ ಹಿತ ಅಡಗಿದೆ. ಜಿಲ್ಲೆಯಲ್ಲಿರುವ ಕೃಷಿಕರ ಪ್ರಮಾಣ ಕೇವಲ ಶೇ. ೫.೨೫. ಕೃಷಿ ಕಾರ್ಮಿಕರ ಪ್ರಮಾಣವೂ ಗಣನೀಯವಾಗಿ ಕುಸಿದಿದ್ದು, ಕೇವಲ ಶೇ.೪.೫ ಕ್ಕೆ ಇಳಿದಿದೆ. ಗೇರು ಮತ್ತು ಬೀಡಿ, ಉದ್ದಿಮೆಗಳಿಗೆ ಕೃಷಿ ಕಾರ್ಮಿಕರು ವರ್ಗಾವಣೆಗೊಂಡಿರುವುದು ಇದಕ್ಕೆ ಕಾರಣ. ಗೃಹ ಕೈಗಾರಿಕೆಯಲ್ಲಿ ಶೇ.೨೧.೧೬ ರಷ್ಟು ಮಂದಿ ತಮ್ಮ ಬದುಕನ್ನು ಕಂಡುಕೊಂಡಿದ್ದಾರೆ. ಶೇ.೬೯.೦೯ ರಷ್ಟು ಕೆಲಸಗಾರರು ಆನುಷಂಗಿಕ ಮತ್ತು ತೃತೀಯ ವಲಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ಕೋಷ್ಟಕ ೪.೨. ದ.ಕ. ಜಿಲ್ಲೆಯಲ್ಲಿ ವೃತ್ತಿಯ ವಿತರಣೆಯನ್ನು ತೋರಿಸುತ್ತದೆ.

## ಕೋಷ್ಟಕ ೪.೨

### ದಕ್ಷಿಣ ಕನ್ನಡ ಜಿಲ್ಲೆಯ ವೃತ್ತಿಯ ವಿತರಣೆ ೨೦೦೮-೦೯

| ವೃತ್ತಿಗಳು | ಗಂಡು | ಹೆಣ್ಣು | ಒಟ್ಟು | ಶೇಕಡಾ |
|---|---|---|---|---|
| ಕೃಷಿಕರು | ೩೪೩೧೦ | ೧೪೩೭೪ | ೪೯೬೮೪ | ೫.೨೫ |
| ಕೃಷಿ ಕಾರ್ಮಿಕರು | ೨೮೦೪೬ | ೧೪೫೨೦ | ೪೨೫೬೬ | ೪.೪೯ |
| ಗೃಹ ಕೈಗಾರಿಕೆ | ೧೫೯೮೫ | ೧೮೪೨೬೨ | ೨೦೦೨೪೭ | ೨೧.೧೬ |
| ಇತರ | ೪೬೭೦೬೩ | ೧೮೬೮೩೦ | ೬೫೩೮೯೩ | ೬೯.೦೯ |
| ಒಟ್ಟು | ೫೪೬೪೦೪ | ೩೯೯೯೮೬ | ೯೪೬೩೯೦ | ೧೦೦.೦೦ |
| ಮುಖ್ಯ ಕೆಲಸಗಾರರು | – | – | ೮೪೧೫೦೯ | ೪೪.೪೦ |
| ಅರೆ ಕೆಲಸಗಾರರು | – | – | ೧೦೪೮೮೧ | ೦೫.೫೦ |
| ಕೆಲಸಗಾರರಲ್ಲದ್ದು | – | – | ೯೫೧೩೪೦ | ೦೫.೧೦ |
| ಒಟ್ಟು ಜನಸಂಖ್ಯೆ | – | – | ೧೮೯೭೭೩೦ | ೧೦೦.೦೦ |

**ಆಧಾರ: ದ.ಕ. ಜಿಲ್ಲೆ ಅಂಕಿ ಅಂಶಗಳು ೨೦೦೮-೦೯ ಪುಟ ೧೫.**

ಮಲ್ಲಿಗೆಯ ಕೃಷಿಗೆ ಜಿಲ್ಲೆಯಲ್ಲಿ ಪೂರಕ ವಾತಾವರಣ ಸೃಷ್ಟಿಯಾಗುವುದಕ್ಕೆ ವೃತ್ತಿ ವಿತರಣೆಯಲ್ಲಿ ಕೆಲವು ಬದಲಾವಣೆಗಳಾಗಬೇಕಾಗಿದೆ. ಗೃಹ ಕೈಗಾರಿಕೆಗಳಲ್ಲಿ ತೊಡಗಿಸಿಕೊಂಡಿರುವವರನ್ನು ಮತ್ತು ತೃತೀಯ ವಲಯದಲ್ಲಿ ದಲ್ಲಾಳಿ ಕೆಲಸ ಮಾಡುವವರನ್ನು ಕೃಷಿ ವಲಯಕ್ಕೆ ತರಲು ಸಾಂಘಿಕ ಯತ್ನಗಳಾಗಬೇಕಿದೆ. ದ.ಕ.ದಲ್ಲಿ ಕೃಷಿ ತನ್ನ ಮಹತ್ವವನ್ನು ಕಳಕೊಳ್ಳುವುದರೊಂದಿಗೆ ಅನೇಕ ಆರ್ಥಿಕ ಮತ್ತು ಸಾಂಸ್ಕೃತಿಕ ಪಲ್ಲಟಗಳಾಗಿವೆ. ಜನರನ್ನು ಮತ್ತೆ ಭತ್ತದ ಕೃಷಿಯತ್ತ ಮತ್ತು ಹೊಸದಾಗಿ ಮಲ್ಲಿಗೆ ಕೃಷಿಯತ್ತ ಆಕರ್ಷಿಸುವಂತೆ ಮಾಡಲು ಸರಕಾರವು ತಜ್ಞರ ನೆರವಿನಿಂದ ಮಾರ್ಗೋಪಾಯಗಳನ್ನು ಕಂಡುಕೊಳ್ಳಬೇಕಿದೆ.

**೪.೨.೪: ದಕ್ಷಿಣ ಕನ್ನಡದ ಆದಾಯ ಮೂಲಗಳು:** ದ.ಕ. ಜಿಲ್ಲೆಯಲ್ಲಿ ಪ್ರಮುಖ ಆದಾಯ ಮೂಲಗಳ ವಿಶ್ಲೇಷಣೆಯಿಂದ ಜಿಲ್ಲೆಯ ಆರ್ಥಿಕತೆಯ ಸ್ಪಷ್ಟ ಚಿತ್ರಣ ಲಭ್ಯವಾಗುತ್ತದೆ.




**ಚಿತ್ರ ೪.೨ ಜಿಲ್ಲೆಯ ಆದಾಯದಲ್ಲಿ ವಿವಿಧ ಮೂಲಗಳ ಪಾಲು**

ಸ್ಥಿರ ಬೆಲೆಯಲ್ಲಿ ಒಟ್ಟು ಆದಾಯದಲ್ಲಿ ವಿವಿಧ ಮೂಲಗಳ ಪಾಲನ್ನು ವಿಶ್ಲೇಷಿಸುವಾಗ ಕೆಲವು ಆಸಕ್ತಿದಾಯಕ ವಿವರಗಳು ದೊರೆಯುತ್ತವೆ. ಚಿತ್ರ ೪.೨ ದ.ಕ. ಜಿಲ್ಲೆಯ ಒಟ್ಟು ಆದಾಯದಲ್ಲಿ ಅತ್ಯಧಿಕ ಆದಾಯ ಬರುತ್ತಿರುವುದು ಹೋಟೆಲು ಉದ್ದಿಮೆಯಿಂದ. ಒಟ್ಟು ಆದಾಯದಲ್ಲಿ ಅದರ ಪಾಲು ಶೇ.೨೦.೮೩ರಷ್ಟು. ಕೃಷಿಯನ್ನು ದೇಶದ ಬೆನ್ನೆಲುಬು ಎಂದು ಕರೆಯಲಾಗುತ್ತದೆ. ಆದರೆ ಜಿಲ್ಲೆಯ ಮಟ್ಟಿಗೆ ಈ ಮಾತು ಒಪ್ಪಿತವಲ್ಲ. ಏಕೆಂದರೆ ಕೃಷಿ ಮತ್ತು ಪಶು ಸಂಗೋಪನೆ ಜಿಲ್ಲೆಯ ಒಟ್ಟು ಆದಾಯಕ್ಕೆ ನೀಡುವ ದೇಣಿಗೆ ಕೇವಲ ಶೇ.೧೩.೫೩ರಷ್ಟು ಮಾತ್ರ. ಮೀನುಗಾರಿಕೆಯನ್ನು ಒಳಗೊಂಡಂತೆ ಜಿಲ್ಲೆಯ ಆದಾಯಕ್ಕೆ ಪ್ರಾಥಮಿಕ ವಲಯದ ದೇಣಿಗೆ ಕೇವಲ ಶೇ.೧೫.೬೪. ಜಿಲ್ಲೆಯಲ್ಲಿ ಕೈಗಾರಿಕೆಗಳಿಗೆ ವಿಶೇಷ ಪ್ರಾಶಸ್ತ್ಯವಿಲ್ಲದ್ದುದರಿಂದ ಅನುಷಂಗಿಕ ವಲಯ ಹೆಚ್ಚಿನ ಮಹತ್ವ ಪಡೆದಿಲ್ಲ. ಆದರೆ ಸೇವಾ ಕ್ಷೇತ್ರ ವಿಪುಲವಾಗಿ ವಿಸ್ತರಣೆಗೊಂಡಿದೆ. ಹೋಟೇಲು ಉದ್ದಿಮೆ, ಸಾರಿಗೆ, ಮೂಲ ಸವಲತ್ತು ಪೂರೈಕೆಗಳು, ಜಿಲ್ಲೆಯ ಒಟ್ಟು ಆದಾಯದಲ್ಲಿ ಗಣನೀಯವಾದ ಪಾಲನ್ನು ಪಡೆದಿವೆ. ಸ್ಥಿರಾಸ್ತಿ ಮತ್ತು ನಿರ್ಮಾಣ ಕಾರ್ಯಗಳು ಒಟ್ಟಾಗಿ ಶೇ.೧೩.೧೬ರಷ್ಟು ದೇಣಿಗೆಯನ್ನು ಒಟ್ಟು ಆದಾಯಕ್ಕೆ ನೀಡುತ್ತಿವೆ. ಸ್ಥಿರ ಬೆಲೆಗಳಲ್ಲಿ ಜಿಲ್ಲೆಯ ತಲಾದಾಯ ರೂ.೩೬,೪೯೪ ಮತ್ತು ಚಾಲ್ತಿ ಬೆಲೆಗಳಲ್ಲಿ ರೂ.೪೨,೩೩೮. ಭಾರತದ ತಲಾದಾಯವಾದ ರೂ.೨೭,೮೫೧ ಮತ್ತು ರೂ.೩೮,೪೧೬ಕ್ಕಿಂತ ದ.ಕ.ದ ತಲಾದಾಯ ಎಷ್ಟೋ ಅಧಿಕವೆನ್ನುವುದು ಜಿಲ್ಲೆಯ ಸಮೃದ್ಧಿಗೆ ಸಾಕ್ಷಿಯಾಗಿದೆ.

## ಕೋಷ್ಟಕ ೪.೩

## ದ.ಕ. ಜಿಲ್ಲೆಯ ಆದಾಯ ಮೂಲಗಳು

| ಮೂಲ | ಸ್ಥಿರ ಬೆಲೆಯಲ್ಲಿ ಆದಾಯ | ಚಾಲ್ತಿ ಬೆಲೆಯಲ್ಲಿ ಆದಾಯ |
|---|---|---|
| ವ್ಯಾಪಾರ, ವಸತಿ, ಉಪಾಹಾರ | ೧೫೦೯೮೯ (೨೦.೮೨%) | ೧೮೧೯೫೯ |
| ಕೃಷಿ, ಪಶು ಸಂಗೋಪನೆ | ೯೮೧೨೯ (೧೩.೫೩%) | ೮೫೩೯೫ |
| ಬ್ಯಾಂಕ್ ಮತ್ತು ವಿಮೆ | ೫೬೮೬೫ (೭.೮೪%) | ೬೬೬೨೩ |
| ಸಾಲಿಗೆ | ೪೫೫೩೨ (೬.೨೮%) | ೬೩೪೩೯ |
| ನಿರ್ಮಾಣ ಕಾರ್ಯ | ೫೨೯೪೩ (೭.೩೦%) | ೬೧೩೨೮ |
| ಸ್ಥಿರಾಸ್ತಿ | ೪೨೫೨೪ (೫.೮೬%) | ೫೫೦೮೯ |
| ಇತರ ಸೇವೆ | ೪೧೨೩೨ (೫.೬೮%) | ೪೮೭೦೪ |
| ಸಾರ್ವಜನಿಕ ಆಡಳಿತ | ೧೮೪೬೧ (೨.೫೪%) | ೨೨೨೬೬ |
| ಮೀನುಗಾರಿಕೆ | ೧೫೪೧೪ (೨.೧೨%) | ೨೦೯೩೯ |
| ವಿದ್ಯುತ್, ಅನಿಲ, ನೀರು ಪೂರೈಕೆ | ೮೬೪೭ (೧.೧೯%) | ೧೦೭೭೮ |
| ಇತರ ಮೂಲಗಳು | ೧೯೪೨೫೭ (೨೬.೭೯%) | ೨೮೫೮೮೯ |
| ಒಟ್ಟು | ೭೨೪೯೯೩ (೧೦೦%) | ೮೪೧೦೮೧ |

ಮೂಲ: ದ.ಕ. ಜಿಲ್ಲೆಯ ಅಂಕಿ ಅಂಶಗಳ ನೋಟ ೨೦೦೮-೦೯.ಪುಟ ೧೯.

ಜಿಲ್ಲೆಯಲ್ಲಿ ಕೃಷಿ ವಲಯದ ಮಹತ್ವ ಕುಗ್ಗುತ್ತಿರುವುದು ಈವರೆಗಿನ ಎಲ್ಲಾ ವಿಶ್ಲೇಷಣೆಗಳಿಂದ ತಿಳಿದು ಬರುತ್ತದೆ. ಹೋಟೇಲು ಮತ್ತು ಬ್ಯಾಂಕಿಂಗ್ ಉದ್ದಿಮೆಗೆ ಈ ಜಿಲ್ಲೆ ಬಹಳ ಹಿಂದಿನಿಂದಲೂ ಪ್ರಸಿದ್ಧಿ ಪಡೆದಿದೆ. ಆದರೆ ಅಕ್ಕಿ, ತರಕಾಲಿ, ಹಣ್ಣು ಹಂಪಲುಗಳನ್ನು ಆಶ್ರಯಿಸಬೇಕಾಗಿ ಬಂದಿರುವುದು ಕೃಷಿಗೆ ಜನರು ಮಹತ್ವ ನೀಡುತ್ತಿಲ್ಲವೆಂಬುದಕ್ಕೆ ದೃಷ್ಟಾಂತವಾಗಿ ಬಿಟ್ಟಿದೆ. ಅಕ್ಕಿ, ತರಕಾರಿ, ಹಣ್ಣು ಹಂಪಲುಗಳ ಬೆಲೆಗಳು ಗಗನಕ್ಕೇರುತ್ತಿದ್ದರೂ ಜನರು ಸೇವಾ ಕ್ಷೇತ್ರಕ್ಕೆ ಮುಗಿ ಬೀಳುತ್ತಿರುವುದು ವಿಸ್ಮಯಕಾರಿ ವಿದ್ಯಮಾನವಾಗಿದೆ. ಕೃಷಿ ಕ್ಷೇತ್ರಕ್ಕೆ ಮಹತ್ವ ಮತ್ತೆ ಲಭ್ಯವಾದರೆ, ಮಲ್ಲಿಗೆ ಕೃಷಿಯ ಲಾಭದಾಯಕತೆ ಜನರಿಗೆ ಅರ್ಥವಾದರೆ ಈ ಪರಿಸ್ಥಿತಿ ಬದಲಾಗಿ ಜನರ ಆದಾಯ ಹೆಚ್ಚಾಗಲಿದೆ.

**೪.೨.೫: ದ.ಕ.ದ ಹಿಡುವಳಿಗಳು:** ಮಲ್ಲಿಗೆ ಕೃಷಿಯ ಲಾಭದಾಯಕತೆಯನ್ನು ದ.ಕ. ಜಿಲ್ಲೆಯ ಭೂ ಹಿಡುವಳಿಗಳ ವಿಸ್ತೀರ್ಣ ಮತ್ತು ಸಂಖ್ಯೆಗಳ ಮೂಲಕ ಮನದಟ್ಟು ಮಾಡಲು ಇಲ್ಲಿ ಯತ್ನಿಸಲಾಗಿದೆ (ಕೋಷ್ಟಕ ೪.೪.)

ಕೋಷ್ಟಕ ೪.೪

**ದ.ಕ.ದಲ್ಲಿ ಭೂ ಹಿಡುವಳಿಗಳು ಮತ್ತು ವಿಸ್ತೀರ್ಣ**

| ಪ್ರಕಾರ | ಮಾನದಂಡ | ಸಂಖ್ಯೆ | ವಿಸ್ತೀರ್ಣ (ಹೆಕ್ಟೇರ್) |
|---|---|---|---|
| ಅತೀ ಸಣ್ಣ ಹಿಡುವಳಿ | ೧ ಹೆಕ್ಟೇರಿಗಿಂತ ಕಡಿಮೆ | ೧೫೫೫೨೮ | ೫೭೪೮೨ |
| ಸಣ್ಣ ಹಿಡುವಳಿ | ೧ ಲಿಂದ ೨ ಹೆಕ್ಟೇರು | ೩೭೫೨೩ | ೫೨೦೩೬ |
| ಅರೆ ಮಧ್ಯಮ ಹಿಡುವಳಿ | ೨ ಲಿಂದ ೪ ಹೆಕ್ಟೇರು | ೧೫೫೮೭ | ೩೯೩೪೩ |
| ಮಧ್ಯಮ ಹಿಡುವಳಿ | ೪ ಲಿಂದ ೧೦ ಹೆಕ್ಟೇರು | ೪೯೮೮ | ೨೮೧೧೮ |
| ದೊಡ್ಡ ಹಿಡುವಳಿ | ೧೦ ಕ್ಕಿಂತ ಹೆಚ್ಚು | ೬೭೮ | ೧೬೨೦೬ |
| **ಒಟ್ಟು** | - | **೨೧೩೩೦೪** | **೧೯೩೧೮೫** |

ಆಧಾರ: ದ.ಕ. ಜಿಲ್ಲೆಯ ಅಂಕಿ ಅಂಶಗಳ ನೋಟ ೨೦೦೮–೦೯ ಪುಟ ೧೮.

ದ.ಕ. ಜಿಲ್ಲೆಯ ಹಿಡುವಳಿದಾರರಲ್ಲಿ ಶೇ. ೭೨.೯ ಅತೀ ಸಣ್ಣ ಮತ್ತು ೭.೫೯% ಸಣ್ಣ ಹಿಡುವಳಿದಾರರು ಅರೆಮಧ್ಯಮ, ಮಧ್ಯಮ ಮತ್ತು ದೊಡ್ಡ ಹಿಡುವಳಿದಾರರ ಪ್ರಮಾಣ ತೀರಾ ನಗಣ್ಯವಾಗಿದೆ. ದ.ಕ. ಜಿಲ್ಲೆಯ ಹಿಡುವಳಿದಾರರ ಪ್ರಮಾಣ ಮತ್ತು ಅವರು ಹೊಂದಿರುವ ಭೂಮಿಯ ಪ್ರಮಾಣವನ್ನು ಚಿತ್ರ ೪.೩ ಮತ್ತು ೪.೪. ತೋರಿಸುತ್ತವೆ.



**ಚಿತ್ರ ೪.೩ ಹಿಡುವಳಿಯ ಪ್ರಮಾಣ**

ಅತೀ ಸಣ್ಣ ಹಿಡುವಳಿದಾರರ ಪ್ರಮಾಣ ಶೇ. ೭೩ ರಷ್ಟಿದ್ದರೂ ಅವರು ಹೊಂದಿರುವ ಭೂಮಿಯ ಪ್ರಮಾಣ ಶೇ.೩೦ ರಷ್ಟು ಮಾತ್ರ. ಕೇವಲ ಶೇ.೯ ರಷ್ಟಿರುವ ಅರೆಮಧ್ಯಮ ಮತ್ತು ದೊಡ್ಡ ಹಿಡುವಳಿದಾರರು ಶೇ.೨೪ ರಷ್ಟು ಭೂಮಿಯನ್ನು ಹೊಂದಿದ್ದಾರೆ. ಭಾರತದ ಎಲ್ಲಾ ಜಿಲ್ಲೆಗಳಲ್ಲಿರುವಂತೆ ಇಲ್ಲಿಯೂ ಭೂ ಛಿದ್ರೀಕರಣ ನಡೆದಿದೆ. ಅದರ ವ್ಯತಿರಿಕ್ತ  ಪರಿಣಾಮ ಬಡ ರೈತರ ಮೇಲಾಗಿದೆ ಎಂಬುದಕ್ಕೆ ಈ ಅಂಕಿ ಅಂಶಗಳು ದೃಷ್ಟಾಂತ. ಖಾಸಗಿ ಮತ್ತು ಪಿತ್ರಾರ್ಜಿತ ಆಸ್ತಿಯ ಹಕ್ಕು, ಭೂಮಿಯ ಮೇಲಣ ಅಪಾರ ಮೋಹ ಮತ್ತು ಭೂಮಿಗೆ ಹೆಚ್ಚುತ್ತಿರುವ ಮೌಲ್ಯ ಈ ರೀತಿಯ ವಿಭಜನೆಗೆ ಮತ್ತು ತುಂಡು ಹಿಡುವಳಿಗಳ ಸಂಖ್ಯೆಯ ಆಧಿಕ್ಯಕ್ಕೆ ಕಾರಣವಾಗಿದೆ.

ದ.ಕ. ದಲ್ಲಿರುವ ಅತೀ ಸಣ್ಣ ಮತ್ತು ಸಣ್ಣ ಹಿಡುವಳಿಗಳ ಒಟ್ಟು ಸಂಖ್ಯೆ ೧೯೩೦೫೧. ಒಟ್ಟು ಹಿಡುವಳಿಗಳಲ್ಲಿ ಇವೆರಡರ ಪಾಲು ಶೇ.೯೦.೫ ರಷ್ಟು ಎನ್ನುವುದು ಗಮನಾರ್ಹವಾದ ವಿಷಯವಾಗಿದೆ. ಇವೆರಡು ವರ್ಗಗಳು ಹೊಂದಿರುವ ಭೂಮಿಯ ಪ್ರಮಾಣ ೧೧೯೫೧೮



**ಚಿತ್ರ ೪.೪ ಹಿಡುವಳಿಯ ವಿಸ್ತೀರ್ಣ**

ಹೆಕ್ಟೇರುಗಳು. ಒಟ್ಟು ಭೂಮಿಯ ಪ್ರಮಾಣದಲ್ಲಿ ಇವೆರಡು ವರ್ಗಗಳ ದೇಣಿಗೆ ಶೇ.೫೬.೭. ಈ ಹಿಡುವಳಿದಾರರ ಆದಾಯ ಸಹಜವಾಗಿ ತೀರಾ ಕಡಿಮೆ. ಕಾಲಕ್ರಮೇಣ ಸಣ್ಣ ಹಿಡುವಳಿದಾರರು ಭೂ ವಿಭಜನೆಯಿಂದಾಗಿ ಅತಿ ಸಣ್ಣ ಹಿಡುವಳಿದಾರರಾಗುವ ಸಂಭವ ಇದ್ದೇ ಇದೆ. ಆಗ ಕುಟುಂಬ ನಿರ್ವಹಣೆ ಬಹು ದೊಡ್ಡ ಸಮಸ್ಯೆಯಾಗಲಿದೆ. ಬುದ್ಧಿವಂತರ ಜಿಲ್ಲೆಗಳೆಂದು ಖ್ಯಾತಿ ಹೊಂದಿರುವ ದ.ಕ. ಮತ್ತು ಉಡುಪಿ ಜಿಲ್ಲೆಗಳು ಕೋಮುವಾದ, ವಾಮಾಚಾರ, ಅಪರಾಧ, ಏಡ್ಸ್ ಇತ್ಯಾದಿಗಳ ಪ್ರಸರಣದಲ್ಲಿ ಇತ್ತೀಚೆಗೆ ಮುಂಚೂಣಿಯಲ್ಲಿದೆ. ಕೋಮುವಾದ ಮತ್ತು ಅಪರಾಧ ಪ್ರಕರಣಗಳಲ್ಲಿ ಭಾಗಿಯಾಗುತ್ತಿರುವವರ ಹಿನ್ನೆಲೆ ಪರಿಶೀಲಿಸಿದಾಗ ಇವರಲ್ಲಿ ಬಹುತೇಕವಾಗಿ ಬಡತನದ ಹಿನ್ನೆಲೆಯಿಂದ ಬಂದವರು ಎನ್ನುವುದು ಸ್ಪಷ್ಟವಾಗುತ್ತದೆ.[೧೬] ಸ್ವಸ್ಥ ಸಮಾಜ ನಿರ್ಮಾಣವಾಗಬೇಕಾದರೆ ದುಡಿಯುವ ಕೈಗಳಿಗೆ ಕೆಲಸ ಸಿಗಬೇಕು. ದುಡಿಯಲಿಕ್ಕೆ ಭೂಮಿ ದೊರೆಯಬೇಕು; ದುಡಿಮೆಗೆ ತಕ್ಕ ಪ್ರತಿಫಲ ಬರಬೇಕು. ಮಲ್ಲಿಗೆಯ ಕೃಷಿಯನ್ನು ಸಣ್ಣ ಮತ್ತು ಅತಿ ಸಣ್ಣ ರೈತರು ಕೈಗೊಂಡರೆ, ಅವರ ಆದಾಯ ಮತ್ತು ತನ್ಮೂಲಕ ಅವರ ಜೀವನ ಮಟ್ಟ ವೃದ್ಧಿಯಾಗುತ್ತದೆ. ಕೋಮುವಾದ ಮತ್ತು ಅಪರಾಧೀಕರಣ ಪ್ರಕ್ರಿಯೆಗೆ ಅಷ್ಟರ ಮಟ್ಟಿಗೆ ತಡೆ ಬೀಳುತ್ತದೆ. ಈ ಮಾತು ಎರಡೂ ಜಿಲ್ಲೆಗಳಿಗೆ ಅನ್ವಯವಾಗುತ್ತದೆ.

## ೪.೩. ದ.ಕ.ದಲ್ಲಿ ಪುಷ್ಪ ಬೆಳೆ:

ದಕ್ಷಿಣ ಕನ್ನಡದ ಆರ್ಥಿಕತೆಯಲ್ಲಿ ಪುಷ್ಪ ನಿಧಾನವಾಗಿ ತನ್ನ ಮಹತ್ವವನ್ನು ಹೆಚ್ಚಿಸಿಕೊಳ್ಳುತ್ತಿದೆ. ದ.ಕ. ಜಿಲ್ಲೆಯ ಪುಷ್ಪ ಬೆಳೆ ಪ್ರದೇಶ ಉತ್ಪಾದನೆ ಮತ್ತು ಮೌಲ್ಯದ ವಿವರಗಳು ಹೀಗಿವೆ.

## ಕೋಷ್ಟಕ ೪.೫

### ದ.ಕ. ಜಿಲ್ಲೆಯ ಪುಷ್ಪ ಬೆಳೆ ಪ್ರದೇಶ, ಉತ್ಪಾದನೆ ಮತ್ತು ಮೌಲ್ಯ (೨೦೦೮-೦೯)

| ತಾಲೂಕು | ವಿಸ್ತೀರ್ಣ | ಉತ್ಪನ್ನ | ಇಳುವರಿ | ಮೌಲ್ಯ |
|---|---|---|---|---|
| ಮಂಗಳೂರು | ೮ | ೪೩ | ೫.೩೮ | ೨೮೪ |
| ಬಂಟ್ವಾಳ | ೪೬ | ೨೨೬ | ೪.೯೧ | ೧೨೦೧ |
| ಪುತ್ತೂರು | ೧೨ | ೭೨ | ೬.೦೦ | ೪೩೨ |
| ಸುಳ್ಯ | ೩ | ೨೨ | ೭.೩೩ | ೧೪೫ |
| ಬೆಳ್ತಂಗಡಿ | ೪೧ | ೨೬೭ | ೬.೫೧ | ೧೩೦೧ |
| ಒಟ್ಟು | ೧೧೦ | ೬೩೦ | ೬.೦೨ | ೩೩೬೩ |

ಆಧಾರ : ತೋಟಗಾರಿಕೆ ಬೆಳೆಗಳ ಅಂಕಿ ಅಂಶ, ೨೦೦೮-೦೯, ರಾಜ್ಯ ತೋಟಗಾರಿಕಾ ಇಲಾಖೆ. ಪುಟ ೨೨.

ದ.ಕ. ಜಿಲ್ಲೆಯಲ್ಲಿ ಬಂಟ್ವಾಳ ಮತ್ತು ಬೆಳ್ತಂಗಡಿ ಅತ್ಯಧಿಕ ಪುಷ್ಪ ಬೆಳೆಯುವ ಪ್ರದೇಶಗಳಾಗಿವೆ. ಜಿಲ್ಲೆಯ ಪುಷ್ಪ ಬೆಳೆ ಪ್ರದೇಶಗಳ ತಾಲೂಕುವಾರು ವಿತರಣೆಯನ್ನು ಚಿತ್ರ೪.೫ ತೋರಿಸುತ್ತದೆ. ಒಟ್ಟು ಪುಷ್ಪ ಪ್ರದೇಶದಲ್ಲಿ ಬಂಟ್ವಾಳದ ಪಾಲು ಶೇ.೪೧.೮% ಮತ್ತು ಬೆಳ್ತಂಗಡಿ ತಾಲೂಕಿನ ಪಾಲು ಶೇ.೩೭.೨೭%, ಪುತ್ತೂರು ಶೇ.೧೦.೯ ಮತ್ತು ಮಂಗಳೂರು ತಾಲೂಕು ಶೇ.೭.೨೭ ರಷ್ಟು ಪಾಲನ್ನು ಹೊಂದಿದೆ. ಸುಳ್ಯ ಶೇ.೨.೭೨ರ ಪಾಲಿನೊಡನೆ ಕೊನೆಯ ಸ್ಥಾನವನ್ನು ಅಲಂಕರಿಸಿದೆ.




ಚಿತ್ರ ೪.೫ ತಾಲೂಕುವಾರು ಪುಷ್ಪ ಪ್ರದೇಶ

ಆದರೆ ತಲಾ ಹೆಕ್ಟೇರು ಇಳುವರಿಯನ್ನು ಪರಿಶೀಲಿಸಿದರೆ ನಮಗೆ ಭಿನ್ನ ಚಿತ್ರಣ ಲಭ್ಯವಾಗುತ್ತದೆ. ಬಂಟ್ವಾಳ ತಾಲೂಕಿನಲ್ಲಿ ತಲಾ ಹೆಕ್ಟೇರು ಇಳುವರಿ ೪.೯೧ ಮಾತ್ರ ಮಂಗಳೂರು ತಾಲೂಕಿನಲ್ಲಿ ೫.೩೮, ಪುತ್ತೂರು ತಾಲೂಕಿನಲ್ಲಿ ೬.೦೦, ಬೆಳ್ತಂಗಡಿ ತಾಲೂಕಿನಲ್ಲಿ ೬.೫೧ ಮತ್ತು ಸುಳ್ಯ ತಾಲೂಕಿನಲ್ಲಿ ೭.೩೩ ಆಗಿರುತ್ತದೆ. ಅತ್ಯಂತ ಕಡಿಮೆ ಭೂಪ್ರದೇಶವನ್ನು ಪುಷ್ಪ ಬೆಳೆಗೆ ಮೀಸಲಿಟ್ಟಿರುವ ಸುಳ್ಯ ತಾಲೂಕಿನಲ್ಲಿ ತಲಾ ಹೆಕ್ಟೇರು ಇಳುವರಿ ಅತ್ಯಂತ ಅಧಿಕವಿರುವುದು ಈ ತಾಲೂಕಿನಲ್ಲಿ ಪುಷ್ಪ ಬೆಳೆಗೆ ಭವ್ಯ ಭವಿಷ್ಯವಿದೆಯೆನ್ನುವುದಕ್ಕೆ ಸೂಚನೆಯಾಗಿದೆ. ರಬ್ಬರು ಮತ್ತು ಅಡಿಕೆ ಬೆಳೆಗೆ ಬಹಳ ಮಹತ್ವ ನೀಡಿ ಅಂತರ್ಜಲ ಮಟ್ಟ ಕುಗ್ಗಿಸಿಕೊಂಡು ಚಿಕನ್‌ಗುನ್ಯಾ, ಇಲಿ ಜ್ವರ, ಹಂದಿ ಜ್ವರ, ಮಲೇರಿಯಾಗಳ ಆವಾಸ ಸ್ಥಾನವಾಗಿರುವ ಸುಳ್ಯ ತಾಲೂಕು ಪುಷ್ಪೋದ್ಯಮ ದತ್ತ ಹೊರಳಿದರೆ ತನ್ನ ಹಿಂದುಳಿದ ತಾಲೂಕು, ಎಂಬ ಹಣೆ ಪಟ್ಟಿಯನ್ನು ಕಳಚಿಕೊಳ್ಳಲು ಸಾಧ್ಯವಿದೆ. ತಾಲೂಕಿನ ಆರ್ಥಿಕತೆಗೆ ಹೊಸ ಆಯಾಮವೂ ದೊರೆತಂತಾಗುತ್ತದೆ.

ದ.ಕ. ಜಿಲ್ಲೆಯ ಪುಷ್ಪ ಉತ್ಪನ್ನ ವಿಶ್ಲೇಷಣೆಗೆ ಚಿತ್ರ ೪.೬ ನೆರವಾಗುತ್ತದೆ.




**ಚಿತ್ರ ೪.೬ ಪುಷ್ಪ ಉತ್ಪಾದನೆ**

ದ.ಕ. ಜಿಲ್ಲೆಯಲ್ಲಿ ಅತ್ಯಧಿಕ ಪುಷ್ಪ ಬೆಳೆಯಾಗುವುದು ಬೆಳ್ತಂಗಡಿ ತಾಲೂಕಿನಲ್ಲಿ. ಜಿಲ್ಲೆಯ ಒಟ್ಟು ಪುಷ್ಪ ಉತ್ಪಾದನೆಯಲ್ಲಿ ಈ ತಾಲೂಕಿನ ಪಾಲು ಶೇ.೪೨.೩೮. ಆ ಬಳಿಕಿನ ಸ್ಥಾನವನ್ನು ಶೇ.೩೫.೮೭ರ ಪಾಲಿನೊಡನೆ ಬಂಟ್ವಾಳ ತಾಲೂಕು ಅಲಂಕರಿಸುತ್ತದೆ. ಜಿಲ್ಲೆಯ ಒಟ್ಟು ಪುಷ್ಪ ಬೆಳೆಯಲ್ಲಿ ಇವೆರಡು ತಾಲೂಕುಗಳದ್ದು ಸಿಂಹಪಾಲು. ಇವುಗಳ ಬಳಿಕಿನ ಸ್ಥಾನವನ್ನು ಅನುಕ್ರಮವಾಗಿ ಪುತ್ತೂರು (ಶೇ.೧೧.೪೨), ಮಂಗಳೂರು (ಶೇ.೬.೮೨) ಮತ್ತು ಸುಳ್ಯ ತಾಲೂಕುಗಳು (ಶೇ.೩.೪೯) ಅಲಂಕರಿಸುತ್ತವೆ. ಬಂಟ್ವಾಳ ತಾಲೂಕು ಪುಷ್ಪ ಬೆಳೆಯ ಅತ್ಯಧಿಕ ಪ್ರದೇಶವನ್ನು ಹೊಂದಿದ್ದರೂ, ಉತ್ಪಾದನೆಯಲ್ಲಿ ಬೆಳ್ತಂಗಡಿ ತಾಲೂಕು ಅದನ್ನು ಹಿಂದಿಕ್ಕಿದೆ. ಬೆಳ್ತಂಗಡಿ ತಾಲೂಕಿನದ್ದೇ ಹವಾಮಾನ ಹೊಂದಿರುವ ಸುಳ್ಯದಲ್ಲಿ

ಪುಷ್ಪೋದ್ಯಮವನ್ನು ಜನರು ನೆಚ್ಚಿಕೊಂಡಿಲ್ಲ. ರಬ್ಬರ್ ಬೆಳೆಯ ಲಾಭದಾಯಕತೆ ಇದಕ್ಕೆ ಪ್ರಮುಖ ಕಾರಣವಾಗಿದೆ.

ಚಿತ್ರ ೪.೭ ದ.ಕ. ಜಿಲ್ಲಾ ಪುಷ್ಪ ಮೌಲ್ಯ ವಿಶ್ಲೇಷಣೆಯನ್ನು ಮಾಡುತ್ತದೆ.




**ಚಿತ್ರ ೪.೭ ಉತ್ಪಾದನೆಯ ಮೌಲ್ಯ**

ಪುಷ್ಪ ಮಾರಾಟದಿಂದ ಬರುವ ಆದಾಯವು (Y) ಉತ್ಪಾದನೆಯನ್ನು (O) ಅವಲಂಬಿಸಿಕೊಂಡಿರುತ್ತದೆ. Y=f (O) ಪುಷ್ಪ ಉತ್ಪಾದನೆ ಅತ್ಯಧಿಕವಾಗಿರುವ ಬೆಳ್ತಂಗಡಿ ತಾಲೂಕು ಪುಷ್ಪ ಮಾರಾಟದಿಂದ ಜಿಲ್ಲೆ ಗಳಿಸುವ ಒಟ್ಟು ಆದಾಯದಲ್ಲಿ ಶೇ.೩೮.೬೮ ರಷ್ಟು ಪಾಲನ್ನು ಪಡೆಯುತ್ತದೆ. ಆ ಬಳಿಕಿನ ಸ್ಥಾನವನ್ನು ಅನುಕ್ರಮವಾಗಿ ಬಂಟ್ವಾಳ ತಾಲೂಕು (ಶೆ.೩೫.೭೧), ಪುತ್ತೂರು ತಾಲೂಕು (ಶೇ. ೧೨.೮೪), ಮಂಗಳೂರು ತಾಲೂಕು (ಶೇ.೮.೪೪) ಮತ್ತು ಸುಳ್ಯ ತಾಲೂಕು (ಶೇ.೪.೩೧ ಪಡೆಯುತ್ತವೆ. ಬೆಳ್ತಂಗಡಿ ಮತ್ತು ಬಂಟ್ವಾಳ ತಾಲೂಕುಗಳನ್ನು ಆದರ್ಶವಾಗಿ ಸ್ವೀಕರಿಸಲು ಉಳಿದ ಮೂರು ತಾಲೂಕುಗಳು ಸಿದ್ಧಗೊಂಡರೆ ದ.ಕ. ಜಿಲ್ಲೆಯಲ್ಲಿ ಪುಷ್ಪೋದ್ಯಮ ಇನ್ನಷ್ಟು ಮಹತ್ವವನ್ನು ಪಡಕೊಳ್ಳಲಿದೆ.

ಕಳೆದ ಹತ್ತು ವರ್ಷಗಳಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಪುಷ್ಪ ಬೆಳೆಯ ಪ್ರಗತಿಯನ್ನು ಕೋಷ್ಟಕ ೪.೬ ವಿಶದೀಕರಿಸುತ್ತದೆ.

ಕೋಷ್ಟಕ ೪.೬.

## ದಕ್ಷಿಣ ಕನ್ನಡ ಜಿಲ್ಲೆಯ ದಶಮಾನದ ಪುಷ್ಪ ಬೆಳೆಯುವ ಪ್ರದೇಶ ಮತ್ತು ಉತ್ಪಾದನೆಯ ವಿವರ

| ವರ್ಷ | ವಿಸ್ತೀರ್ಣ | ಉತ್ಪನ್ನ |
|---|---|---|
| ೧೯೯೯ - ೨೦೦೦ | ೦.೧೮ | ೧.೩೨ |
| ೨೦೦೦ – ೨೦೦೧ | ೦.೧೮ | ೧.೩೭ |
| ೨೦೦೧ – ೨೦೦೨ | ೦.೧೮ | ೧.೪೨ |
| ೨೦೦೨ – ೨೦೦೩ | ೦.೧೮ | ೧.೪೭ |
| ೨೦೦೩ – ೨೦೦೪ | ೦.೧೮ | ೧.೪೪ |
| ೨೦೦೪ – ೨೦೦೫ | ೦.೨೦ | ೧.೫೦ |
| ೨೦೦೫ – ೨೦೦೬ | ೦.೨೧ | ೧.೬೮ |
| ೨೦೦೬ – ೨೦೦೭ | ೦.೨೩ | ೧.೯೨ |
| ೨೦೦೭ – ೨೦೦೮ | ೦.೨೫ | ೧.೯೬ |
| ೨೦೦೮ – ೨೦೦೯ | ೦.೨೭ | ೧.೯೮ |

ಆಧಾರ: ತೋಟಗಾರಿಕಾ ಅಂಕಿ ಅಂಶಗಳು, ದ.ಕ.ಜಿಲ್ಲಾ ತೋಟಗಾರಿಕಾ ವಿಭಾಗ ೨೦೦೮–೦೯ ಪುಟ ೧೪

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಪುಷ್ಪ ಉತ್ಪಾದನೆಗೆ ಬಳಕೆಯಾಗುವ ಪ್ರದೇಶದಲ್ಲಿ ನಿಧಾನವಾದ ಏರಿಕೆಯಾಗುತ್ತಿರುವುದು ಚಿತ್ರ ೪.೮ ತೋರಿಸುತ್ತದೆ.

FL ಪುಷ್ಪ ಬೆಳೆಯುವ ಪ್ರದೇಶದ ವಿಸ್ತೀರ್ಣವಾಗಿದ್ದು, ಆರಂಭದ ಐದು ವರ್ಷಗಳಲ್ಲಿ ಅಂದರೆ ೧೯೯೯ ರಿಂದ ೨೦೦೪ರವರೆಗೆ ಅದು ಸ್ಥಿರ ದರದಲ್ಲಿ ಮುಂದುವರಿದುದನ್ನು ಕಾಣಬಹುದು ೨೦೦೫ ರಿಂದ ಪುಷ್ಪ ಬೆಳೆಯುವ ಪ್ರದೇಶದಲ್ಲಿ ನಿಧಾನಗತಿಯಲ್ಲಿ ಏರಿಕೆಯಾಗುತ್ತಿದ್ದು, ಮುಂದಿನ ವರ್ಷಗಳಲ್ಲಿ ಅದು ಇನ್ನಷ್ಟು ಹೆಚ್ಚಾಗಬಹುದೆಂದು ಅಂದಾಜಿಸಬಹುದು.




ಚಿತ್ರ ೪.೮ ಪುಷ್ಪ ಉತ್ಪಾದನಾ ಪ್ರದೇಶದ ವಿಸ್ತೀರ್ಣ

ಪುಷ್ಪ ಬೆಳೆಯುವ ಪ್ರದೇಶದಲ್ಲಿ ಹೆಚ್ಚಳವಾಗುತ್ತಿದ್ದರೂ ಪುಷ್ಪ ಉತ್ಪಾದನೆಯಲ್ಲಿ ಏರಿಳಿತಗಳಿರುವುದನ್ನು ಗಮನಿಸಬಹುದು (ಚಿತ್ರ ೪.೮.)




ಚಿತ್ರ ೪.೯ ದ.ಕ.ದಲ್ಲಿ ಪುಷ್ಪ ಉತ್ಪಾದನೆ

PL ಪುಷ್ಪ ಉತ್ಪಾದನಾ ರೇಖೆಯಾಗಿದ್ದು, ಆರಂಭದ ಐದು ವರ್ಷಗಳಲ್ಲಿ ಉತ್ಪಾದನೆಯಲ್ಲಿ ಏರಿಳಿತಗಳಾದ್ದುದನ್ನು ಗಮನಿಸಬಹುದು ೨೦೦೫ ರಿಂದ ಪುಷ್ಪ ಉತ್ಪಾದನೆ ಹೆಚ್ಚಾಗುತ್ತಾ ಹೋಗುತ್ತಿದೆ. ಮುಂದಿನ ವರ್ಷಗಳಲ್ಲಿ ಉತ್ಪಾದನೆ ಇನ್ನಷ್ಟು ಹೆಚ್ಚುವ ಸಂಭವವಿದೆ. ಅದಕ್ಕೆ ಈಗ ಸ್ವಸಹಾಯ ಗುಂಪುಗಳು ಮಲ್ಲಿಗೆ ಬೆಳೆಗೆ ಮನಸ್ಸು ಮಾಡಿರುವುದು ಪ್ರಧಾನ ಕಾರಣವಾಗಿರುತ್ತದೆ.

## ೪.೪. ದ.ಕ.ದ ಪುಷ್ಪ ವೈವಿಧ್ಯ

ದ.ಕ. ಜಿಲ್ಲೆಯಲ್ಲಿ ವಾಣಿಜ್ಯ ಬೆಳೆಯಾಗಿ ಬೆಳೆಯುತ್ತಿರುವ ಸಾಂಪ್ರದಾಯಿಕ ಹೂಗಳು-ಕನಕಾಂಬರ, ಸೇವಂತಿಗೆ, ಗುಲಾಬಿ ಮತ್ತು ಮಲ್ಲಿಗೆ. ದ.ಕ.ದಲ್ಲಿ ಕನಕಾಂಬರ ಒಂದು ವಾಣಿಜ್ಯ ಬೆಳೆಯಾದರೂ ಮಂಗಳೂರು ಮತ್ತು ಸುಳ್ಯ ತಾಲೂಕುಗಳಲ್ಲಿ ಕನಕಾಂಬರ ಒಂದು ಪ್ರಮುಖ ಬೆಳೆಯಲ್ಲ. ಜಿಲ್ಲೆಯಲ್ಲಿ ಕನಕಾಂಬರದ ಉತ್ಪಾದನೆಯನ್ನು ಕೋಷ್ಟಕ ೪.೯. ತೋರಿಸುತ್ತದೆ.

**ಕೋಷ್ಟಕ ೪.೭.**

**ದ.ಕ.ದಲ್ಲಿ ಕನಕಾಂಬರ ಬೆಳೆ**

| ತಾಲೂಕು | ೨೦೦೩-೦೪ | ೨೦೦೪-೦೫ | ೨೦೦೫-೦೬ | ೨೦೦೬-೦೭ | ೨೦೦೭-೦೮ | ೨೦೦೮-೦೯ |
|---|---|---|---|---|---|---|
| ಬಂಟ್ವಾಳ | ೧೮ | ೨೦ | ೪೮ | ೬.೫ | - | ೪೪ |
| ಪುತ್ತೂರು | ೦೫ | ೦೬ | - | - | - | ೧೫ |
| ಬೆಳ್ತಂಗಡಿ | ೦೮ | ೧೦ | ೨೫ | ೩೯ | ೦೮ | ೧೧ |
| ಒಟ್ಟು | ೩೧ | ೩೬ | ೭೩ | ೪೫.೫ | ೦೮ | ೭೦ |

ಆಧಾರ: ತೋಟಗಾರಿಕಾ ಇಲಾಖೆ ದ.ಕ. ಜಿಲ್ಲಾ ಅಂಕಿ ಅಂಶ ೨೦೦೮-೦೯ ಪುಟ ೧೯.

ಜಿಲ್ಲೆಯ ಕನಕಾಂಬರ ಬೆಳೆಯಲ್ಲಿ ವಿಪರೀತ ಏರಿಳಿತಗಳಿರುವುದನ್ನು ಗಮನಿಸಬಹುದು. ಎರಡು ತಾಲೂಕುಗಳಲ್ಲಿ ಕನಕಾಂಬರ ಬೆಳೆಯುತ್ತಲೇ ಇಲ್ಲ. ಕನಕಾಂಬರ ಬೆಳೆಯುತ್ತಿರುವ ತಾಲೂಕುಗಳಲ್ಲಿ ಬೆಳೆಯಲ್ಲಿ ತೀರಾ ಅಸ್ಥಿರತೆಯಿದೆ. ಕನಕಾಂಬರಕ್ಕೆ ದ.ಕ. ಜಿಲ್ಲೆಯಲ್ಲಿ ಹೇಳಿಕೊಳ್ಳುವಂತಹ ಮಾರುಕಟ್ಟೆಯಿಲ್ಲ. ಇಲ್ಲಿನ ಕೆಲವು ರೈತರು ಹಿತ್ತಲುಗಳಲ್ಲಿ ಕನಕಾಂಬರ ಗಿಡವನ್ನು ಅನೌಪಚಾರಿಕವಾಗಿ ಬೆಳೆಸುತ್ತಾರೆಯೇ

ಹೊರತು ಅದನ್ನೊಂದು ವಾಣಿಜ್ಯ ಬೆಳೆಯಾಗಿ ಸ್ವೀಕರಿಸಿಲ್ಲ. ಕನಕಾಂಬರವನ್ನೇ ಪ್ರತ್ಯೇಕವಾಗಿ ಮತ್ತು ವೈಜ್ಞಾನಿಕವಾಗಿ ಬೆಳೆಸುವ ಪದ್ಧತಿ ರೂಢಿಯಾಗಿಲ್ಲ. ಇತಿಹಾಸ ಚೆನ್ನಾಗಿಲ್ಲದ ಕನಕಾಂಬರ ಬೆಳೆಗೆ ದ.ಕ. ಜಿಲ್ಲೆಯಲ್ಲಿ ಯಾವುದೇ ಭವಿಷ್ಯ ಇರುವಂತೆ ಕಾಣುವುದಿಲ್ಲ.

ಕನಕಾಂಬರದ ಬಗ್ಗೆ ಯಾವ ತೀರ್ಮಾನಕ್ಕೆ ಬರಲಾಗಿದೆಯೋ ಅದನ್ನು ಸೇವಂತಿಗೆ ಬೆಳೆಗೂ ಅನ್ವಯಿಸಬಹುದು. ದ.ಕ. ಜಿಲ್ಲೆಯಲ್ಲಿ ಸದ್ಯ ಸೇವಂತಿಗೆ ಬೆಳೆಯುತ್ತಿರುವುದು ಬೆಳ್ತಂಗಡಿ ತಾಲೂಕಲ್ಲಿ ಮಾತ್ರ. ಪರಿಗಣನೆಯ ಐದು ವರ್ಷಗಳಲ್ಲಿ ೨೦೦೩-೦೪ ಮತ್ತು ೨೦೦೪-೦೫ರಲ್ಲಿ ಪುತ್ತೂರು ತಾಲೂಕಲ್ಲಿ ಸೇವಂತಿಗೆ ಬೆಳೆಯಲಾಗುತ್ತಿತ್ತು. ಈಗ ಮಂಗಳೂರು, ಬಂಟ್ವಾಳ, ಪುತ್ತೂರು ಮತ್ತು ಸುಳ್ಯ ತಾಲೂಕುಗಳಲ್ಲಿ ಸೇವಂತಿಗೆ ಬೆಳೆಯಲಾಗುತ್ತಿಲ್ಲ. ಬೆಳ್ತಂಗಡಿಯೊಂದೇ ಸೇವಂತಿಗೆ ಬೆಳೆಯುತ್ತಿರುವ ತಾಲೂಕು. ಅಲ್ಲಿನ ಸೇವಂತಿಗೆ ಉತ್ಪಾದನೆಯ ಪ್ರವೃತ್ತಿಯನ್ನು ಚಿತ್ರ ೪.೮ ತೋರಿಸುತ್ತದೆ.




**ಚಿತ್ರ ೪.೧೦ ದ.ಕ.ದಲ್ಲಿ ಸೇವಂತಿಗೆ ಬೆಳೆ**

TL ಪ್ರವೃತ್ತಿ ರೇಖೆಯಲ್ಲಿ (Trend Line) ಅಸಾಧಾರಣ ಏರಿಳಿತಗಳಿರುವುದನ್ನು ಗಮನಿಸಬಹುದು. ಸೇವಂತಿಗೆ ಬೆಳೆ ವೈಜ್ಞಾನಿಕವಾಗಿರದೆ ಪ್ರಕೃತಿಯ ಕರುಣೆಯನ್ನು ಅವಲಂಭಿಸಿಕೊಂಡಿರುವುದು ಇದಕ್ಕೆ ಕಾರಣ ಸೇವಂತಿಗೆಗೆ ನಿಶ್ಚಿತವಾದ ಮಾರುಕಟ್ಟೆ ಇಲ್ಲದಿರುವುದರಿಂದ ರೈತರು ಇದನ್ನು ಬೆಳೆಯಲು ಉತ್ಸಾಹ ತೋರುತ್ತಿಲ್ಲ. ಹಾಗಾಗಿ ಜಿಲ್ಲೆಯಲ್ಲಿ ಸೇವಂತಿಗೆ ಬೆಳೆಗೆ ಯಾವುದೇ ಭವಿಷ್ಯವಿರುವಂತೆ ಕಂಡುಬರುವುದಿಲ್ಲ.

ಸೇವಂತಿಗೆ ಮತ್ತು ಕನಕಾಂಬರಗಳೊಡನೆ ಹೋಲಿಸಿದರೆ ಗುಲಾಬಿ ಬೆಳೆಯ ಪರಿಸ್ಥಿತಿ ಚೆನ್ನಾಗಿರುವುದನ್ನು ಗಮನಿಸಬಹುದು. (ಚಿತ್ರ ೪.೧೧)




**ಚಿತ್ರ ೪.೧೧. ದ.ಕದಲ್ಲಿ ಗುಲಾಬಿ ಬೆಳೆ**

ಮೇಲಿನ ಚಿತ್ರದಲ್ಲಿ RT ರೇಖೆಯು ಗುಲಾಬಿ ಬೆಳೆ ಹೂವಿನ ಉತ್ಪಾದನೆ ಪ್ರವೃತ್ತಿ ರೇಖೆಯಾಗಿದೆ. ದ.ಕ. ಜಿಲ್ಲೆಯಲ್ಲಿ ಗುಲಾಬಿ ಬೆಳೆ ನಿಧಾನವಾಗಿ ಆದರೆ ಸ್ಥಿರತೆಯಿಂದ ಪ್ರಗತಿಯ ಪಥದಲ್ಲಿ ಮುಂದುವರಿಯುತ್ತಿರುವುದನ್ನು ಕಾಣಬಹುದು. ಗುಲಾಬಿಯನ್ನು ಎಲ್ಲಾ ಜನಾಂಗಗಳ ಜನರು ಸಭೆ ಸಮಾರಂಭಗಳಲ್ಲಿ ಬಳಸುವ ಹೂವು. ರೋಟರಿ, ಲಯನ್ಸ್ ಮತ್ತು ಜೇಸೀಸ್ ಸಂಸ್ಥೆಗಳಿಂದ ಗುಲಾಬಿ ಹೂಗಳಿಗೆ ತುಂಬಾ ಬೇಡಿಕೆಯಿದೆ. ಈಗ ದ.ಕ. ಜಿಲ್ಲೆಯಲ್ಲಿ ಬಹುತೇಕ ಸಭೆ ಸಮಾರಂಭಗಳಲ್ಲಿ ಅತಿಥಿಗಳನ್ನು ಗುಲಾಬಿ ಹೂ ನೀಡಿ ಸ್ವಾಗತಿಸುವ ಪರಿಪಾಠ ಬೆಳೆದಿದೆ. ಇದರಿಂದಾಗಿ ಜಿಲ್ಲೆಯ ಎಲ್ಲಾ ತಾಲೂಕುಗಳಲ್ಲಿ ಗುಲಾಬಿ ಹೂ ಬೆಳೆಯಲು ಪ್ರೇರಣೆ ದೊರೆತಂತಾಗಿದೆ. ಗುಲಾಬಿ ಹೂಗಳಿಗೆ ಪ್ಲಾಸ್ಟಿಕ್ ಸುತ್ತಿ ಮಾರಾಟ ಮಾಡುವ ವ್ಯವಸ್ಥೆಯಿಂದಾಗಿ ಅವುಗಳ ಬೇಡಿಕೆಯೊಡನೆ ಮೌಲ್ಯವೂ ಹೆಚ್ಚಾಗುತ್ತಿರುವುದರಿಂದ ಗುಲಾಬಿ ಕೃಷಿಗೆ ಅಗತ್ಯವಿರುವ ಉತ್ತೇಜನ ದೊರೆತಂತಾಗಿದೆ. ಹಾಗಾಗಿ ಗುಲಾಬಿ ಬೆಳೆಗೆ ದ.ಕ. ಜಿಲ್ಲೆಯಲ್ಲಿ ಉತ್ತಮ ಭವಿಷ್ಯವಿದೆ.

ದ.ಕ. ಜಿಲ್ಲೆಯು ಮಲ್ಲಿಗೆ ಬೆಳೆಯನ್ನು ಜೀವನೋಪಾಯವಾಗಿ ಅಂಗೀಕರಿಸಿ ಅದಕ್ಕೆ ಇತರೆಲ್ಲಾ ಪುಷ್ಪಗಳಿಗಿಂತ ಹೆಚ್ಚಿನ ಮಹತ್ವವನ್ನು ನೀಡಿದೆ. ಮಲ್ಲಿಗೆ ಬೆಳೆಯುವ ಪ್ರದೇಶ ಮತ್ತು ಉತ್ಪಾದನೆ ಪ್ರತಿ ವರ್ಷ ಹೆಚ್ಚಾಗುತ್ತಿರುವುದು ಇದಕ್ಕೆ ಸಾಕ್ಷಿ[೧೭] (ಕೋಷ್ಟಕ ೪.೮)

ಕೋಷ್ಟಕ ೪.೮

## ದ.ಕ.ದ ಮಲ್ಲಿಗೆ ಬೆಳೆ ಪ್ರದೇಶ ಮತ್ತು ಉತ್ಪಾದನೆ

| ವರ್ಷ | ಪ್ರದೇಶ | | ಉತ್ಪಾದನೆ | |
|---|---|---|---|---|
| | ಹೆಕ್ಟೇರು | ಬೆಳವಣಿಗೆ | ಟನ್ನು | ಬೆಳವಣಿಗ (%) |
| ೨೦೦೪-೦೫ | ೬೧ | - | ೨೩೧ | - |
| ೨೦೦೫-೦೬ | ೬೫ | ೬.೫೬% | ೩೪೦ | ೪೬.೩೨% |
| ೨೦೦೬-೦೭ | ೬೬ | ೧.೫೪% | ೪೯೩ | ೪೫.೦೦% |
| ೨೦೦೭-೦೮ | ೬೮ | ೩.೦೩% | ೫೦೩ | ೦೨.೦೨% |
| ೨೦೦೮-೦೯ | ೭೧ | ೪.೪೧% | ೫೭೫ | ೧೪.೩೧% |

ಆಧಾರ: ದಕ್ಷಿಣ ಕನ್ನಡ ತೋಟಗಾರಿಕಾ ವಿಭಾಗದ ಅಂಕಿ ಅಂಶಗಳು ೨೦೦೫-೨೦೦೯ ಪುಟ ೨೯.

ಮಲ್ಲಿಗೆಗೆ ಬೇಡಿಕೆ ಹೆಚ್ಚುತ್ತಿರುವುದರಿಂದ ಅತಿ ಸಣ್ಣ ರೈತರು ತಮ್ಮ ತುಂಡು ಭೂಮಿಯಲ್ಲಿ ಮಲ್ಲಿಗೆ ಬೆಳೆಗೆ ಪ್ರಾಧಾನ್ಯ ನೀಡುತ್ತಿದ್ದಾರೆ. ಹಾಗಾಗಿ ಮಲ್ಲಿಗೆ ಬೆಳೆಯುತ್ತಿರುವ ಪ್ರದೇಶದ ವ್ಯಾಪ್ತಿ ನಿಧಾನವಾಗಿ ಹಿಗ್ಗುತ್ತಾ ಹೋಗುತ್ತಿದೆ. ಕಳೆದ ಐದು ವರ್ಷಗಳಲ್ಲಿ ಮಲ್ಲಿಗೆ ಬೆಳೆಯುವ ಪ್ರದೇಶದಲ್ಲಿ ನಿಧಾನ ಏರಿಕೆಯಾಗಿರುವುದನ್ನು ಕೋಷ್ಟಕ ೪.೮ ತಿಳಿಸುತ್ತದೆ. ಮಲ್ಲಿಗೆ ಬೆಳೆಯುವ ಪ್ರದೇಶದ ಬೆಳವಣಿಗೆಯ ದರ ವಾರ್ಷಿಕ ಶೇ.೩.೮೮ ಆಗಿರುತ್ತದೆ. ಇದು ಈ ಬೆಳೆಯತ್ತ ರೈತರು ಆಕರ್ಷಿತರಾಗುತ್ತಿರುವುದರ ಸಂಕೇತ. ಬೆಳೆಯುವ ಪ್ರದೇಶ ವಿಸ್ತರಣೆಯೊಂದಿಗೆ ಉತ್ಪಾದನೆಯೂ ಕೂಡಾ ಹೆಚ್ಚಾಗುತ್ತಿದೆ. ೨೦೦೭-೦೫ ರಲ್ಲಿ ದ.ಕ. ಜಿಲ್ಲೆಯಲ್ಲಿ ೨೩೧ ಟನ್ನು ಮಲ್ಲಿಗೆ ಉತ್ಪಾದನೆಯಾಗಿತ್ತು. ೨೦೦೮-೦೯ ರಲ್ಲಿ ಮಲ್ಲಿಗೆ ಉತ್ಪಾದನೆ ೫.೭೫ ಟನ್ನುಗಳಿಗೇರಿತು. ಮಲ್ಲಿಗೆಯ ಉತ್ಪಾದನೆ ಕಳೆದ ಐದು ವರ್ಷಗಳಲ್ಲಿ ಎರಡೂವರೆ ಪಟ್ಟು ಹೆಚ್ಚಾಗಿದೆ. ಇದು ಉತ್ತೇಜನಕಾರಿ ಬೆಳವಣಿಗೆ. ಮಲ್ಲಿಗೆಯ ಉತ್ಪಾದನೆಯಲ್ಲಿ ವಾರ್ಷಿಕ ಶೇ.೨೬.೯೧ ಏರಿಕೆಯಾಗುತ್ತಿದ್ದು, ಇದೇ ದರದಲ್ಲಿ ಅದು ಮುಂದುವರಿಯುವ ಎಲ್ಲಾ ಲಕ್ಷಣಗಳಿವೆ.

ದ.ಕ. ಜಿಲ್ಲೆಯ ಎಲ್ಲಾ ತಾಲೂಕುಗಳಲ್ಲಿ ಮಲ್ಲಿಗೆ ಬೆಳೆಯುತ್ತಿರುವುದರಿಂದ ಅದಕ್ಕೆ ಉತ್ತಮ ಭವಿಷ್ಯವನ್ನು ನಿರೀಕ್ಷಿಸಬಹುದು. (ಕೋಷ್ಟಕ ೪.೯)

## ಕೋಷ್ಟಕ ೪.೯.

### ಮಲ್ಲಿಗೆ ಬೆಳೆಯಲ್ಲಿ ತಾಲೂಕುಗಳ ಪಾಲು

| ತಾಲೂಕು | ವಿಸ್ತೀರ್ಣ ಹೆಕ್ಟೇರು | ವಿಸ್ತೀರ್ಣದಲ್ಲಿ ಪಾಲು (%) | ಉತ್ಪನ್ನ ಟನ್ನು | ಉತ್ಪನ್ನದಲ್ಲಿ ಪಾಲು (%) | ಮೌಲ್ಯ ರೂ. | ಮೌಲ್ಯದಲ್ಲಿ ಪಾಲು |
|---|---|---|---|---|---|---|
| ಮಂಗಳೂರು | ೦೫ | ೦೭.೦೦ | ೩೭.೫ | ೦೭.೫ | ೧೩೬.೮೮ | ೦೭.೫ |
| ಬಂಟ್ವಾಳ | ೨೪ | ೩೫.೩೦ | ೧೮೦.೦ | ೩೮.೮ | ೬೭೭.೦೦ | ೩೫.೮ |
| ಪುತ್ತೂರು | ೧೦ | ೧೫.೧೦ | ೭೨.೫ | ೧೪.೪ | ೨೬೪.೬೩ | ೧೪.೪ |
| ಸುಳ್ಯ | ೦೩ | ೦೪.೪೦ | ೨೧ | ೦೪.೨ | ೭೬.೬೫ | ೦೪.೧ |
| ಬೆಳ್ತಂಗಡಿ | ೨೬ | ೩೮.೨೦ | ೧೯.೨ | ೩೮.೧ | ೭೦೦.೮೦ | ೩೮.೨ |
| **ಒಟ್ಟು** | **೬೮** | **೧೦೦** | **೧೦೦** | **೧೦೦** | **೧೮೩೫.೯೫** | **೧೦೦** |

**ಆಧಾರ: ದಕ್ಷಿಣ ಕನ್ನಡ ಜಿಲ್ಲಾ ತೋಟಗಾರಿಕಾ ಅಂಕಿ ಅಂಶಗಳು ೨೦೦೮-೦೯ ಪುಟ ೨೫.**

ಬೆಳ್ತಂಗಡಿ ಮತ್ತು ಬಂಟ್ವಾಳ ತಾಲೂಕುಗಳು ಮಲ್ಲಿಗೆ ಅತ್ಯಧಿಕ ಬೆಳೆಯುವ ಪ್ರದೇಶಗಳು. ಸುಳ್ಯ, ಪುತ್ತೂರು ಮತ್ತು ಮಂಗಳೂರು ತಾಲೂಕುಗಳಲ್ಲಿ ಮಲ್ಲಿಗೆ ಬೆಳೆ ಪ್ರದೇಶವನ್ನು ವಿಸ್ತರಿಸಲು ವಿಪುಲಾವಕಾಶಗಳಿವೆ. ಮಂಗಳೂರು ನಗರವು ಮಲ್ಲಿಗೆಯ ಪ್ರಧಾನ ಮಾರುಕಟ್ಟೆಯಾಗಿರುವುದರಿಂದ ಮಂಗಳೂರಿಗೆ ಸಮೀಪವಿರುವ ಬಂಟ್ವಾಳ ತಾಲೂಕಿನಲ್ಲಿ ಮಲ್ಲಿಗೆ ಬೆಳೆ ಉಳಿದ ತಾಲೂಕುಗಳಿಗಿಂತ ಅಧಿಕವಾಗಿದೆ. ಆದರೆ ಜಾಗತೀಕರಣ ಪ್ರಕ್ರಿಯೆಗೆ ಒಳಪಟ್ಟಿರುವ ಮಂಗಳೂರಿಗರು ಮಲ್ಲಿಗೆ ಕೃಷಿ ವಿಸ್ತರಣೆಗೆ ಮೀನಮೇಷ ಎಣಿಸುತ್ತಿದ್ದಾರೆ. ಬೆಳ್ತಂಗಡಿ ಲಾಗಾಯ್ತಿನಿಂದಲೂ ಮಲ್ಲಿಗೆಗೆ ಹೆಚ್ಚು ಬೇಡಿಕೆಯಿರುವ ಪ್ರದೇಶ. ಬೆಳ್ತಂಗಡಿ ತಾಲೂಕಿನಲ್ಲಿ ಶ್ರೀ ಕ್ಷೇತ್ರ ಧರ್ಮಸ್ಥಳ ಇರುವುದು ಮತ್ತು ಎಲ್ಲಾ ಸಮಾರಂಭಗಳಲ್ಲಿ ಮಲ್ಲಿಗೆಯನ್ನು ದಂಡಿಯಾಗಿ ಬಳಸುತ್ತಿರುವ ಕ್ರೈಸ್ತ ಬಾಂಧವರು ಈ ತಾಲೂಕಿನಲ್ಲಿ ಬಹು ಸಂಖ್ಯೆಯಲ್ಲಿರುವುದು ಇಲ್ಲಿ ಮಲ್ಲಿಗೆಯ ಬೇಡಿಕೆ ಹೆಚ್ಚಿರಲು ಕಾರಣ. ಮಲ್ಲಿಗೆ ಬೆಳೆಯುತ್ತಿರುವವರಲ್ಲಿ ಕ್ರಿಶ್ಚಿಯನ್ಸ್ ಸಮುದಾಯದವರದ್ದೇ ಮೇಲುಗೈ. ಇತ್ತೀಚೆಗೆ ಶ್ರೀ ಕ್ಷೇತ್ರ ಧರ್ಮಸ್ಥಳದ ಗ್ರಾಮಾಭಿವೃದ್ಧಿ ಯೋಜನೆಯಿಂದಾಗಿ ಪ್ರಗತಿ ಬಂದು ಸ್ವಸಹಾಯ ಗುಂಪಿನವರು ಮಲ್ಲಿಗೆ ಬೆಳೆಯತ್ತ ತಮ್ಮ ಆಸಕ್ತಿಯನ್ನು ಹರಿಯ

ಬಿಡುತ್ತಿದ್ದಾರೆ. ಪುತ್ತೂರು ಮತ್ತು ಸುಳ್ಯ ತಾಲೂಕುಗಳು ಬೆಳ್ತಂಗಡಿ ಮತ್ತು ಬಂಟ್ವಾಳಗಳ ಮೇಲ್ಪಂಕ್ತಿಯನ್ನು ಅನುಸರಿಸಿದರೆ ದ.ಕ. ಜಿಲ್ಲೆಯಲ್ಲಿ ಮಲ್ಲಿಗೆ ಬೆಳೆಯ ಇನ್ನಷ್ಟು ವಿಸ್ತರಿಸಲಿದೆ.

ದ.ಕ. ಜಿಲ್ಲೆಯಲ್ಲಿ ಗುಲಾಬಿ ಮತ್ತು ಮಲ್ಲಿಗೆ ಪುಷ್ಪೋದ್ಯಮಕ್ಕೆ ವಿಪುಲಾವಕಾಶವಿರುವುದನ್ನು ಇಲ್ಲಿಯುವರೆಗಿನ ವಿಶ್ಲೇಷಣೆ ತಿಳಿಯಪಡಿಸುತ್ತದೆ. ಜಿಲ್ಲೆಯ ಹವಾಮಾನ ಈ ಬೆಳೆಗಳಿಗೆ ಪೂರಕವಾಗಿದೆ. ಜಾಗತೀಕರಣದ ಹಿನ್ನಲೆಯಲ್ಲಿ ಈ ಮಣ್ಣಿನ ಸಂಸ್ಕೃತಿಗೆ ಧಕ್ಕೆಯಾಗದ ವಾಣಿಜ್ಯ ಬೆಳೆಗಳಾದ ಗುಲಾಬಿ ಮತ್ತು ಮಲ್ಲಿಗೆ ಕೃಷಿಯನ್ನು ಸರಕಾರ ಮತ್ತು ಸರಕಾರೇತರ ಸೇವಾ ಸಂಸ್ಥೆಗಳು ಪ್ರೋತ್ಸಾಹಿಸಬೇಕಾಗಿದೆ.[೧೮] ಪರಿಸರ ಸ್ನೇಹಿ ಪುಷ್ಪೋದ್ಯಮ ಈ ಜಿಲ್ಲೆಯ ಇನ್ನಷ್ಟು ಆರ್ಥಿಕ ಉತ್ಕರ್ಷಕ್ಕೆ ಕಾರಣವಾಗಲಿದೆ.

## ೪.೫ ಉಡುಪಿ ಜಿಲ್ಲೆಯ ಇತಿಹಾಸ ಮತ್ತು ಭೌಗೋಳಿಕತೆ

ಉಡುಪಿ ಜಿಲ್ಲೆಯು ಕ್ರಿ.ಶ. ೧೯೯೭ ರವರೆಗೆ ದಕ್ಷಿಣ ಕನ್ನಡ ಜಿಲ್ಲೆಯ ಭಾಗವಾಗಿತ್ತು. ಇವೆರಡು ಜಿಲ್ಲೆ ಪ್ರಾಚೀನ ತುಳುನಾಡಿನ ಎರಡು ಭಾಗಗಳಾಗಿದ್ದುದರಿಂದ ಇವಕ್ಕಿರುವ ಇತಿಹಾಸ ಒಂದೇ. ಉಡುಪಿ ಜಿಲ್ಲೆಯ ಮಲ್ಪೆ, ಬಾರ್ಕೂರು ಮತ್ತು ಬಸರೂರುಗಳ ಇತಿಹಾಸ ಕ್ರಿ. ಪೂ. ಯುಗಕ್ಕೆ ಚಾಚಿಕೊಳ್ಳುತ್ತದೆ. ಕ್ರಿ. ಶ. ಏಳನೆಯ ಶತಮಾನದಲ್ಲಿ ಅಳುಪ ಅರಸರು ಈ ಜಿಲ್ಲೆಯನ್ನು ಆಳುತ್ತಿದ್ದರೆಂದು ಶಾಸನಗಳು ತಿಳಿಸುತ್ತವೆ. ಅಳುಪರ ಅರಸ ಅಳುಪೇಂದ್ರನು ಬಾರಕೂರನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ತುಳುನಾಡನ್ನು ಆಳುತ್ತಿದ್ದನು. ಹೊಯ್ಸಳರ ಕಾಲದಲ್ಲಿ ಅಳುಪರ ಮಹತ್ವ ಕಡಿಮೆಯಾಗಿ ಇತರ ಸಣ್ಣ ಪುಟ್ಟ ಅರಸರು ತುಳುನಾಡಿನುದ್ದಕ್ಕೆ ಅಲ್ಲಲ್ಲಿ ತಲೆ ಎತ್ತಿದರು. ಆ ಬಳಿಕ ತುಳುನಾಡು ವಿಜಯನಗರದ ಆಡಳಿತಕ್ಕೆ ಒಳಪಟ್ಟಿತು. ವಿಜಯನಗರದ ಅರಸರು ತುಳುನಾಡನ್ನು ಮಂಗಳೂರು ಮತ್ತು ಬಾರಕೂರು ವಿಭಾಗಗಳೆಂದು ವಿಂಗಡಿಸಿ ಆಡಳಿತ ನಡೆಸಿದರು. ಇವೆರಡು ವಿಭಾಗಗಳಿಂದ ಇಬ್ಬರು ರಾಜ್ಯಪಾಲರುಗಳನ್ನು ನೇಮಕ ಮಾಡಲಾಗಿತ್ತು. ಹಾಗಾಗಿ ದ,ಕ ಜಿಲ್ಲೆಯು ಕ್ರಿ. ಶ. ೧೯೯೭ ರಲ್ಲಿ ವಿಭಜನೆಯಾದುದನ್ನು ಇತಿಹಾಸದ ಪುನರಾವರ್ತನೆ ಎನ್ನಬಹುದಾಗಿದೆ.

ವಿಜಯನಗರ ಸಾಮ್ರಾಜ್ಯದ ಪತನಾನಂತರ ಕ್ರಿ.ಶ. ೧೫೫೪ ರಿಂದ ಕ್ರಿ.ಶ. ೧೭೬೨ ರವರೆಗೆ ಈ ಜಿಲ್ಲೆ ಕೆಳದಿ ರಾಜರ ಅಧೀನಕ್ಕೊಳಪಟ್ಟಿತು. ಕ್ರಿ.ಶ. ೧೭೬೩ ರಲ್ಲಿ ಬಿದನೂರನ್ನು ಹೈದರಾಲಿ ವಶಪಡಿಸಿಕೊಂಡಾಗ ಜಿಲ್ಲೆಯು ಮೈಸೂರು ಸಂಸ್ಥಾನದ ಭಾಗವಾಗಿ ಹೋಯಿತು. ಕ್ರಿ.ಶ. ೧೭೯೯ ರಲ್ಲಿ ಟಿಪ್ಪು ಮರಣ ಹೊಂದಿದಾಗ ಈ ಜಿಲ್ಲೆಯ ಆಡಳಿತ ಬ್ರಿಟಿಷರ ಈಸ್ಟ್ ಇಂಡಿಯಾ ಕಂಪೆನಿಯ ಕೈಗೆ ಹೋಯಿತು. ಕ್ರಿ.ಶ. ೧೯೫೬ರವರೆಗೆ ಇದು ಮದರಾಸು

ಸಂಸ್ಥಾನದ ಭಾಗವಾಗಿತ್ತು. ಕ್ರಿ.ಶ. ೧೯೫೬ ರಲ್ಲಿ ಭಾಷಾವಾರು ಪ್ರಾಂತ್ಯಗಳ ರಚನೆಯಾದಾಗ ಈ ಜಿಲ್ಲೆ ಕರ್ನಾಟಕದ ಆಡಳಿತಕ್ಕೆ ಒಳಪಟ್ಟಿತು. ರಾಜ್ಯ ಸರಕಾರವು ಆಡಳಿತದ ಅನುಕೂಲಕ್ಕಾಗಿ ಅವಿಭಜಿತ ದ.ಕ. ಜಿಲ್ಲೆಯನ್ನು ಎರಡು ಜಿಲ್ಲೆಗಳಾಗಿ ವಿಂಗಡಿಸಿದುದರ ಪರಿಣಾಮವಾಗಿ ೨೪.೮.೧೯೯೭ ರಂದು ಉಡುಪಿ ಜಿಲ್ಲೆ ಅಸ್ತಿತ್ವಕ್ಕೆ ಬಂತು.

ಉಡುಪಿ ಜಿಲ್ಲೆಯ ಒಟ್ಟು ವಿಸ್ತೀರ್ಣ ೩೮೮೦ ಚ.ಕಿ. ಮಿ. ಇದು ವಿಸ್ತೀರ್ಣದಲ್ಲಿ ದ.ಕ. ಜಿಲ್ಲೆಗಿಂತ ೮೮೦ ಚ.ಕಿ.ಮೀ ಚಿಕ್ಕದು. ಉಡುಪಿ ಜಿಲ್ಲೆಯು ಕಾರ್ಕಳ, ಉಡುಪಿ ಮತ್ತು ಕುಂದಾಪುರಗಳೆಂಬ ಮೂರು ತಾಲೂಕುಗಳನ್ನು ಒಳಗೊಂಡಿದೆ. ಉತ್ತರಕ್ಕೆ ಉತ್ತರಕನ್ನಡ ಜಿಲ್ಲೆ, ಪೂರ್ವಕ್ಕೆ ಶಿವಮೊಗ್ಗ ಮತ್ತು ಚಿಕ್ಕಮಗಳೂರು ಜಿಲ್ಲೆ, ದಕ್ಷಿಣಕ್ಕೆ ದ.ಕ. ಜಿಲ್ಲೆ ಮತ್ತು ಪಶ್ಚಿಮಕ್ಕೆ ಅರಬ್ಬಿ ಸಮುದ್ರ ಉಡುಪಿ ಜಿಲ್ಲೆಯನ್ನು ಆವರಿಸಿದೆ.[ ಭೂಪಟ ೪.೨ ] ಸೀತಾ,ಸ್ವರ್ಣ, ವಾರಾಹಿ ಮತ್ತು ಗಂಗೊಳ್ಳಿ ಈ ಜಿಲ್ಲೆಯ ಪ್ರಮುಖ ನದಿಗಳಾಗಿವೆ. ಉಡುಪಿ ಜಿಲ್ಲೆಯನ್ನು ಭೌತಿಕವಾಗಿ ಕರಾವಳಿ ಪ್ರದೇಶ, ಒಳನಾಡು ಪ್ರದೇಶ ಮತ್ತು ಪಶ್ಚಿಮ ಘಟ್ಟಗಳ ಪ್ರದೇಶ ಎಂದು ವಿಂಗಡಿಸಲಾಗುತ್ತದೆ. ತೆಂಗು, ಅಡಿಕೆಮತ್ತು ಭತ್ತ- ಈ ಜಿಲ್ಲೆಯ ಪ್ರಧಾನ ಬೆಳೆಗಳು.




ನಕ್ಷೆ ೪.೩ ಉಡುಪಿ ಜಿಲ್ಲೆ

## ೪.೬ ಉಡುಪಿ ಜಿಲ್ಲೆಯ ಆರ್ಥಿಕತೆ

೨೦೦೧ ರ ಜನ ಗಣತಿಯ ಪ್ರಕಾರ ಜಿಲ್ಲೆಯ ಒಟ್ಟು ಜನಸಂಖ್ಯೆ ೧೧.೧೨ಲಕ್ಷ, ಇವರಲ್ಲಿ ಗಂಡಸರ ಸಂಖ್ಯೆ ೫.೨೨ ಲಕ್ಷ ಮತ್ತು ಹೆಂಗಸರ ಸಂಖ್ಯೆ ೫.೯೦ ಲಕ್ಷ. ಲಿಂಗಾನುಪಾತ ೧೦೦೦ : ೧೧೩೦. ದ.ಕ. ಜಿಲ್ಲೆಯಂತೆ ಇಲ್ಲೂ ಹೆಂಗಸರ ಪ್ರಮಾಣ ಅಧಿಕ. ಜಿಲ್ಲೆಯ ಜನಸಂಖ್ಯೆಯಲ್ಲಿ ಅಕ್ಷರಸ್ಥರ ಸಂಖ್ಯೆ ೮.೫೫ ಲಕ್ಷ. ಸಾಕ್ಷರತಾ ಪ್ರಮಾಣ ಗಂಡಸರದು ಶೇ. ೫೦.೫ ಮತ್ತು ಹೆಂಗಸರದು ಶೇ. ೪೯.೫.[೧೯] ಇದನ್ನು ಅವಲೋಕಿಸಿದರೆ ಉಡುಪಿ ಜಿಲ್ಲೆಯಲ್ಲಿ ಮಹಿಳಾ ಸಬಲೀಕರಣವಾಗಿದೆಯೆಂದು ಹೇಳಬಹುದು. ಜಿಲ್ಲೆಯ ಪ್ರಧಾನ ವೃತ್ತಿಗಳಲ್ಲಿ ಒಂದಾದ ಮೀನುಗಾರಿಕೆಯಲ್ಲಿ ಮಹಿಳೆಯರದು ಪ್ರಧಾನ ಪಾತ್ರ. ಇಲ್ಲಿನ ಜಿಲ್ಲಾಧಿಕಾರಿಯವರು ಓರ್ವ ಮಹಿಳೆ. ಮೂರು ದಶಕಗಳ ಹಿಂದೆ ಇಲ್ಲಿನ ಓರ್ವ ಮಹಿಳಾ ರಾಜಕಾರಣಿ ರಾಜ್ಯಮಟ್ಟದ ನಾಯಕಿಯಾಗಿ ಬೆಳೆದಿದ್ದರು. ಕೃಷ್ಣನ ನಾಡೆನಿಸಿದ ಉಡುಪಿಯಲ್ಲಿ ಮಹಿಳಾಭಿವೃದ್ಧಿ ಯೋಜನೆಗಳು ಹೆಚ್ಚು ಸಫಲತೆಯನ್ನು ಕಾಣುತ್ತಿರುವುದನ್ನು ವಾರ್ತಾ ಪತ್ರಿಕೆಗಳು ಆಗಾಗ ವರದಿ ಮಾಡುತ್ತಿರುತ್ತವೆ.

**೪.೬.೧ ಉಡುಪಿ ಜಿಲ್ಲೆಯ ಪ್ರಮುಖ ಬೆಳೆಗಳು:** ಉಡುಪಿ ಜಿಲ್ಲೆಯು ಕೃಷಿಪ್ರಧಾನ ಆರ್ಥಿಕತೆಯನ್ನು ಹೊಂದಿದೆ. ಉಡುಪಿ ಜಿಲ್ಲೆಯ ಪ್ರಮುಖ ಬೆಳೆಗಳಯಾದಿ ಇಂತಿದೆ [ಕೋಷ್ಟಕ ೪.೧೦]

**ಕೋಷ್ಟಕ ೪.೧೦.**

**ಉಡುಪಿ ಜಿಲ್ಲೆಯ ಬೆಳೆಗಳು**

| ಬೆಳೆಗಳು | ಬೆಳೆಯುವ ಪ್ರದೇಶ(ಹೆಕ್ಟೆರು) | ನಿವ್ವಳವಿಸ್ತೀರ್ಣದಲ್ಲಿ ಪಾಲು |
|---|---|---|
| ಆಹಾರಬೆಳೆಗಳು | ೬೯೬೬೧ | ೫೬.೯೦% |
| ಹಣ್ಣು ಹಂಪಲುಗಳು | ೨೪೧೧೮ | ೧೯.೬೨% |
| ತರಕಾರಿಗಳು | ೧೯೪೫ | ೧.೫೮% |
| ಆಹಾರೇತರ ಬೆಳೆಗಳು | ೨೬೯೨೯ | ೨೧.೯೦% |
| ಒಟ್ಟು ಬೆಳೆ ಪ್ರದೇಶ | ೧೨೨೯೪೩ | ೧೦೦% |

ಆಧಾರ: ಉಡುಪಿ ಜಿಲ್ಲೆಯ ಅಂಕಿ ಅಂಶಗಳ ನೋಟ ೨೦೦೮-೦೯ ಪುಟ ೧೯.

ಉಡುಪಿ ಜಿಲ್ಲೆಯ ಒಟ್ಟು ಬೆಳೆಗಳಲ್ಲಿ ಆಹಾರ ಬೆಳೆಗಳ ಪಾಲು ಶೇ. ೫೭ ಎನ್ನುವುದು ಈ ಜಿಲ್ಲೆ ಭತ್ತ ಮತ್ತು ದ್ವಿದಳ ಧಾನ್ಯಗಳ ಬೆಳೆಗೆ ನೀಡಿರುವ ಮಹತ್ವವನ್ನು ಪ್ರತಿಬಿಂಬಿಸುತ್ತದೆ.

ಭತ್ತವು ಜಿಲ್ಲೆಯ ಪ್ರಧಾನ ಬೆಳೆಯಾಗಿದ್ದು ವ್ಯವಸಾಯ ಭೂಮಿಯಲ್ಲಿ ಭತ್ತ ಬೆಳೆಯ ಪ್ರದೇಶದ ವಿಸ್ತೀರ್ಣವು ೬೨೦೦೦ ಹೆಕ್ಟೇರು(ಶೇ. ೫೦.೪) ಆಗಿರುತ್ತದೆ. ಎರಡನೆಯ ಸ್ಥಾನ ಗೇರು ಬೆಳೆಗೆ ಲಭ್ಯವಾಗಿದೆ. ಒಟ್ಟು ಬೆಳೆ ಪ್ರದೇಶದಲ್ಲಿ ಗೇರು ಬೆಳೆ ಪ್ರದೇಶದ ವಿಸ್ತೀರ್ಣವು ೧೯೬೮೭ ಹೆಕ್ಟೇರು[ಶೇ.೧೬.೦೧] ಆಗಿರುತ್ತದೆ. ೧೫೦೦೯ ಹೆಕ್ಟೇರು ಭೂಮಿಯಲ್ಲಿ(ಶೇ.೧೨.೨೧) ತೆಂಗು ಬೆಳೆಯಲಾಗುತ್ತಿದೆ. ಅಡಿಕೆಗೆ ೫೨೯೪ ಹೆಕ್ಟೇರು(ಶೇ.೪.೩) ರಷ್ಟು ಕೃಷಿ ಭೂಮಿ ಬಳಕೆಯಾಗುತ್ತಿದೆ. ರಬ್ಬರು ಬೆಳೆ ಈ ಜಿಲ್ಲೆಯಲ್ಲಿ ಇನ್ನೂ ಜನಪ್ರಿಯವಾಗಿಲ್ಲ. ಕೇವಲ ೨೬೧೦ ಹೆಕ್ಟೇರು ಭೂಮಿಯಲ್ಲಿ(ಶೇ.೨.೧೨) ಮಾತ್ರ ರಬ್ಬರನ್ನು ಬೆಳೆಯಲಾಗುತ್ತಿದೆ. ದ.ಕ. ಜಿಲ್ಲೆಯೊಡನೆ ಹೋಲಿಸಿದರೆ ಭತ್ತದ ಬೆಳೆಗೆ ಉಡುಪಿ ಸಾಪೇಕ್ಷವಾಗಿ ಹೆಚ್ಚು ಭೂಮಿಯನ್ನು ಬಳಸುವುದು ಕಂಡು ಬರುತ್ತದೆ. ಗೇರು, ತೆಂಗು, ಅಡಿಕೆ, ರಬ್ಬರು ಬೆಳೆಗಳಿಗೆ ದ.ಕ. ಜಿಲ್ಲೆ ಉಡುಪಿಗಿಂತ ಹೆಚ್ಚು ಪ್ರದೇಶವನ್ನು ಬಳಸುತ್ತಿದೆ.

**೪.೬.೨ ಉಡುಪಿ ಜಿಲ್ಲೆಯಲ್ಲಿ ಭೂಮಿಯ ಬಳಕೆ:** ಉಡುಪಿ ಜಿಲ್ಲೆಯಲ್ಲಿ ಭೂಮಿಯ ಬಳಕೆ ಹೇಗಾಗುತ್ತಿದೆಯೆನ್ನುವುದನ್ನು ಚಿತ್ರ ೪.೧೨ ಅಭಿವ್ಯಕ್ತಿಸುತ್ತದೆ.




**ಚಿತ್ರ ೪.೧೨ ಉಡುಪಿ ಜಿಲ್ಲೆಯಲ್ಲಿ ಭೂಮಿಯ ಬಳಕೆ**

ಉಡುಪಿ ಜಿಲ್ಲೆಯ ಭೌಗೋಳಿಕ ವಿಸ್ತೀರ್ಣ ೩೫೬೪೪೬ ಹೆಕ್ಟೇರುಗಳು. ಇದರಲ್ಲಿ ಕೃಷಿಗೆ ೨೮.೩೦% ಭೂಮಿ ಬಳಕೆಯಾಗುತ್ತಿದೆ. ಶೇ೨೮.೦೮ ಭೂಮಿ ಅರಣ್ಯಮಯವಾಗಿದೆ. ಶೇ ೧೩.೩೮ರಷ್ಟು ಭೂ ಪ್ರದೇಶದಲ್ಲಿ ನೆಡುತೋಪುಗಳಿಗೆ. ಕೃಷಿಯೋಗ್ಯ ಪ್ರದೇಶ ಶೇ ೧೦.೧೪ ರಷ್ಟಿದ್ದು ಇದು ಸುಮ್ಮನೆ ವ್ಯರ್ಥವಾಗುತ್ತಿದೆ. ಬಂಜರು

ಮತ್ತು ಪಾಳು ಭೂಮಿ ಶೇ೬.೦೯ ರಷ್ಟಿದ್ದು ಇದರ ಸದ್ಬಳಕೆಗೆ ಹಾದಿಗಳನ್ನು ಕಂಡು ಕೊಳ್ಳಬೇಕಿದೆ. ಕೃಷಿಯೋಗ್ಯ ವ್ಯರ್ಥ ಭೂಮಿಯನ್ನು ಭೂ ರಹಿತರಿಗೆ ಹಂಚಿ, ಮಲ್ಲಿಗೆ ಕೃಷಿ ಕೈಗೊಳ್ಳವಂತೆ ಪ್ರೋತ್ಸಾಹಿಸಿದರೆ ಜಿಲ್ಲೆಯ ಒಟ್ಟು ದೇಶೀಯ ಉತ್ಪನ್ನ [GNP] ಹೆಚ್ಚಾಗಲಿದೆ.

**೪.೬.೨ ಉಡುಪಿ ಜಿಲ್ಲೆಯ ವೃತ್ತಿಯ ವಿತರಣೆ:** ಕೋಷ್ಟಕ ೪.೧೧ ರಲ್ಲಿ ಉಡುಪಿ ಜಿಲ್ಲೆಯ ವೃತ್ತಿಯ ವಿವರಣೆಯನ್ನು ನೀಡಲಾಗಿದೆ.

ಜಿಲ್ಲೆಯ ಒಟ್ಟು ಜನಸಂಖ್ಯೆಯಲ್ಲಿ ಕೆಲಸಗಾರರ ಪ್ರಮಾಣ ಶೇ೪೩.೮೯. ಅವರಲ್ಲಿ ಶೇ೮೫.೪೮ ಮುಖ್ಯ ಕೆಲಸಗಾರರಾದರೆ ಶೇ೧೪.೫೨ ಅರೆಕಾಲಿಕ ಕೆಲಸಗಾರರು. ಸಾಗುವಳಿದಾರರ ಪ್ರಮಾಣ ಶೇ೮.೭೪ ಮತ್ತುಶೇ೭.೮೯ ಕೃಷಿಕಾರ್ಮಿಕರು. ಜನಸಂಖ್ಯೆಯ ಶೇ ೫.೫೫ ರಷ್ಟು ಮಂದಿ ಗೃಹಕೃತ್ಯ ಸಾಗಿಸುವವರು. ಶೇ ೨೧.೬೯ ಮಂದಿ ಇತರ ಕೆಲಸಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಕೃಷಿಯಲ್ಲಿ ತೊಡಗಿಸಿಕೊಂಡಿರುವವರ ಪ್ರಮಾಣ ವರ್ಷದಿಂದ ವರ್ಷಕ್ಕೆ ಕಡಿಮೆಯಾಗುತ್ತಿದೆ. ಒಟ್ಟು ಜನಸಂಖ್ಯೆಯಲ್ಲಿ ಶೇ೫೬.೧೦ ಮಂದಿ ಕೆಲಸಗಾರರಲ್ಲದವರು. ಇದು ಆರ್ಥಿಕತೆಯ ಮೇಲೆ ಹೆಚ್ಚಿನ ಹೊರೆಯನ್ನು ಹೊರಿಸಿದಂತಾಗಿದೆ.

ಕೋಷ್ಟಕ ೪.೧೧

ಉಡುಪಿ ಜಿಲ್ಲೆಯ ವೃತ್ತಿಯ ವಿತರಣೆ

| ವೃತ್ತಿಗಳು | ಗಂಡು | ಹೆಣ್ಣು | ಒಟ್ಟು | ಶೇಕಡಾ |
|---|---|---|---|---|
| ಸಾಗುವಳಿದಾರರು | ೫೩೧೩೧ | ೪೪೧೨೭ | ೯೭೨೫೮ | ೮.೭೪% |
| ಕೃಷಿಕಾರ್ಮಿಕರು | ೩೭೨೯೯ | ೫೦೪೬೨ | ೮೭೭೬೧ | ೭.೮೯% |
| ಗೃಹಕೃತ್ಯ | ೯೪೯೧ | ೫೨೩೩೦ | ೬೧೮೨೧ | ೫.೫೫% |
| ಇತರ ಕೆಲಸಗಳು | ೧೮೮೦೩೦ | ೫೩೩೦೩ | ೨೪೧೩೩೩ | ೨೧.೬೯% |
| ಒಟ್ಟು ಕೆಲಸಗಾರರು | ೨೮೭೯೫೧ | ೨೦೦೨೨೨ | ೪೮೮೧೭೩ | ೪೩.೮೯% |
| ಕೆಲಸಗಾರರಲ್ಲದವರು | ೨೩೪೨೮೦ | ೩೮೯೭೯೦ | ೬೨೪೦೭೦ | ೫೬.೧೦% |
| ಒಟ್ಟು ಜನಸಂಖ್ಯೆ | ೫೨೨೨೩೧ | ೫೯೦೦೧೨ | ೧೧೧೨೨೪೩ | ೧೦೦ |
| ಮುಖ್ಯ ಕೆಲಸಗಾರರು | ೨೬೩೨೩೫ | ೧೫೪೦೫೨ | ೪೧೭೨೮೭ | ೮೫.೪೮ |
| ಅರೆಕಾಲಿಕ ಕೆಲಸಗಾರರು | ೨೪೭೧೬ | ೪೬೧೭೦ | ೭೦೮೮೬ | ೧೪.೫೨ |
| ಒಟ್ಟು ಕೆಲಸಗಾರರು | ೨೮೭೯೫೧ | ೨೦೦೨೨೨ | ೪೮೮೧೭೩ | ೧೦೦ |

ಆಧಾರ: ಉಡುಪಿ ಜಿಲ್ಲೆಯ ಅಂಕಿ-ಅಂಶಗಳ ನೋಟ ೨೦೦೮–೦೯ ಪುಟ ೧೮.

**೪.೬.೩ ಉಡುಪಿ ಜಿಲ್ಲೆಯ ಹಿಡುವಳಿಗಳು:** ಜಿಲ್ಲೆಯಲ್ಲಿ ಮಲ್ಲಿಗೆ ಕೃಷಿಯನ್ನು ಲಾಭದಾಯಕವಾಗಿಸಲು ಎಷ್ಟರ ಮಟ್ಟಿಗೆ ಸಾಧ್ಯ ಎನ್ನುವುದನ್ನು ಪರಿಶೀಲಿಸಲು ಉಡುಪಿ ಜಿಲ್ಲೆಯ ಹಿಡುವಳಿಗಳ ಸಂಖ್ಯೆ ಮತ್ತು ವಿಸ್ತೀರ್ಣದ ವಿಶ್ಲೇಷಣೆ ನಡೆಸಲಾಗಿದೆ [ಕೋಷ್ಟಕ ೪.೧೨] ಉಡುಪಿ ಜಿಲ್ಲೆಯ ಹಿಡುವಳಿದಾರರಲ್ಲಿ ಶೇ೭೮ ಮಂದಿ ಅತಿ ಸಣ್ಣ ಹಿಡುವಳಿದಾರರಾದರೆ ಶೇ ೧೩ ಮಂದಿ ಸಣ್ಣ ಹಿಡುವಳಿದಾರರು. ಉಳಿದ ಹಿಡುವಳಿದಾರರ ಪ್ರಮಾಣ ಶೇ ೮.೬೭ ಮಾತ್ರ. ಉಡುಪಿ ಜಿಲ್ಲೆಯ ಹಿಡುವಳಿದಾರರು ಒಟ್ಟು ಹಿಡುವಳಿಗಳಲ್ಲಿ ಹೊಂದಿರುವ ಪಾಲನ್ನು ಚಿತ್ರ ೪.೧೦ ತೋರಿಸುತ್ತದೆ.

**ಕೋಷ್ಟಕ ೪.೧೨**

**ಉಡುಪಿ ಜಿಲ್ಲೆಯಲ್ಲಿ ಭೂ ಹಿಡುವಳಿಗಳು ಮತ್ತು ವಿಸ್ತೀರ್ಣ**

| ಪ್ರಕಾರ | ಮಾನದಂಡ | ಹಿಡುವಳಿದಾರರು | ವಿಸ್ತೀರ್ಣ[ಹೆಕ್ಟೇರ್] |
|---|---|---|---|
| ಅತಿ ಸಣ್ಣ ಹಿಡುವಳಿ | ೧ ಹೆಕ್ಟೇರಿಗಿಂತ ಕಡಿಮೆ | ೧೫೩೯೮೦ (೭೮.೦೦%) | ೪೯೪೭೭ (೩೧.೯೮%) |
| ಸಣ್ಣಹಿಡುವಳಿ | ೧ ರಿಂದ ೨ ಹೆಕ್ಟೇರು | ೨೫೭೬೧ (೧೩.೦೫%) | ೩೫೯೮೧ (೨೩.೨೫%) |
| ಅರೆಮಧ್ಯಮ ಹಿಡುವಳಿ | ೨ ರಿಂದ ೪ ಹೆಕ್ಟೇರು | ೧೨೬೧೯ (೬.೩೯%) | ೩೪೧೯೬ (೨೨.೧೦) |
| ಮಧ್ಯಮ ಹಿಡುವಳಿ | ೪ ರಿಂದ ೧೦ ಹೆಕ್ಟೇರು | ೪೫೪೪ (೨.೦೩%) | ೨೫೭೫೭ (೧೬.೬೪%) |
| ದೊಡ್ಡ ಹಿಡುವಳಿ | ೧೦ ಕ್ಕಿಂತ ಹೆಚ್ಚು | ೪೯೭ (.೨೫%) | ೯೨೯೩ (೬.೦೦) |
| **ಒಟ್ಟು** | | ೧೯೭೪೦೧ (೧೦೦%) | ೧೫೪೭೦೪ (೧೦೦%) |

ಆದಾರ: ಉಡುಪಿ ಜಿಲ್ಲೆಯ ಅಂಕಿ-ಅಂಶಗಳ ನೋಟ ೨೦೦೮-೦೯ ಪುಟ ೩೧.

ಈ ಜಿಲ್ಲೆಯ ಅತಿ ಸಣ್ಣ ಹಿಡುವಳಿದಾರರ ಪ್ರಮಾಣ ಶೇ೭೮ರಷ್ಟಿದ್ದರೂ ಅವರು ಹೊಂದಿರುವ ಭೂಮಿಯ ಪ್ರಮಾಣ ಶೇ೨೩.೨೫ ರಷ್ಟು ಮಾತ್ರ. ಶೇ೧೩.೦೫ ರಷ್ಟಿರುವ ಸಣ್ಣ

ರೈತರು ಶೇ೨೩.೨೫ ರಷ್ಟು ಭೂ ಹಿಡುವಳಿಗಳನ್ನು ಹೊಂದಿದ್ದಾರೆ. ಶೇ೨.೨೮ ರಷ್ಟಿರುವ ಮಧ್ಯಮ ಮತ್ತು ದೊಡ್ಡ ಹಿಡುವಳಿದಾರರು ಶೇ೨೨.೬೪ ರಷ್ಟು ಹಿಡುವಳಿ ಭೂಮಿಯನ್ನು ಹೊಂದಿದ್ದಾರೆ. ಉಡುಪಿ ಜಿಲ್ಲೆಯಲ್ಲಿ ಭೂ ವಿತರಣೆಯಲ್ಲಿ ಅಸಾಮಾನ್ಯವಾದ ಅಸಮಾನತೆ ಇರುವುದನ್ನು ಇದು ತಿಳಿಯಪಡಿಸುತ್ತದೆ.

ದಕ್ಷಿಣ ಕನ್ನಡ ಜಿಲ್ಲೆಯ ಹಾಗೆ ಉಡುಪಿ ಜಿಲ್ಲೆಯಲ್ಲೂ ಕಾಲುವೆ ನೀರಾವರಿ ವ್ಯವಸ್ಥೆ ಇಲ್ಲ.ಒಟ್ಟು ೩೨೮೪೧ ಹೆಕ್ಟೇರು ಭೂಮಿಗೆ ವಿವಿಧ ಮೂಲಗಳಿಂದ ನೀರು ಉಣಿಸಲಾಗುತ್ತದೆ. ಅದರಲ್ಲಿ ಬಾವಿಗಳ ಪಾಲು ಶೇ೬೪.೮೭. ಏತ ನೀರಾವರಿಯಿಂದ ಶೇ೮.೦೭ ರಷ್ಟು ಕೃಷಿ




**ಚಿತ್ರ ೪.೧೪ ಉಡುಪಿ ಜಿಲ್ಲೆಯ ಹಿಡುವಳಿಗಳ ವಿಸ್ತೀರ್ಣ**

ಭೂಮಿಗೆ ನೀರಾವರಿ ಸೌಲಭ್ಯ ಒದಗಿಸಲಾಗಿದೆ. ದ.ಕ. ದಲ್ಲಿ ಕೆರೆ ನೀರಾವರಿಗೆ ಯಾವ ಮಹತ್ವವೂ ಇಲ್ಲ. ಆದರೆ ಉಡುಪಿ ಜಿಲ್ಲೆಯಲ್ಲಿ ಶೇ೪.೧೫ ರಷ್ಟು ಕೃಷಿ ಭೂಮಿಯ ಕೆರೆ ನೀರಾವರಿಯ ಪ್ರಯೋಜನ ಪಡೆದು ಬೆಳೆ ನೀಡುತ್ತಿದೆ. ಶೇ೧.೨೨ರಷ್ಟು ಭೂಮಿ ಕೊಳವೆ ಬಾವಿಗಳಿಂದ ನೀರನ್ನು ಪಡಕೊಳ್ಳುತ್ತಿದೆ. ಶೇ.೨೧.೬೮ರಷ್ಟು ಕೃಷಿ ಭೂಮಿಗೆ ಇತರ ಮೂಲಗಳಂದ ನೀರಾವರಿ ವ್ಯವಸಥೆಯಾಗುತ್ತಿದೆ.

## ೪.೨ ಉಡುಪಿ ಜಿಲ್ಲೆಯಲ್ಲಿ ಮಲ್ಲಿಗೆ ಕೃಷಿ:

ಉಡುಪಿ ಜಿಲ್ಲೆಯ ಶಂಕರಪುರ ಮಲ್ಲಿಗೆ ಬೆಳೆಗೆ ವಿಶ್ವಮಾನ್ಯತೆ ಪಡೆದ ಪುಟ್ಟ ಊರು. ಶಂಕರಪುರದ ಅತಿ ಸಣ್ಣ ಹಿಡುವಳಿದಾರರಾದ ಕ್ರಿಶ್ಚಿಯನ್ನರು ಬಹುತೇಕವಾಗಿ ತಮ್ಮನ್ನು ಮಲ್ಲಿಗೆ ಕೃಷಿಯಲ್ಲಿ ತೊಡಗಿಸಿಕೊಂಡಿದ್ದಾರೆ. ಎಂಟು ದಶಕಗಳ ಹಿಂದೆ ಶಂಕರಪುರದ ಇಗರ್ಜಿಯಲ್ಲಿ ಧರ್ಮ ಗುರುಗಳಾಗಿದ್ದ ಜಿಸಪ್ ಸಾಲ್ವದೋರ್ ಪೆರಿಸ್ ಅವಿರತ

ಕ್ರಮದಿಂದಾಗಿ ಶಂಕರಪುರವು ಅವಿಭಜಿತ ದ.ಕ. ಜಿಲ್ಲೆಯ ಮಲ್ಲಿಗೆ ರಾಜಧಾನಿ ಎನಿಸಿಕೊಂಡಿದೆ. ಕೋಷ್ಟಕ ೪.೧೩ ಉಡುಪಿ ಜಿಲ್ಲೆಯ ಮಲ್ಲಿಗೆ ಬೆಳೆಯ ತಾಲೂಕುವಾರು ವಿಸ್ತೀರ್ಣ ಮತ್ತು ಉತ್ಪಾದನೆಯ ವಿವರವನ್ನು ನೀಡುತ್ತದೆ.

ಜಿಲ್ಲೆಯಲ್ಲಿ ಮಲ್ಲಿಗೆ ಬೆಳೆಯುವ ಒಟ್ಟು ಪ್ರದೇಶದಲ್ಲಿ ಉಡುಪಿ ತಾಲೂಕಿನದು ಸಿಂಹಪಾಲು. ಜಿಲ್ಲೆಯ ಒಟ್ಟು ಮಲ್ಲಿಗೆ ಬೆಳೆ ಪ್ರದೇಶದಲ್ಲಿ ಉಡುಪಿ ತಾಲೂಕಿನ ಪಾಲು ೨೦೦೧-೦೨ ರಲ್ಲಿ ಶೇ.೫೪.೯೩. ೨೦೦೫-೦೬ ರಲ್ಲಿ ಅದು ಶೇ.೫೫.೦೧ಕ್ಕೇರಿದೆ. ಎಲ್ಲಾ ಮೂರು ತಾಲೂಕುಗಳಲ್ಲಿ ಮಲ್ಲಿಗೆ ಬೆಳೆ ಪ್ರದೇಶದ ವಿಸ್ತೀರ್ಣ ನಿಧಾನವಾಗಿ ಹೆಚ್ಚಾಗುತ್ತಾ ಹೋಗುತ್ತಿದೆ. ಈಗಿನ ಅಂಕಿ- ಅಂಶಗಳ ಪ್ರಕಾರ ಜಿಲ್ಲೆಯ ಮಲ್ಲಿಗೆ ಬೆಳೆಯುವ ಪ್ರದೇಶದಲ್ಲಿ ಶೇ.೫೫ರಷ್ಟು ಉಡುಪಿಯಲ್ಲಿ, ಶೇ.೨೭ ರಷ್ಟು ಕಾರ್ಕಳದಲ್ಲಿ ಮತ್ತು ಶೇ.೧೭ ರಷ್ಟು ಕುಂದಾಪುರದಲ್ಲಿದೆ. ಶಂಕರಪುರದ ಮಲ್ಲಿಗೆ ಬೆಳೆಗಾರರು ಉಡುಪಿ ತಾಲೂಕನ್ನು ಜಿಲ್ಲೆಯಲ್ಲಿ ಪ್ರಥಮ ಸ್ಥಾನಕ್ಕೆ ಏರಿಸಿದ್ದಾರೆ. ಮಲ್ಲಿಗೆ ಉತ್ಪಾದನೆಯಲ್ಲೂ ಜಿಲ್ಲೆಯಲ್ಲಿ ನಿಧಾನಗತಿಯ ಏರಿಕೆಯಾಗುತ್ತಿದೆ. ೨೦೦೫-೦೬ ರ ಅಂಕಿ-ಅಂಶಗಳ ಪ್ರಕಾರ ಜಿಲ್ಲೆಯಲ್ಲಿ ಒಟ್ಟು ೧೭೮೫ ಟನ್ನು ಮಲ್ಲಿಗೆ ಉತ್ಪಾದನೆಯಾಗಿದೆ. ಮಲ್ಲಿಗೆ ಉತ್ಪಾದನೆಯಲ್ಲಿ ಉಡುಪಿ ತಾಲೂಕು ಪ್ರಥಮ ಸ್ಥಾನದಲ್ಲಿದೆ. ಕಾರ್ಕಳ ಮತ್ತು ಕುಂದಾಪುರ ಅನುಕ್ರಮವಾಗಿ ದ್ವಿತೀಯ ಮತ್ತು ತೃತೀಯ ಸ್ಥಾನಗಳಲ್ಲಿವೆ. ಉತ್ಪಾದನೆಗೂ ಬೆಳೆ ಪ್ರದೇಶಕ್ಕೂ ನೇರ ಸಂಬಂಧ ವಿರುವುದನ್ನು ಇದು ತಿಳಿಸುತ್ತದೆ.

ಕೋಷ್ಟಕ ೪.೧೩

**ಉಡುಪಿ ಜಿಲ್ಲೆಯ ಮಲ್ಲಿಗೆ ಬೆಳೆಯ ವಿಸ್ತೀರ್ಣ ಮತ್ತು ಉತ್ಪಾದನೆ**

| ತಾಲೂಕು | ಬೆಳೆಪ್ರದೇಶ[ಹೆಕ್ಟೇರು] | | ಮಲ್ಲಿಗೆ ಉತ್ಪಾದನೆ (ಟನ್ನು) | |
|---|---|---|---|---|
| | ೨೦೦೧-೨೦೦೨ | ೨೦೦೫-೨೦೦೬ | ೨೦೦೧-೨೦೦೨ | ೨೦೦೫-೨೦೦೬ |
| ಉಡುಪಿ | ೧೨೮ ಹೆ | ೧೪೧ ಹೆ | ೮೯೬ | ೯೮೬ |
| ಕುಂದಾಪುರ | ೪೧ ಹೆ | ೪೫ ಹೆ | ೨೮೭ | ೩೧೬ |
| ಕಾರ್ಕಳ | ೬೪ ಹೆ | ೭೦ ಹೆ | ೪೪೮ | ೪೯೩ |
| ಒಟ್ಟು | **೨೩೩ ಹೆ** | **೨೫೬ ಹೆ** | ೧೬೩೧ | ೧೭೮೫ |

ಆಧಾರ: ಜಿಲ್ಲಾ ತೋಟಗಾರಿಕಾ ಇಲಾಖೆ ಉಡುಪಿ ಜಿಲ್ಲೆ ೨೦೦೭-೦೮ ಪುಟ ೧೧.

ಜಿಲ್ಲೆಯ ಮಲ್ಲಿಗೆ ಇಳುವರಿಯು ೨೦೦೧-೦೨ ರಲ್ಲಿ ೨೧ ಟನ್ ಇದ್ದುದು ೨೦೦೫-೦೬ ರಲ್ಲಿ ೨೩.೧ ಟನ್ ತಲುಪಿರುತ್ತದೆ. ಮಲ್ಲಿಗೆಯ ಮೌಲ್ಯವು ೨೦೦೧-೦೨ ರಲ್ಲಿ ರೂ. ೬೮ ಲಕ್ಷ ಇದ್ದುದು ೨೦೦೫-೦೬ ರಲ್ಲಿ ರೂ. ೭೪೯.೨ ಲಕ್ಷಗಳಿಗೆ ಏರಿರುವುದನ್ನು ಗಮನಿಸಬಹುದು. ಮಲ್ಲಿಗೆಯ ಬೆಳೆ ಪ್ರದೇಶ, ಉತ್ಪಾದನೆ, ಇಳುವರಿ ಮತ್ತು ಉತ್ಪಾದನಾ ಮೌಲ್ಯ ಹೆಚ್ಚುತ್ತಾ ಹೋಗುತ್ತಿರುವುದನ್ನು ಒಂದು ಆಶಾದಾಯಕವಾದ ಧನಾತ್ಮಕ ಅಂಶವಾಗಿದ್ದು ಉಡುಪಿ ಜಿಲ್ಲೆಯಲ್ಲಿ ಮಲ್ಲಿಗೆ ಬೆಳೆಗೆ ಉಜ್ವಲ ಭವಿಷ್ಯವಿರುವಂತೆ ಕಂಡು ಬರುತ್ತದೆ.

## ಉಲ್ಲೇಖಗಳು ಮತ್ತು ಟಿಪ್ಪಣಿಗಳು

೧. ಉತ್ತರ ಕನ್ನಡ, ಉಡುಪಿ ಮತ್ತು ದಕ್ಷಿಣ ಕನ್ನಡ ಕರಾವಳಿ ಕರ್ನಾಟಕದ ಮೂರು ಜಿಲ್ಲೆಗಳು. ಬ್ರಿಟಿಷರ ಆಡಳಿತದಲ್ಲಿ ಇದ್ದಾಗ ಕಾಸರಗೋಡು ಜಿಲ್ಲೆಯೂ ದಕ್ಷಿಣ ಕನ್ನಡದ ಒಂದು ಭಾಗವಾಗಿತ್ತು. ಈ ನಾಲ್ಕು ಜಿಲ್ಲೆಗಳನ್ನು ಬ್ರಿಟೀಷರು 'ಕೆನರಾ' ಎಂದು ಕರೆಯುತ್ತಿದ್ದರು.

೨. ಇಂದು ಮಂಗಳೂರು ಜಿಲ್ಲೆ ಎಂದು ಕರೆಯಬೇಕೆಂಬ ಬಲವಾದ ಒತ್ತಾಯ ಅನೇಕರಿಂದ ಬರುತ್ತಿದ್ದು, ಅದಕ್ಕೆ ಈ ಜಿಲ್ಲೆಯವರ ಪ್ರಬಲ ವಿರೋಧವಿದೆ.

೩. ಅನಂತರಾಮು; ದಕ್ಷಿಣ ಸಿರಿನಾಡು, ಅನಂತ ಪ್ರಕಾಶನ, ದೇವಾಂಬಾ ಅಗ್ರಹಾರ; ಮೈಸೂರು-೧೯೯೭.

೪. ಮಂಜೇಶ್ವರ ಗೋವಿಂದ ಪೈ; ತುಳುನಾಡು ಪೂರ್ವಸ್ಮೃತಿ, ವಿವೇಕ ರೈ ಮತ್ತು ಇತರರು (ಸಂ), ತುಳು ಸಾಹಿತ್ಯ ಚರಿತ್ರೆ, ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ ೨೦೦೭.

೫. ಮೋಹನ ಕೃಷ್ಣ ರೈ, ತುಳುನಾಡಿನ ಭೌಗೋಳಿಕ ಎಲ್ಲೆಕಟ್ಟುಗಳು, ವಿವೇಕ ರೈ ಮತ್ತು ಇತರರು, ಪೂರ್ವೋಕ್ತ ಪುಟ ೩೧.

೬. ಎಸ್.ಡಿ.ಶೆಟ್ಟಿ, ತುಳುನಾಡಿನ ಸಾಂಸ್ಕೃತಿಕ ಇತಿಹಾಸ, ವಿವೇಕ ರೈ ಮತ್ತು ಇತರರು, (ಸಂ) ಪೂರ್ವೋಕ್ತ.

೭. ಮಹಾರಾಷ್ಟ್ರದ ಡಾನಾ ಜಿಲ್ಲೆಯಿಂದ ಕೇರಳದ ಕನ್ಯಾಕುಮಾರಿ ಭೂಶಿರದ ವರೆಗಿನ ಪ್ರದೇಶ, ಸಪ್ತ ಕೊಂಕಣಗಳನ್ನು ಪರಕೊಂಕಣ (ಮಹಾರಾಷ್ಟ್ರ) ಕೊಂಕಣ (ಗೋವಾ) ಪಶು ಅಥವಾ ಹೈಗ ಕೊಂಕಣ (ಉತ್ತರ ಕನ್ನಡ) ಆಲುಪ ಕೊಂಕಣ (ದಕ್ಷಿಣ ಕನ್ನಡ) ಕೂಪಳ ಕೇರಳ ಮತ್ತು ಮೂಷಿಕ ಕೊಂಕಣ (ಕೇರಳ) ಎಂದು ವಿಭಜಿಸಲಾಗಿದೆ. (ನೋಡಿ: ಗಣಪತಿ ರಾವ್ ಐಗಳ್, ಪೊರ್ವೋಕ್ತ)

೮. P.Gururaj Bhat, Studies in Tuluva History and Culture 1975.

೯. ಕೊಡಗಿನಲ್ಲೂ ಇದೇ ತರಹದ ಪ್ರತ್ಯೇಕತೆಯ ಕೂಗು ೨೦ನೇ ಶತಮಾನದ ಕೊನೆಯ ಭಾಗಕ್ಕೆ ಕೇಳಿ ಬಂದಿತ್ತು. ಅಲ್ಲಿನ ಪ್ರಾಜ್ಞರು ಅದಕ್ಕೆ ವಿರೋಧ ವ್ಯಕ್ತಪಡಿಸಿದುದರಿಂದ ಅದು ತಣ್ಣಗಾಯಿತು. ನೋಡಿ: ಪ್ರಭಾಕರ ಶಿಶಿಲ,

ಕಿಶಾಗಮ್ಮಡಿಸಿದ ಕೊಲಂಬದ ದೇವಿ ಪ್ರಸಾದ್ ೨೦೧೧, ಕಾಂತಾವರ ಕನ್ನಡ ಸಂಘ, ಸುಳ್ಯ.

೧೦. ದಕ್ಷಿಣ ಕನ್ನಡ ಜಿಲ್ಲೆಯ ಅಂಕಿ ಅಂಶಗಳ ನೋಟ, ೨೦೦೮-೦೯, ಜಿಲ್ಲಾ ಸಾಂಖ್ಯಿಕ ಅಧಿಕಾರಿ ದ.ಕ. ಜಿಲ್ಲೆ.

೧೧. ವಿಶ್ವೇಶ್ವರ ವರ್ಮುಡಿ, ಕರಾವಳಿ ಕರ್ನಾಟಕದಲ್ಲಿ ಕೃಷಿ ಮತ್ತು ಅಭಿವೃದ್ಧಿ: ಅಂದು ಮತ್ತು ಇಂದು, ಕರಾವಳಿ ಕರ್ನಾಟಕದ ಅರ್ಥವ್ಯವಸ್ಥೆ (ಸಂ) ಪುಟ ೫೧.

೧೨. ಗಣಪತಿ ರಾವ್ ಐಗಳ್ ಎಂ; ೧೯೨೩,ದ.ಕ. ಜಿಲ್ಲೆಯ ಪ್ರಾಚೀನ ಇತಿಹಾಸ, ಶಾರದಾ ಪ್ರೆಸ್ ಮಂಗಳೂರು.

೧೩. Shyam Bhat N.; 1998, South Kanara,1799-1860, A Study on Colonial Administration and Regional Response,Mittel Publisher, New Delhi, p-20

೧೪. ದೇವಿ ಪ್ರಸಾದ್ ಸಂಪಾಜೆ, ಅಮರ ಸುಳ್ಯದ ಸ್ವಾತಂತ್ರ್ಯ ಸಂಗ್ರಾಮ.

೧೫. ದಕ್ಷಿಣ ಕನ್ನಡ ಜಿಲ್ಲೆಯ ಅಂಕಿ ಅಂಶಗಳ ನೋಟ, ೨೦೦೮-೦೯, ಪೂರ್ವೋಕ್ತ, ಪು.೬೩.

೧೬. ದ.ಕ. ಜಿಲ್ಲಾಧಿಕಾರಿ ಪೊನ್ನುರಾಜರ ಹೇಳಿಕೆ.

೧೭. ಪುಷ್ಪ ಮಾಹಿತಿ ಪ್ರಕಟನೆ ೨೦೦೫ ಕೃಷಿ ವಿಜ್ಞಾನ ಕೇಂದ್ರ, ಕಂಕನಾಡಿ, ಮಂಗಳೂರು, ೨೦೦೫ ಇಲಾಖಾ ಯೋಜನೆಗಳ ಕೈಪಿಡಿ ೨೦೧೦-೧೧.

೧೮. ತೋಟಗಾರಿಕಾ ಇಲಾಖೆ, ಜಿಲ್ಲಾ ಪಂಚಾಯತ್, ದಕ್ಷಿಣ ಕನ್ನಡ ಜಿಲ್ಲೆ.

೧೯. ಉಡುಪಿ ಜಿಲ್ಲೆಯ ಅಂಕಿ ಅಂಶಗಳ ನೋಟ ೨೦೦೮-೦೯, ಪುಟ ೪೮.

ಅಧ್ಯಾಯ-೫

# ಮಲ್ಲಿಗೆ ಬೆಳೆಗಾರರ ಸಮಸ್ಯೆಗಳು

ಮಲ್ಲಿಗೆ ಬೆಳೆಗಾರರ ಸಮಗ್ರ ಸಮಸ್ಯೆಗಳನ್ನು ಕ್ಷೇತ್ರಾಧ್ಯಯನದ ಮೂಲಕ ಅರಿತುಕೊಳ್ಳಲು ಪೂರ್ವೋದ್ದೇಶಿತ ಪ್ರಶ್ನಾವಳಿಯೊಂದನ್ನು ರಚಿಸಿಕೊಳ್ಳಲಾಯಿತು (ಅನುಬಂಧ-೧). ಈ ಪ್ರಶ್ನಾವಳಿ ಅಧ್ಯಯನದ ಉದ್ದೇಶಕ್ಕೆ ಅನುಗುಣವಾಗಿ ರೂಪುಗೊಂಡಿದೆ. ಅವಿಭಜಿತ ದ.ಕ. ಜಿಲ್ಲೆಯನ್ನು ಉಡುಪಿ ಜಿಲ್ಲೆ ಮತ್ತು ದ.ಕ. ಜಿಲ್ಲೆಯೆಂದು ಪ್ರತ್ಯೇಕಿಸಿ ಈ ಅಧ್ಯಾಯದಲ್ಲಿ ತುಲನಾತ್ಮಕ ವಿಶ್ಲೇಷಣೆ ನಡೆಸಲಾಗಿದೆ. ದ.ಕ. ಜಿಲ್ಲೆಯಲ್ಲಿ ಐದು ತಾಲೂಕುಗಳಿದ್ದು ३೫೧ ಜನವಸತಿ ಇರುವ ಗ್ರಾಮಗಳು ಮತ್ತು ೧೫ ಪಟ್ಟಣ ಪ್ರದೇಶಗಳಿವೆ.[೧] ಉಡುಪಿ ಜಿಲ್ಲೆಯಲ್ಲಿ ३ ತಾಲೂಕುಗಳಿದ್ದು ೨೪೮ ಗ್ರಾಮಗಳು ಮತ್ತು ೬ ಪಟ್ಟಣ ಪ್ರದೇಶಗಳಿವೆ.[೨] ಇವೆರಡು ಜಿಲ್ಲೆಗಳಲ್ಲಿ ಮಲ್ಲಿಗೆ ಬೆಳೆಯುವ ಪ್ರದೇಶಗಳನ್ನು ತೋಟಗಾರಿಕಾ ಇಲಾಖೆಯ ಸಹಾಯದಿಂದ ಗುರುತಿಸಿಕೊಂಡು ಎಲ್ಲಾ ಸಮುದಾಯಗಳಿಗೆ ಪ್ರಾತಿನಿಧ್ಯವಿರುವಂತೆ ವಕ್ತೃಗಳನ್ನು ಆರಿಸಿ ಉದ್ದೇಶಿತ ಪ್ರಶ್ನೆಗಳಿಗೆ ಅದರಿಂದ ಉತ್ತರಗಳನ್ನು ಪಡೆದು ದೊರೆತ ಮೂಲ ದತ್ತಾಂಶಗಳನ್ನು ಕೋಷ್ಟಕ ರೂಪಕ್ಕೆ ಮತ್ತು ಚಿತ್ರಗಳ ರೂಪಕ್ಕೆ ಪರಿವರ್ತಿಸಿ ಎರಡು ಜಿಲ್ಲೆಗಳ ಮಲ್ಲಿಗೆ ಬೆಳೆಗಾರರ ಸಮಸ್ಯೆಗಳನ್ನು ವಿಶ್ಲೇಷಿಸಲಾಗಿದೆ. ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ಮಲ್ಲಿಗೆ ರಾಜಧಾನಿ ಎನಿಸಿದ ಶಂಕರಪುರ ಈಗ ಉಡುಪಿ ಜಿಲ್ಲೆಗೆ ಸೇರಿ ಹೋಗಿದೆ. ಆದರೆ ಮಲ್ಲಿಗೆ ಬೆಳೆಯುವ ಪ್ರದೇಶ ಮತ್ತು ಮಲ್ಲಿಗೆಯಿಂದ ಬರುವ ಆದಾಯದ ದೃಷ್ಟಿಯಿಂದ ದಕ್ಷಿಣ ಕನ್ನಡದ ಪ್ರಗತಿ ಉಡುಪಿ ಜಿಲ್ಲೆಯದಕ್ಕಿಂತ ಹೆಚ್ಚಿನದಾಗಿದೆ. ಇದಕ್ಕೆ ಕಾರಣವನ್ನು ಹುಡುಕುವ ಪ್ರಯತ್ನವನ್ನು ಏಳನೇ ಅಧ್ಯಾಯದಲ್ಲಿ ಮಾಡಲಾಗಿದೆ.

## ೫.೧ ವಕ್ತೃಗಳ ಭೌಗೋಳಿಕತೆ ಮತ್ತು ಸಾಮಾಜಿಕ ವಿವರಗಳು

ಬೆಳೆಗಾರರ ಸಮಸ್ಯೆಗಳನ್ನು ಅಧ್ಯಯನ ಮಾಡಲು ಎರಡು ಜಿಲ್ಲೆಗಳಿಂದ ಒಟ್ಟು ೧೨೫ ಮಂದಿ ವಕ್ತೃಗಳನ್ನು ಆರಿಸಲಾಗಿದೆ. ಅವರ ಪ್ರಾದೇಶಿಕ ವಿವರಗಳನ್ನು ಕೋಷ್ಟಕ ೫.೧ರಲ್ಲಿ ತೋರಿಸಲಾಗಿದೆ. ಪೂರ್ವೋದ್ದೇಶಿತ ಪ್ರಶ್ನೆಗಳ ಸಹಿತ ಉಡುಪಿ ಜಿಲ್ಲೆಯಲ್ಲಿ ೪೭ ಬೆಳೆಗಾರರನ್ನು ಭೇಟಿ ಮಾಡಲಾಗಿದೆ. ಈ ಜಿಲ್ಲೆಯಲ್ಲಿ ಅತ್ಯಧಿಕ ಮಲ್ಲಿಗೆ ಬೆಳೆ ಬೆಳೆಯುವ ತಾಲೂಕು ಎಂದರೆ ಉಡುಪಿ. ತೋಟಗಾರಿಕಾ ಇಲಾಖೆಯಿಂದ ಈ ಮಾಹಿತಿ ಪಡೆದು ಉಡುಪಿ ತಾಲೂಕಿನಲ್ಲಿ ३೦ ಬೆಳೆಗಾರರನ್ನು ಭೇಟಿಯಾಗಿ ಉತ್ತರಗಳನ್ನು ಪಡಕೊಳ್ಳಲಾಗಿದೆ.

ವಕ್ತೃಗಳ ಪ್ರಮಾಣದಲ್ಲಿ ಉಡುಪಿ ತಾಲೂಕಿನಿಂದ ಶೇ. ೬೩.೮ ಕಾರ್ಕಳದಿಂದ ಶೇ. ೨೧.೩ ಮತ್ತು ಕುಂದಾಪುರದಿಂದ ಶೇ. ೧೪.೯ ವಕ್ತೃಗಳನ್ನು ಆರಿಸಿಕೊಳ್ಳಲಾಗಿದೆ. ಕುಂದಾಪುರ ಮತ್ತು ಕಾರ್ಕಳ ಹೆಚ್ಚು ಅರಣ್ಯ ಪ್ರದೇಶದಿಂದ ಕೂಡಿದ್ದು ಮಲ್ಲಿಗೆ ಬೆಳೆಗೆ ಸೂಕ್ತವಲ್ಲದ ಪ್ರದೇಶಗಳನ್ನು ಹೊಂದಿರುವುದು ಉಡುಪಿ ತಾಲೂಕಿನಲ್ಲಿ ಮಲ್ಲಿಗೆ ಬೆಳೆ ಹೆಚ್ಚು ಕೇಂದ್ರೀಕೃತವಾಗಲು ಕಾರಣವೆಂಬುದನ್ನು ಅಧ್ಯಯನ ಕಾಲದಲ್ಲಿ ಕಂಡುಕೊಳ್ಳಲಾಗಿದೆ. ಇದನ್ನು ತೋಟಗಾರಿಕಾ ಇಲಾಖೆಯ ತಜ್ಞರು ಕೂಡಾ ಸಮರ್ಥಿಸಿದ್ದಾರೆ.

**ಕೋಷ್ಟಕ ೫.೧**

**ವಕ್ತೃಗಳ ಭೌಗೋಳಿಕತೆ**

| ತಾಲೂಕು | ವಕ್ತೃಗಳ ಸಂಖ್ಯೆ | ಶೇಕಡಾ |
|---|---|---|
| ಕುಂದಾಪುರ | ೦೭ | ೧೪.೯ |
| ಉಡುಪಿ | ೩೦ | ೬೩.೮ |
| ಕಾರ್ಕಳ | ೧೦ | ೨೧.೩ |
| **ಉಡುಪಿ ಜಿಲ್ಲೆ** | **೪೭** | ೧೦೦ |
| ಮಂಗಳೂರು | ೧೧ | ೧೪.೧ |
| ಬಂಟ್ವಾಳ | ೨೦ | ೨೫.೬ |
| ಬೆಳ್ತಂಗಡಿ | ೨೫ | ೩೨.೧ |
| ಪುತ್ತೂರು | ೧೨ | ೧೫.೪ |
| ಸುಳ್ಯ | ೧೦ | ೧೨.೮ |
| **ದಕ್ಷಿಣ ಕನ್ನಡ ಜಿಲ್ಲೆ** | ೭೮ | ೧೦೦ |
| **ಎರಡು ಜಿಲ್ಲೆ** | ೧೨೫ | ೧೦೦ |

**ಆಧಾರ:ಅಧ್ಯಯನದ ಪ್ರಾಥಮಿಕ ಸಮೀಕ್ಷಾ ಅಂಕಿ ಅಂಶಗಳು ೨೦೦೯-೧೦**

ದಕ್ಷಿಣ ಕನ್ನಡ ಜಿಲ್ಲೆಯಿಂದ ಒಟ್ಟು ೭೮ ಮಂದಿ ವಕ್ತೃಗಳನ್ನು ಸಂದರ್ಶಿಸಲಾಗಿದೆ. ಈ ಜಿಲ್ಲೆಯ ೫ ತಾಲೂಕುಗಳಲ್ಲಿ ಬೆಳ್ತಂಗಡಿ ಮತ್ತು ಬಂಟ್ವಾಳ ಅತ್ಯಧಿಕ ಮಲ್ಲಿಗೆ ಬೆಳೆಯುವ ಪ್ರದೇಶಗಳಾದುದರಿಂದ ಇವುಗಳಿಗೆ ಅನುಕ್ರಮವಾಗಿ ಶೇ. ೩೧.೮ ಮತ್ತು ಶೇ. ೨೫.೬

ಪ್ರಾತಿನಿಧ್ಯ ನೀಡಲಾಗಿದೆ. ಪುತ್ತೂರಿಗೆ ಶೇ. ೧೫.೪, ಮಂಗಳೂರಿಗೆ ಶೇ.೧೪.೧ ಮತ್ತು ಸುಳ್ಯ ತಾಲೂಕಿಗೆ ಶೇ. ೧೨.೮ ಪ್ರಾತಿನಿಧ್ಯ ಕೊಡಲಾಗಿದೆ. ಇದಕ್ಕೆ ಆಯಾ ತಾಲೂಕುಗಳಲ್ಲಿ ಮಲ್ಲಿಗೆ ಬೆಳೆಗೆ ಬಳಕೆಯಾಗುವ ಭೂ ಪ್ರದೇಶವನ್ನು ಆಧಾರವಾಗಿ ಇರಿಸಿಕೊಳ್ಳಲಾಗಿದೆ. ಈ ಆಧಾರಕ್ಕೆ ತೋಟಗಾರಿಕಾ ಇಲಾಖೆ ಒದಗಿಸಿದ ಮಾಹಿತಿ ಮೂಲ ಆಧಾರವಾಗಿದೆ.[೩]

ವಕ್ತೃಗಳನ್ನು ಆರಿಸುವಾಗ ವಿವಿಧ ಸಮುದಾಯಗಳಿಗೆ ಸಾಕಷ್ಟು ಪ್ರಾತಿನಿಧ್ಯ ದೊರೆಯುವಂತೆ ನೋಡಿಕೊಳಲಾಗಿದೆ. (ಕೋಷ್ಟಕ ೫.೨)

ಕೋಷ್ಟಕ: ೫.೨

**ವಕ್ತೃಗಳ ಸಮುದಾಯ**

| ಧರ್ಮ | ಉಡುಪಿ ಜಿಲ್ಲೆ | | ದಕ್ಷಿಣ ಕನ್ನಡ ಜಿಲ್ಲೆ | |
|---|---|---|---|---|
| | ಸಂಖ್ಯೆ | ಶೇಕಡಾ | ಸಂಖ್ಯೆ | ಶೇಕಡಾ |
| ಕ್ರಿಶ್ಚಿಯನ್ | ೨೨ | ೪೬.೮ | ೩೧ | ೩೯.೭ |
| ಮುಸ್ಲಿಂ | ೦೨ | ೪.೨ | ೦೧ | ೧.೩ |
| ಹಿಂದು | ೨೦ | ೪೨.೬ | ೪೨ | ೫೩.೯ |
| ಜೈನ್ | ೩ | ೬.೪ | ೦೪ | ೫.೧ |
| **ಒಟ್ಟು** | **೪೭** | **೧೦೦** | **೭೮** | **೧೦೦** |

**ಆಧಾರ:ಅಧ್ಯಯನದ ಪ್ರಾಥಮಿಕ ಸಮೀಕ್ಷಾ ಅಂಕಿ ಅಂಶಗಳು ೨೦೦೯-೧೦**

ಮಲ್ಲಿಗೆ ಬೆಳೆಯಿಂದ ತಕ್ಷಣ ಕರಾವಳಿ ಜಿಲ್ಲೆಯ ಜನರಿಗೆ ನೆನಪಾಗುವುದು ಕ್ರಿಶ್ಚಿಯನ್ ಸಮುದಾಯ. ಇದಕ್ಕೆ ಶಂಕರಪುರದಲ್ಲಿ ಮಲ್ಲಿಗೆ ಬೆಳೆಗಾರರಲ್ಲಿ ಶೇಕಡಾ ೭೫ ಕ್ಕಿಂತಲೂ ಅಧಿಕ ಮಂದಿ ಕ್ರಿಶ್ಚಿಯನ್ನರಾಗಿರುವುದು ಕಾರಣ. ಅವಿಭಜಿತ ದ.ಕ. ಜಿಲ್ಲೆ ಎರಡು ಭಾಗಗಳಾಗಿ ವಿಭಜನೆ ಹೊಂದಿದ ಬಳಿಕ ಉಡುಪಿ ಜಿಲ್ಲೆಯ ಮಲ್ಲಿಗೆ ಬೆಳೆಗಾರರಲ್ಲಿ ಕ್ರಿಶ್ಚಿಯನರದೇ ಬಹುಮತವಾಯಿತು[೪] ಆದುದರಿಂದ ಉಡುಪಿ ಜಿಲ್ಲೆಯ ಮಲ್ಲಿಗೆ ಬೆಳೆಗಾರರಲ್ಲಿ ಶೇ. ೪೬.೮ರಷ್ಟು ಪ್ರಾತಿನಿಧ್ಯವನ್ನು ಕ್ರಿಶ್ಚಿಯನರಿಗೆ ನೀಡಲಾಗಿದೆ. ಹಿಂದುಗಳಿಗೆ ಶೇ. ೪೨.೬ ರಷ್ಟು ಪ್ರಾತಿನಿಧ್ಯ ಕೊಡಲಾಗಿದೆ. ಕಾರ್ಕಳ ತಾಲೂಕಿನಲ್ಲಿ ತುಂಬ ಪ್ರಭಲವಾಗಿರುವ ಜೈನ ಸಮುದಾಯದವರು ಮಲ್ಲಿಗೆ ಬೆಳೆಯ ಲಾಭದಾಯಕತೆಯನ್ನು ಬಹಳ ಹಿಂದೆಯೇ ಕಂಡುಕೊಂಡಿದ್ದಾರೆ. ಆದುದರಿಂದ ಅವರಿಗೆ ಶೇ ೬.೪ ರಷ್ಟು ಪ್ರಾತಿನಿಧ್ಯ ನೀಡಲಾಗಿದೆ. ಸಾಮಾನ್ಯವಾಗಿ ಮುಸ್ಲಿಮರು ಮಲ್ಲಿಗೆ ಮಾರಾಟಗಾರರಾಗಿರುತ್ತಾರೆ. ಆದರೆ

ಉಡುಪಿ ಜಿಲ್ಲೆಯಲ್ಲಿ ಮಲ್ಲಿಗೆ ಬೆಳೆಯುವ ಮುಸ್ಲಿಮರು ಇದ್ದು ಈ ಕಾರಣದಿಂದ ಮುಸ್ಲಿಮರಿಗೆ ಶೇ.೪.೨ ರಷ್ಟು ಪ್ರಾತಿನಿಧ್ಯ ನೀಡಲಾಗಿದೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಲ್ಲಿಗೆ ಬೆಳೆಯುವುದರಲ್ಲಿ ಹಿಂದುಗಳ ಸಂಖ್ಯೆ ಅಧಿಕ. ಈ ಕಾರಣಕ್ಕಾಗಿ ಶೇ. ೫೩.೯ ರಷ್ಟು ಪ್ರಾತಿನಿಧ್ಯವನ್ನು ಹಿಂದುಗಳಿಗೆ ನೀಡಲಾಗಿದೆ. ಆ ಬಳಿಕಿನ ಸ್ಥಾನವನ್ನು ಕ್ರಿಶ್ಚಿಯನರು ಪಡೆಯುತ್ತಾರೆ. ಹಾಗಾಗಿ ಅವರಿಗೆ ಶೇ. ೩೯.೭ ರಷ್ಟು ಪ್ರಾತಿನಿಧ್ಯ ಕೊಡಲಾಗಿದೆ. ಮೂಡಬಿದಿರೆ, ವೇಣೂರು, ನಾರಾವಿ ಇತ್ಯಾದಿ ಪ್ರದೇಶಗಳಲ್ಲಿ ಕೇಂದ್ರೀಕರಣಗೊಂಡಿರುವ ಜೈನ ಸಮುದಾಯದವರು ಮಲ್ಲಿಗೆ ಬೆಳೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇದು ಅವರಿಗೆ ಶೇ. ೫.೧ ರಷ್ಟು ಪ್ರಾತಿನಿಧ್ಯ ನೀಡಲು ಕಾರಣವಾಗಿದೆ. ಉಡುಪಿ ಜಿಲ್ಲೆಗೆ ಹೋಲಿಸಿದರೆ ದಕ್ಷಿಣ ಕನ್ನಡ ಜಿಲ್ಲೆಯ ಮುಸ್ಲಿಮರಲ್ಲಿ ಮಲ್ಲಿಗೆ ಬೆಳೆಯಲ್ಲಿ ತೊಡಗಿಸಿಕೊಂಡಿರುವವರ ಪ್ರಮಾಣ ಕಡಿಮೆ. ಈ ಕಾರಣದಿಂದಾಗಿ ಅವರಿಗೆ ಕೇವಲ ಶೇ. ೧.೩ ರಷ್ಟು ಪ್ರಾತಿನಿಧ್ಯ ನೀಡಲಾಗಿದೆ.

ಮಲ್ಲಿಗೆ ಬೆಳೆಗಾರರು ವಿವಿಧ ವಯೋಮಾನಕ್ಕೆ ಸೇರಿದವರಾಗಿರುತ್ತಾರೆ. ಕ್ಷೇತ್ರ ಅಧ್ಯಯನಕ್ಕೆ ಆಯ್ಕೆ ಮಾಡಿದ ವಕ್ತೃಗಳ ವಯೋಮಟ್ಟವನ್ನು ಕೋಷ್ಟಕ ೫.೩ ತೋರಿಸುತ್ತದೆ. ಮಲ್ಲಿಗೆ ಬೆಳೆಗಾರರಲ್ಲಿ ಬಹುತೇಕರು ೩೧ ರಿಂದ ೫೦ರ ವಯೋಮಾನದವರು ಆದುದರಿಂದ ಸಹಜವಾಗಿ ಅವರಿಗೆ ಹೆಚ್ಚು ಪ್ರಾತಿನಿಧ್ಯ ನೀಡಲಾಗಿದೆ. ಉಡುಪಿ ಜಿಲ್ಲೆಯಲ್ಲಿ ೩೧ – ೪೦ ರ ವಯೋಮಾನದವರಿಗೆ ಶೇ. ೩೮.೩ ರಷ್ಟು ಮತ್ತು ದಕ್ಷಿಣ ಕನ್ನಡ ಶೇ. ೩೯.೮ ರಷ್ಟು ಪ್ರಾತಿನಿಧ್ಯಕೊಡಲಾಗಿದೆ. ೪೧ – ೫೦ ರ ವಯೋಮಾನದವರಲ್ಲಿ ಉಡುಪಿ ಜಿಲ್ಲೆಯಲ್ಲಿ ಶೇ. ೩೬.೨ ರಷ್ಟು ವಕ್ತೃಗಳನ್ನು ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶೇ. ೩೪.೬ ರಷ್ಟು ವಕ್ತೃಗಳನ್ನು ಆರಿಸಿಕೊಳ್ಳಲಾಗಿದೆ. ೫೧ – ೬೦ ರ ವಯೋಮಾನದ ವಕ್ತೃಗಳ ಪ್ರಮಾಣ ಉಡುಪಿ ಜಿಲ್ಲೆಯಿಂದ ಶೇ. ೧೪.೯ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಿಂದ ಶೇ. ೧೪.೧. ಎರಡೂ ಜಿಲ್ಲೆಗಳಲ್ಲಿ ೭೧ ಕ್ಕಿಂತ ಹೆಚ್ಚಿನ ಪ್ರಾಯದವರನ್ನು ಮತ್ತು ೨೦ಕ್ಕಿಂತ ಕಡಿಮೆ ವರ್ಷದವರನ್ನು ವಕ್ತೃಗಳಾಗಿ ಆರಿಸಿಕೊಂಡಿಲ್ಲ. ಅವರು ಪೂರ್ಣ ಪ್ರಮಾಣದಲ್ಲಿ ಮಲ್ಲಿಗೆ ಕೃಷಿಯಲ್ಲಿ ತೊಡಗಿಸಿಕೊಳ್ಳದಿರುವುದು ಇದಕ್ಕೆ ಕಾರಣ. ಆದರೆ ಮಲ್ಲಿಗೆ ಕೃಷಿ ಒಂದು ಕುಟುಂಬ ವೃತ್ತಿಯಾಗಿರುವುದರಿಂದ ಎಲ್ಲಾ ವಯೋಮಾನದವರು ತಮ್ಮ ಅವಕಾಶ ಮತ್ತು ಸಾಮರ್ಥ್ಯಕ್ಕನುಗುಣವಾಗಿ ಮಲ್ಲಿಗೆ ಕೃಷಿಗೆ ತಮ್ಮ ಕೊಡುಗೆಯನ್ನು ನೀಡುತ್ತಿದ್ದಾರೆ.[೫]

## ಕೋಷ್ಟಕ ೫.೩

## ವಕ್ತೃಗಳ ವಯೋಮಟ್ಟ

| ವಯೋಶ್ರೇಣಿ | ಉಡುಪಿ ಜಿಲ್ಲೆ | | ದಕ್ಷಿಣ ಕನ್ನಡ ಜಿಲ್ಲೆ | |
|---|---|---|---|---|
| | ಸಂಖ್ಯೆ | ಶೇಕಡಾ | ಸಂಖ್ಯೆ | ಶೇಕಡಾ |
| ೧೫ – ೨೦ | – | – | – | – |
| ೨೧ – ೩೦ | ೩ | ೬.೪ | ೫ | ೬.೪ |
| ೩೧ – ೪೦ | ೧೮ | ೩೮.೩ | ೩೧ | ೩೯.೮ |
| ೪೧ – ೫೦ | ೧೭ | ೩೬.೨ | ೨೭ | ೩೪.೬ |
| ೫೧ – ೬೦ | ೭ | ೧೪.೯ | ೧೧ | ೧೪.೧ |
| ೬೧ – ೭೦ | ೨ | ೪.೨ | ೦೪ | ೫.೧ |
| ೭೧ ಕ್ಕಿಂತ ಹೆಚ್ಚು | - | - | - | - |
| ಒಟ್ಟು | ೪೭ | ೧೦೦ | ೭೮ | ೧೦೦ |

ಆಧಾರ:ಅಧ್ಯಯನದ ಪ್ರಾಥಮಿಕ ಸಮೀಕ್ಷಾ ಅಂಕಿ ಅಂಶಗಳು ೨೦೦೯–೧೦

೬೦ಕ್ಕಿಂತ ಹೆಚ್ಚು ವಯೋಮಾನದವರು ಮಲ್ಲಿಗೆ ಕೃಷಿಯಲ್ಲಿ ಬಹಳ ವಿರಳವಾಗಿ ಕಂಡುಬರುತ್ತಾರೆ. ಈ ಕಾರಣಕ್ಕಾಗಿ ಈ ವಯೋಮಾನದ ಶೇ. ೪.೨ ರಷ್ಟು ವಕ್ತೃಗಳನ್ನು ಉಡುಪಿ ಜಿಲ್ಲೆಯಿಂದ ಮತ್ತು ಶೇ.೫.೧ ರಷ್ಟು ವಕ್ತೃಗಳನ್ನು ದಕ್ಷಿಣ ಕನ್ನಡ ಜಿಲ್ಲೆಯಿಂದ ಅಧ್ಯಯನಕ್ಕಾಗಿ ಆರಿಸಿಕೊಳ್ಳಲಾಗಿದೆ. ೨೧ ರಿಂದ ೩೦ ವರ್ಷಗಳ ವರೆಗಿನ ತರುಣ ತರುಣಿಯರಲ್ಲಿ ಸಾಕಷ್ಟು ಮಂದಿ ಮಲ್ಲಿಗೆ ಕೃಷಿಯಲ್ಲಿ ತೊಡಗಿಕೊಂಡಿರುವುದು ಅಧ್ಯಯನ ಕಾಲದಲ್ಲಿ ಕಂಡು ಬಂದಿರುತ್ತದೆ. ದಕ್ಷಿಣ ಕನ್ನಡ ಜಿಲ್ಲೆಯಿಂದ ಐದು ಮಂದಿಯನ್ನು ಉಡುಪಿ ಜಿಲ್ಲೆಯಿಂದ ಮೂರು ಜನರನ್ನು ಈ ಗುಂಪಿನಿಂದ ಅಧ್ಯಯನಕ್ಕಾಗಿ ಆರಿಸಿಕೊಳ್ಳಲಾಗಿದೆ. ಮಲ್ಲಿಗೆ ಬೆಳೆಗಾರರಲ್ಲಿ ಅನಕ್ಷರಸ್ಥರು ಇದ್ದಾರೆ; ಪದವಿ ಪಡೆದವರು ಇದ್ದಾರೆ. ಅನಕ್ಷರಸ್ಥರಲ್ಲಿ ಎರಡು ಜಿಲ್ಲೆಗಳಿಂದ ಶೇ. ೬೪ ರಷ್ಟು ಮಂದಿಗಳನ್ನು ವಕ್ತೃಗಳಾಗಿ ಆರಿಸಿಕೊಳ್ಳಲಾಗಿದೆ. ಅಧ್ಯಯನಕ್ಕಾಗಿ ಆರಿಸಿಕೊಂಡ ೧೨೫ ಮಂದಿಯಲ್ಲಿ ೧ ರಿಂದ ೫ರ ವರೆಗಿನ ಶಿಕ್ಷಣ ಮಟ್ಟದವರು ಉಡುಪಿ ಜಿಲ್ಲೆಯಲ್ಲಿ ಶೇ. ೧೨.೮ ಮತ್ತು ದ.ಕ. ಜಿಲ್ಲೆಯಲ್ಲಿ ಶೇ. ೫.೧., ೬

೮ರಿಂದ ೮ ರ ವರೆಗಿನ ಮಾಧ್ಯಮಿಕ ಶಿಕ್ಷಣ ಪಡೆದವರು ಅನುಕ್ರಮವಾಗಿ ಶೇ. ೨೮.೩ ಮತ್ತು ಶೇ.೧೫.೪., ೯ ರಿಂದ ೧೦ ರ ವರೆಗಿನ ಪ್ರೌಢ ಶಿಕ್ಷಣ ಪಡೆದವರು ಅನುಕ್ರಮವಾಗಿ ಶೇ. ೨೯.೬ ಮತ್ತು ಶೇ.೩೯.೭, ಪಿ.ಯು.ಸಿ ಹಂತದ ಶಿಕ್ಷಣ ಪಡೆದವರು ಉಡುಪಿ ಜಿಲ್ಲೆಯಲ್ಲಿ ಶೇ. ೨೧.೩ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶೇ. ೨೪.೪. ಅಧ್ಯಯನಕ್ಕಾಗಿ ಉಡುಪಿ ಜಿಲ್ಲೆಯಿಂದ ಶೇ.೪.೩ ಮಂದಿ ಪದವೀಧರರನ್ನು ಮತ್ತು ಶೇ.೫.೧ ದಕ್ಷಿಣ ಕನ್ನಡ ಜಿಲ್ಲೆಯ ಪದವೀಧರರನ್ನು ಆರಿಸಿಕೊಳ್ಳಲಾಗಿದೆ.

ಕೋಷ್ಟಕ ೫.೪

## ವಕ್ತೃಗಳ ಶಿಕ್ಷಣ ಮಟ್ಟ

| ಶಿಕ್ಷಣ | ಉಡುಪಿ ಜಿಲ್ಲೆ | | ದಕ್ಷಿಣ ಕನ್ನಡ ಜಿಲ್ಲೆ | |
|---|---|---|---|---|
| | ಸಂಖ್ಯೆ | ಶೇಕಡಾ | ಸಂಖ್ಯೆ | ಶೇಕಡಾ |
| ಅನಕ್ಷರಸ್ಥರು | ೩ | ೬.೪ | ೫ | ೬.೪ |
| ೧ ರಿಂದ ೫ | ೬ | ೧೨.೮ | ೪ | ೫.೧ |
| ೭ ರಿಂದ ೮ | ೧೦ | ೨೧.೩ | ೧೨ | ೧೫.೪ |
| ೯ ರಿಂದ ೧೦ | ೧೪ | ೨೯.೬ | ೩೧ | ೩೯.೭ |
| ಪಿ.ಯು.ಸಿ | ೧೦ | ೨೧.೩ | ೧೯ | ೨೪.೪ |
| ಪದವಿ | ೨ | ೪.೩ | ೪ | ೫.೧ |
| ಸ್ನಾತಕೋತ್ತರ | – | – | – | – |
| ಇತರ | ೨ | ೪.೩ | ೩ | ೩.೯ |
| **ಒಟ್ಟು** | **೪೭** | **೧೦೦** | **೭೮** | **೧೦೦** |

**ಆಧಾರ:ಅಧ್ಯಯನದ ಪ್ರಾಥಮಿಕ ಸಮೀಕ್ಷಾ ಅಂಕಿ ಅಂಶಗಳು ೨೦೦೯–೧೦**

ಈ ವಿಶ್ಲೇಷಣೆಯನ್ನು ಗಮನಿಸಿದಾಗ ವಕ್ತೃಗಳಲ್ಲಿ ಅತ್ಯಧಿಕ ಮಂದಿ ೯ ರಿಂದ ೧೦ರ ವರೆಗಿನ ಹಂತದ ಶಿಕ್ಷಣ ಪಡೆದವರು. ಈ ಹಂತಕ್ಕೆ ಸೇರಿದ ವಕ್ತೃಗಳ ಸರಾಸರಿ ಪ್ರಮಾಣ ಶೇ.೩೪.೬೫. ಪಿ.ಯು.ಸಿ ಹಂತದ ಬೆಳೆಗಾರರು ಎರಡನೇ ಸ್ಥಾನದಲ್ಲಿದ್ದಾರೆ. ಇವರ ಸರಾಸರಿ ಪ್ರಮಾಣ ಶೇ. ೨೨.೮೫. ಮೂರನೇ ಸ್ಥಾನದಲ್ಲಿರುವ ೬ ರಿಂದ ೮ರ ಹಂತದ ವಕ್ತೃಗಳ ಸರಾಸರಿ ಪ್ರಮಾಣ ಶೇ.೧೮.೩೫. ಆದುದರಿಂದ ಮಲ್ಲಿಗೆ ಬೆಳೆಗಾರರಲ್ಲಿ ಬಹುತೇಕರು ೬ ರಿಂದ ಪಿ.ಯು.ಸಿ ಹಂತದವರೆಗೆ ಶಿಕ್ಷಣ ಪಡೆದವರು ಎಂಬ ತೀರ್ಮಾನಕ್ಕೆ ಬರಬಹುದು. ಒಟ್ಟು ವಕ್ತೃಗಳಲ್ಲಿ ಇವರ ಪ್ರಮಾಣ ಶೇ. ೭೯.೫. ಒಟ್ಟು ವಕ್ತೃಗಳಲ್ಲಿ ಇವರ

ಪ್ರಮಾಣ ಮುಕ್ಕಾಲು ಭಾಗಕ್ಕಿಂತ ಅಧಿಕ ಎನ್ನುವುದು ಬಹಳ ಮಹತ್ವದ ವಿಷಯವಾಗಿದೆ. ಇದು ಯಾವುದೇ ಮಲ್ಲಿಗೆ ಬೆಳೆಯ ಆಧುನಿಕ ಶಿಕ್ಷಣವನ್ನು ಇತರರಿಗೆ ಸುಲಭವಾಗಿ ನೀಡಲು ಸಾಧ್ಯವಿದೆ ಎನ್ನುವುದಕ್ಕೆ ದಿಕ್ಸೂಚಿಯಾಗಿದೆ.

## ೫.೨ ಮಲ್ಲಿಗೆ ಬೆಳೆಯ ಪ್ರದೇಶ ಮತ್ತು ಮೂಲ ಸರಂಜಾಮುಗಳು

ವಕ್ಕಗಳ ಕುಟುಂಬದವರ ಪೈಕಿ ಎಷ್ಟು ಮಂದಿ ಮಲ್ಲಿಗೆ ಕೃಷಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ ಎನ್ನುವುದು ಬಹಳ ಕುತೂಹಲಕಾರಿಯಾದ ಅಧ್ಯಯನವಾಗಿದೆ. ಉಡುಪಿ ಜಿಲ್ಲೆಯ ವಕ್ಕಗಳ ಕುಟುಂಬದವರ ಪೈಕಿ ಶೇ.೩೮.೭ ಮಂದಿ ಮಲ್ಲಿಗೆ ಕೃಷಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರೆ, ದಕ್ಷಿಣ ಕನ್ನಡ ಜಿಲ್ಲೆಯ ವಕ್ಕಗಳ ಕುಟುಂಬದಲ್ಲಿ ಶೇ. ೨೮.೬ ಮಂದಿ ಮಲ್ಲಿಗೆ ಕೃಷಿಯಲ್ಲಿ ಭಾಗಿಯಾಗಿದ್ದಾರೆ. ಉಡುಪಿ ಜಿಲ್ಲೆಯ ವಕ್ಕಗಳ ಕುಟುಂಬದವರ ಪೈಕಿ ಮಲ್ಲಿಗೆ ಕೃಷಿಯಲ್ಲಿ ಅತ್ಯಧಿಕವಾಗಿ ತೊಡಗಿಸಿಕೊಂಡವರು ಉಡುಪಿ ತಾಲೂಕಿನವರು. ಅವರ ಪ್ರಮಾಣ ಶೇ.೪೪.೧. ಕಾರ್ಕಳ ತಾಲೂಕಿನ ವಕ್ಕಗಳ ಕುಟುಂಬದವರ ಪೈಕಿ ಶೇ. ೩೫.೯ ಮತ್ತು ಕುಂದಾಪುರ ತಾಲೂಕಿನ ವಕ್ಕಗಳ ಕುಟುಂಬದವರ ಪೈಕಿ ಶೇ.೧೯.೧ ರಷ್ಟು ಜನ ತಮ್ಮನ್ನು ಮಲ್ಲಿಗೆ ಕೃಷಿಯಲ್ಲಿ ತೊಡಗಿಸಿಕೊಂಡಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಸುಳ್ಯ ತಾಲೂಕು ಮಲ್ಲಿಗೆ ಬೆಳೆಯಲ್ಲಿ ಕೊನೆಯ ಸ್ಥಾನವನ್ನು ಪಡೆಯುತ್ತವೆ. ಆದರೆ ಈ ತಾಲೂಕಿನ ವಕ್ಕಗಳ ಕುಟುಂಬದವರ ಪೈಕಿ ಶೇ. ೩೨.೮ ಮಂದಿ ತಮ್ಮನ್ನು ಮಲ್ಲಿಗೆ ಕೃಷಿಯಲ್ಲಿ ತೊಡಗಿಸಿಕೊಳ್ಳುವುದರಿಂದ ಈ ತಾಲೂಕು ಕುಟುಂಬದ ಪಾಲ್ಗೊಳ್ಳುವಿಕೆಯ ದೃಷ್ಟಿಯಲ್ಲಿ ಪ್ರಥಮ ಸ್ಥಾನದಲ್ಲಿದೆ. ಎರಡನೇ ಸ್ಥಾನ ಶೇ.೩೦.೬ ರ ಪ್ರಮಾಣದಲ್ಲಿ ಬೆಳ್ತಂಗಡಿ ತಾಲೂಕಿಗೆ ಸಲ್ಲುತ್ತದೆ. ಬಂಟ್ವಾಳ ತಾಲೂಕು (ಶೇ. ೨೮.೯); ಮಂಗಳೂರು ತಾಲೂಕು (ಶೇ. ೨೫.೩) ಮತ್ತು ಪುತ್ತೂರು ತಾಲೂಕು (ಶೇ. ೨೩.೪) ಆ ಬಳಿಕದ ಸ್ಥಾನಗಳನ್ನು ಪಡೆಯುತ್ತವೆ. ಎರಡೂ ಜಿಲ್ಲೆಗಳ ವಕ್ಕಗಳ ಕುಟುಂಬ ಸದಸ್ಯರ ಪೈಕಿ ಶೇ.೩೩.೬೫ ರಷ್ಟು ಮಂದಿ ಮಲ್ಲಿಗೆ ಕೃಷಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಇದು ಮಲ್ಲಿಗೆ ಕೃಷಿಯಲ್ಲಿ ಕುಟುಂಬದ ಪಾಲ್ಗೊಳ್ಳುವಿಕೆ ಪ್ರೋತ್ಸಾಹಕರ ಪ್ರಮಾಣದಲ್ಲಿದೆ ಎನ್ನುವುದಕ್ಕೆ ಸಾಕ್ಷಿಯಾಗಿದೆ.

ಕೋಷ್ಟಕ ೫.೫

## ವಕ್ತೃಗಳ ಕುಟುಂಬ ಸಂಖ್ಯೆ / ಮಲ್ಲಿಗೆ ಕೃಷಿಯಲ್ಲಿ ತೊಡಗಿಸಿಕೊಂಡವರು

| ತಾಲೂಕು | ಕುಟುಂಬದವರ ಸಂಖ್ಯೆ | ಮಲ್ಲಿಗೆ ಕೃಷಿಯಲ್ಲಿ ತೊಡಗಿಸಿಕೊಂಡವರು | ೨ ರ % ವಾಗಿ ೩ |
|---|---|---|---|
| ಕುಂದಾಪುರ | ೪೭ | ೯ | ೧೯.೧ |
| ಉಡುಪಿ | ೨೦೪ | ೯೦ | ೪೪.೧ |
| ಕಾರ್ಕಳ | ೬೪ | ೨೩ | ೩೫.೯ |
| **ಉಡುಪಿ ಜಿಲ್ಲೆ** | **೩೧೫** | **೧೨೨** | **೩೮.೭** |
| ಮಂಗಳೂರು | ೭೧ | ೧೮ | ೨೫.೩ |
| ಬಂಟ್ವಾಳ | ೧೨೮ | ೩೭ | ೨೮.೯ |
| ಬೆಳ್ತಂಗಡಿ | ೧೬೦ | ೪೯ | ೩೦.೬ |
| ಪುತ್ತೂರು | ೭೭ | ೧೮ | ೨೩.೪ |
| ಸುಳ್ಯ | ೬೪ | ೨೧ | ೩೨.೮ |
| **ದಕ್ಷಿಣ ಕನ್ನಡ ಜಿಲ್ಲೆ** | **೫೦೦** | **೧೪೩** | **೨೮.೬** |
| **ಎರಡು ಜಿಲ್ಲೆ** | **೮೧೫** | **೨೬೫** | **೩೩.೬೫** |

**ಆಧಾರ:ಅಧ್ಯಯನದ ಪ್ರಾಥಮಿಕ ಸಮೀಕ್ಷಾ ಅಂಕಿ ಅಂಶಗಳು ೨೦೦೯-೧೦**

ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಲ್ಲಿ ಲಿಂಗಾನುಪಾತ ಮಹಿಳೆಯರ ಪರವಾಗಿರುವುದನ್ನು ಅಧ್ಯಾಯ ೪ ರಲ್ಲಿ ಉಲ್ಲೇಖಿಸಲಾಗಿದೆ. ಮಲ್ಲಿಗೆ ಬೆಳೆಗಾರರ ಕುಟುಂಬದ ಲಿಂಗಾನುಪಾತ ಕೂಡಾ ಮಹಿಳೆಯರ ಪರವಾಗಿರುವುದನ್ನು ಚಿತ್ರ ೫.೧ ತೋರಿಸುತ್ತದೆ.

ಉಡುಪಿ ಜಿಲ್ಲೆಯ ವಕ್ತೃಗಳ ಕುಟುಂಬದ ಲಿಂಗಾನುಪಾತ ೧೦೦೦ : ೧೦೬೨ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ವಕ್ತೃಗಳ ಕುಟುಂಬದ ಲಿಂಗಾನುಪಾತ ೧೦೦೦ : ೧೧೦೧. ಎರಡೂ ಜಿಲ್ಲೆಗಳ ವಕ್ತೃಗಳ ಕುಟುಂಬದ ಲಿಂಗಾನುಪಾತ ೧೦೦೦ : ೧೦೮೮. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಉಡುಪಿ ಜಿಲ್ಲೆಗಿಂತ ಹೆಚ್ಚು ಮಹಿಳೆಯರು ತಮ್ಮನ್ನು ಮಲ್ಲಿಗೆ ಬೆಳೆಯಲ್ಲಿ

ತೊಡಗಿಸಿಕೊಂಡಿದ್ದಾರೆ. ಎರಡೂ ಜಿಲ್ಲೆಗಳಲ್ಲಿ ಪುರುಷರಿಗಿಂತ ಹೆಚ್ಚು ಮಂದಿ ಮಹಿಳೆಯರು ಮಲ್ಲಿಗೆ ಕೃಷಿಯಲ್ಲಿ ತೊಡಗಿಕೊಂಡಿದ್ದಾರೆ. ಗೃಹ ಕೃತ್ಯದೊಡನೆ ಮಲ್ಲಿಗೆ ಬೆಳೆಯನ್ನು ಸುಲಭವಾಗಿ ಕೈಗೊಳ್ಳಲು ಸಾಧ್ಯವಿರುವುದು ಇದಕ್ಕೆ ಕಾರಣ. ಈ ಕಾರಣಕ್ಕಾಗಿ ಮಲ್ಲಿಗೆ ಬೆಳೆಯು ಬೀಡಿ ಕಟ್ಟುವಿಕೆ ಮತ್ತು ಗೇರುಬೀಜ ಕಾರ್ಖಾನೆಯ ಕೆಲಸಕ್ಕಿಂತ ಉತ್ತಮವಾದುದೆಂದು ಪರಿಗಣಿತವಾಗಿದೆ.




**ಚಿತ್ರ ೫.೧ ವಕ್ಕ ಕುಟುಂಬಗಳ ಲಿಂಗಾನುಪಾತ**

## ೫.೨ ಉತ್ಪಾದನಾ ಸಂಬಂಧೀ ಸಮಸ್ಯೆಗಳು

ವಕ್ಕಗಳ ಮಲ್ಲಿಗೆ ಬೆಳೆಯ ಭೂ ವಿಸ್ತೀರ್ಣವನ್ನು ಕೋಷ್ಟಕ ೫.೬ ತೋರಿಸುತ್ತದೆ. ಮಲ್ಲಿಗೆ ಬೆಳೆಗಾರರ ಪೈಕಿ ಶೇ. ೯೦ಕ್ಕಿಂತ ಅಧಿಕ ಮಂದಿ ಅತೀ ಸಣ್ಣ ಹಿಡುವಳಿದಾರರು. ಮಲ್ಲಿಗೆ ಬೆಳೆ ಲಾಭದಾಯಕವಾದುದಾದರೂ ದೊಡ್ಡ ಹಿಡುವಳಿದಾರರು ದೊಡ್ಡ ಪ್ರಮಾಣದಲ್ಲಿ ಮಲ್ಲಿಗೆ ಕೃಷಿಯನ್ನು ಕೈಗೊಂಡಿಲ್ಲ. ಅದನ್ನು ಬಹುತೇಕವಾಗಿ ಕುಟುಂಬ ವೃತ್ತಿಯ (Family Occupation) ರೂಪದಲ್ಲೇ ಉಳಿದುಕೊಂಡಿದೆ. ಉಡುಪಿ ಜಿಲ್ಲೆಯ ವಕ್ಕಗಳು ಹೊಂದಿರುವ ಒಟ್ಟು ಭೂಮಿಯಲ್ಲಿ ಮಲ್ಲಿಗೆಗೆ ಬಳಕೆಯಾಗುವ ಭೂಮಿಯ ಪ್ರಮಾಣ ಶೇ. ೨೩.೪. ಉಡುಪಿ ತಾಲೂಕಿನಲ್ಲಿ ಇದು ಶೇ. ೩೧.೪ ಆದರೆ ಕುಂದಾಪುರದಲ್ಲಿ ಶೇ. ೧೫.೧ ಮತ್ತು ಕಾರ್ಕಳದಲ್ಲಿ ಶೇ. ೧೪.೬ ರಷ್ಟು ಮಾತ್ರ. ಕುಂದಾಪುರ ಮತ್ತು ಕಾರ್ಕಳ ತಾಲೂಕುಗಳಿಗೆ ಹೋಲಿಸಿದರೆ ಉಡುಪಿ ತಾಲೂಕು ಹೆಚ್ಚು ನಗರೀಕರಣ

(Urbanization) ಪ್ರಕ್ರಿಯೆಗೆ ಒಳಗಾಗಿದೆ. ಮಾರುಕಟ್ಟೆಯ ಸಾಮಿಪ್ಯ ಮಲ್ಲಿಗೆ ಬೆಳೆಗಾರರಿಗೆ ಉತ್ತೇಜನಕಾರಿಯಾದ ಅಂಶವಾದುದರಿಂದ ಉಡುಪಿ ತಾಲೂಕು ಇತರ ಎರಡು ತಾಲೂಕುಗಳಿಗಿಂತ ಮುಂದಿರುವಂತೆ ಕಂಡು ಬರುತ್ತದೆ.

**ಕೋಷ್ಟಕ ೫.೬**

**ವಕ್ಕಗಳ ಮಲ್ಲಿಗೆ ಬೆಳೆಯುವ ಭೂಮಿಯ ವಿಸ್ತೀರ್ಣ**

| ತಾಲೂಕು | ವಕ್ಕಗಳ ಹಿಡುವಳಿ (ಎಕರೆ) | ಮಲ್ಲಿಗೆ ಬೆಳೆಯುವ ವಿಸ್ತೀರ್ಣ (ಎಕರೆ) | ಮಲ್ಲಿಗೆ ಬೆಳೆಯ ಪ್ರದೇಶದ (ಶೇ.) |
|---|---|---|---|
| ಕುಂದಾಪುರ | ೫.೯೫ | ೦.೯ | ೧೫.೧ |
| ಉಡುಪಿ | ೧೦.೫ | ೩.೩ | ೩೧.೪ |
| ಕಾರ್ಕಳ | ೪.೧ | ೦.೬ | ೧೪.೬ |
| **ಉಡುಪಿ ಜಿಲ್ಲೆ** | **೨೦.೫೫** | **೪.೮** | **೨೩.೪** |
| ಮಂಗಳೂರು | ೪.೧೮ | ೧.೩೫ | ೩೨.೩ |
| ಬಂಟ್ವಾಳ | ೧೦.೮೦ | ೨.೪ | ೨೨.೨ |
| ಬೆಳ್ತಂಗಡಿ | ೧೬.೨೫ | ೩.೪ | ೨೦.೯ |
| ಪುತ್ತೂರು | ೧೯.೨೫ | ೧.೫ | ೭.೮ |
| ಸುಳ್ಯ | ೧೧.೬೦ | ೧.೬ | ೧೩.೮ |
| **ದ.ಕ. ಜಿಲ್ಲೆ** | **೬೨.೦೮** | **೧೦.೨೫** | **೧೬.೫** |
| **ಎರಡು ಜಿಲ್ಲೆ** | **೮೨.೬೩** | **೧೫.೦೫** | **೧೮.೨** |

ಆಧಾರ:ಅಧ್ಯಯನದ ಪ್ರಾಥಮಿಕ ಸಮೀಕ್ಷಾ ಅಂಕಿ ಅಂಶಗಳು ೨೦೦೯–೧೦

ಇದೇ ಅಂಶವನ್ನು ದಕ್ಷಿಣ ಕನ್ನಡ ಜಿಲ್ಲೆಯಲ್ಲೂ ಗಮನಿಸಬಹುದು. ಈ ಜಿಲ್ಲೆಯಲ್ಲಿ ಅತ್ಯಧಿಕ ಮಲ್ಲಿಗೆ ಬೆಳೆಯುವ ತಾಲೂಕು ಬೆಳ್ತಂಗಡಿ. ಇಲ್ಲಿನ ವಕ್ಕಗಳು ಹೊಂದಿರುವ ಒಟ್ಟು ಭೂಮಿಯಲ್ಲಿ ಶೇ. ೨೦.೯ ಮಲ್ಲಿಗೆ ಕೃಷಿಗೆ ಬಳಕೆಯಾಗುತ್ತದೆ. ಬಂಟ್ವಾಳ ಮಲ್ಲಿಗೆ ಕೃಷಿಯಲ್ಲಿ ಎರಡನೇ ಸ್ಥಾನ ಪಡೆದಿದೆ. ಇಲ್ಲಿನ ವಕ್ಕಗಳ ಒಟ್ಟು ಭೂಮಿಯಲ್ಲಿ ಶೇ. ೨೨.೨ ರಷ್ಟು ಮಲ್ಲಿಗೆ ಬೆಳೆಯ ಪಾಲಾಗಿದೆ. ಈ ಪ್ರಮಾಣ ಸುಳ್ಯದಲ್ಲಿ ಶೇ. ೧೩.೮ ಮತ್ತು ಪುತ್ತೂರಿನಲ್ಲಿ ಶೇ. ೭.೮.

ಆದರೆ ಮಲ್ಲಿಗೆ ಬೆಳೆಯಲ್ಲಿ ದಕ್ಷಿಣ ಕನ್ನಡ ಜಿಲ್ಲೆಯ ಮೂರನೇ ಸ್ಥಾನದಲ್ಲಿರುವ ಮಂಗಳೂರು ತಾಲೂಕಿನ ವಕ್ಕಗಳ ಒಟ್ಟು ಭೂಮಿಯಲ್ಲಿ ಶೇ.೩೨.೩ ಮಲ್ಲಿಗೆ ಬೆಳೆಗೆ ಬಳಕೆಯಾಗುತ್ತಿರುವುದು ಗಮನೀಯ. ಇದಕ್ಕೆ ಮಲ್ಲಿಗೆಗೆ ಮಂಗಳೂರು ತಾಲೂಕಿನಲ್ಲಿ ಹೆಚ್ಚು ಬೇಡಿಕೆ ಇರುವುದು ಕಾರಣವಾಗಿರುತ್ತದೆ. ಈ ವಿಶ್ಲೇಷಣೆಯಿಂದ ನಗರೀಕರಣ ಪ್ರಕ್ರಿಯೆಗೆ ಒಳಗಾದ ಪ್ರದೇಶಗಳಲ್ಲಿ ಮಲ್ಲಿಗೆಗೆ ಹೆಚ್ಚು ಬೇಡಿಕೆ ಇರುವುದು ಮತ್ತು ಅವುಗಳ ಸುತ್ತಮುತ್ತಣ ಪ್ರದೇಶಗಳಲ್ಲಿ ಮಲ್ಲಿಗೆ ಹೆಚ್ಚು ಬೆಳೆಯುತ್ತಿರುವುದು ಕಂಡುಬರುತ್ತದೆ. ನಗರೀಕರಣ ಪ್ರಕ್ರಿಯೆಗೂ ಮಲ್ಲಿಗೆಯ ಬೆಳೆಯುವ ಪ್ರದೇಶದ ಹೆಚ್ಚಳಕ್ಕೂ ನೇರ ಸಂಬಂಧ ಇರುವುದನ್ನು ಈ ವಿಶ್ಲೇಷಣೆ ತಿಳಿಸುತ್ತದೆ. ಇದು ಸರಕಾರ ನೀತಿ ನಿರೂಪಿಸಲು ನೆರವಾಗುವ ಅಂಶವಾಗಿದೆ. ಮಲ್ಲಿಗೆ ಬೆಳೆಯುವ ಪ್ರದೇಶ ಮಲ್ಲಿಗೆ ಮಾರಾಟ ಕೇಂದ್ರಕ್ಕೆ ಸಮೀಪವಿದ್ದರೆ ಸಾಗಾಟ ಮತ್ತು ಕಾಪಿಡುವಿಕೆ ಬಹಳ ಸುಲಭವಾಗಿರುತ್ತದೆ. ಇದು ವೆಚ್ಚವನ್ನು ಕಡಿಮೆ ಮಾಡಿ ಅನುಭೋಗಿಗೆ ಅನುಭೋಗಿಯ ಮಿಗುತೆ ದೊರೆಯುವಂತೆ ಮಾಡುತ್ತದೆ.

ಮಲ್ಲಿಗೆ ಬೆಳೆಯುವ ವಕ್ಕಗಳ ಕೃಷಿ ಭೂಮಿಯ ಮೂಲದ ವಿಶ್ಲೇಷಣೆ ಉತ್ಪಾದನೆ ದೃಷ್ಟಿಯಿಂದ ಬಹಳ ಮುಖ್ಯವಾಗುತ್ತದೆ. ಉಡುಪಿ ಜಿಲ್ಲೆಯ ವಕ್ಕಗಳು ಹೊಂದಿರುವ ಮಲ್ಲಿಗೆ ಭೂಮಿಯಲ್ಲಿ ಶೇಕಡಾ ೭೬.೩೫ ಪಿತ್ರಾರ್ಜಿತವಾಗಿ ಬಂದಿದ್ದು, ಶೇ. ೨೦.೩೨ ಸ್ವಯಾರ್ಜಿತ ಭೂಮಿ ಮತ್ತು ಶೇ. ೩.೩ ಸರಕಾರಿ ಭೂಮಿಯಾಗಿರುತ್ತದೆ. ಕುಂದಾಪುರ ಮತ್ತು ಉಡುಪಿ ತಾಲೂಕುಗಳ ವಕ್ಕಗಳಲ್ಲಿ ಯಾರೂ ಸರಕಾರಿ ಭೂಮಿಯನ್ನು ಹೊಂದಿಲ್ಲ. ಕಾರ್ಕಳ ತಾಲೂಕಿನ ವಕ್ಕಗಳು ಹೊಂದಿರುವ ಭೂಮಿಯಲ್ಲಿ ಶೇ. ೧೦ ಸರಕಾರಿ ಭೂಮಿಯಾಗಿದೆ.

## ಕೋಷ್ಟಕ ೫.೭

## ವಕ್ಕಲಿಗರ ಭೂಮಿಯ ಸಂಯೋಜನೆ

| ತಾಲೂಕು | ಪಿತ್ರಾರ್ಜಿತ (ಶೇ) | ಅಕ್ರಮ/ಸಕ್ರಮ/ ಸರಕಾರಿ (ಶೇ) | ಸ್ವಯಾರ್ಜಿತ (ಶೇ) | ಒಟ್ಟು |
|---|---|---|---|---|
| ಕುಂದಾಪುರ | ೮೫.೭೨ | – | ೧೪.೨೮ | ೧೦೦ |
| ಉಡುಪಿ | ೮೩.೩೪ | – | ೧೬.೬೭ | ೧೦೦ |
| ಕಾರ್ಕಳ | ೬೦.೦ | ೧೦.೦ | ೩೦.೦ | ೧೦೦ |
| **ಉಡುಪಿ ಜಿಲ್ಲೆ** | **೭೬.೩೫** | **೩.೩೩** | **೨೦.೩೧** | **೧೦೦** |
| ಮಂಗಳೂರು | ೮೧.೯ | – | ೧೮.೧ | ೧೦೦ |
| ಬಂಟ್ವಾಳ | ೭೫.೦ | ೫ | ೨೦.೦ | ೧೦೦ |
| ಬೆಳ್ತಂಗಡಿ | ೮೪.೦ | ೪ | ೧೨.೦ | ೧೦೦ |
| ಪುತ್ತೂರು | ೬೬.೭ | – | ೩೩.೩ | ೧೦೦ |
| ಸುಳ್ಯ | ೮೦.೦ | – | ೨೦.೦ | ೧೦೦ |
| **ದ. ಕ. ಜಿಲ್ಲೆ** | **೭೭.೫೨** | **೧.೮** | **೨೦.೬೮** | **೧೦೦** |
| **ಎರಡು ಜಿಲ್ಲೆ** | **೭೬.೯೪** | **೨.೫೬** | **೨೦.೫** | **೧೦೦** |

ಆಧಾರ:ಅಧ್ಯಯನದ ಪ್ರಾಥಮಿಕ ಸಮೀಕ್ಷಾ ಅಂಕಿ ಅಂಶಗಳು ೨೦೦೯–೧೦

ಕುಂದಾಪುರ ತಾಲೂಕಿನ ವಕ್ಕಲಿಗರು ಹೊಂದಿರುವ ಮಲ್ಲಿಗೆ ಕೃಷಿ ಭೂಮಿಯಲ್ಲಿ ಪಿತ್ರಾರ್ಜಿತ ಶೇ. ೮೫.೭೨, ಸ್ವಯಾರ್ಜಿತ ಶೇ. ೧೬.೨೮, ಉಡುಪಿ ತಾಲೂಕಿನ ವಕ್ಕಲಿಗರು ಹೊಂದಿರುವ ಭೂಮಿಯಲ್ಲಿ ಪಿತ್ರಾರ್ಜಿತ ಶೇ. ೮೩.೩೪ ಮತ್ತು ಸ್ವಯಾರ್ಜಿತ ಶೇ. ೧೬.೭೬. ಕಾರ್ಕಳ ತಾಲೂಕಿನ ವಕ್ಕಲಿಗರು ಹೊಂದಿರುವ ಮಲ್ಲಿಗೆ ಕೃಷಿ ಭೂಮಿಯಲ್ಲಿ ಪಿತ್ರಾರ್ಜಿತ ಶೇ. ೬೦, ಮತ್ತು ಸ್ವಯಾರ್ಜಿತ ಶೇ.೩೦. ಉಳಿದದ್ದು ಸರಕಾರಿ ಭೂಮಿಯಾಗಿದೆ.

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ವಕ್ಕಲಿಗರ ಮಲ್ಲಿಗೆ ಬೆಳೆ ಭೂಮಿಯ ಸಂಯೋಜನೆಯನ್ನು ಚಿತ್ರ ೫.೨ ತೋರಿಸುತ್ತದೆ.




**ಚಿತ್ರ: ೫. ೨ ವಕ್ತ್ಯಗಳ ಮಲ್ಲಿಗೆ ಬೆಳೆ ಪ್ರದೇಶದ ಸಂಯೋಜನೆ**

ಈ ಚಿತ್ರದ ಪ್ರಕಾರ ಸುಮಾರು ಮುಕ್ಕಾಲು ಭಾಗ ಮಲ್ಲಿಗೆ ಬೆಳೆಯ ಭೂಮಿ ಪಿತ್ರಾರ್ಜಿತ ಎನ್ನುವುದು ಕಂಡುಬರುತ್ತದೆ. ಈ ಮಾತು ದಕ್ಷಿಣ ಕನ್ನಡ ಜಿಲ್ಲೆಯ ಮಟ್ಟಿಗೂ ಸತ್ಯವಾಗಿದೆ. ಈ ಜಿಲ್ಲೆಯ ಮಲ್ಲಿಗೆ ಬೆಳೆಯುವ ವಕ್ತ್ಯಗಳು ಹೊಂದಿರುವ ಭೂಮಿಯಲ್ಲಿ ಶೇ. ೭೭.೫೨ ಪಿತ್ರಾರ್ಜಿತ, ಶೇ. ೨೦.೬೮ ಸ್ವಯಾರ್ಜಿತ ಮತ್ತು ಶೇ. ೧.೮ ಸರಕಾರಿ ಭೂಮಿಯಾಗಿದೆ. ಮಂಗಳೂರು ತಾಲೂಕಿನ ಮಲ್ಲಿಗೆ ಬೆಳೆಗಾರರ ಪೈಕಿ ಮಲ್ಲಿಗೆ ಬೆಳೆಗಾರರ ಭೂಮಿಯಲ್ಲಿ ಪಿತ್ರಾರ್ಜಿತ ಆಸ್ತಿಯ ಪ್ರಮಾಣ ಶೇ. ೮೧.೯ ಮತ್ತು ಸ್ವಯಾರ್ಜಿತ ಆಸ್ತಿಯ ಪ್ರಮಾಣ ಶೇ. ೧೮.೧, ಬಂಟ್ವಾಳ ತಾಲೂಕಿನ ಮಲ್ಲಿಗೆ ಬೆಳೆಗಾರರ ಮಲ್ಲಿಗೆ ಭೂಮಿಯ ಪ್ರಮಾಣದಲ್ಲಿ ಪಿತ್ರಾರ್ಜಿತ ಆಸ್ತಿಯ ಪ್ರಮಾಣ ಶೇ. ೭೫; ಸ್ವಯಾರ್ಜಿತ ಆಸ್ತಿಯ ಪ್ರಮಾಣ ಶೇ. ೨೦ ಮತ್ತು ಸರಕಾರಿ ಭೂಮಿಯ ಪ್ರಮಾಣ ಶೇ. ೫. ಬೆಳ್ತಂಗಡಿ ತಾಲೂಕಿನಲ್ಲಿ ಈ ಪ್ರಮಾಣ ಅನುಕ್ರಮವಾಗಿ ಶೇ. ೮೪, ಶೇ.೧೨, ಮತ್ತು ಶೇ. ೪. ಪುತ್ತೂರು ಮತ್ತು ಸುಳ್ಯ ತಾಲೂಕುಗಳ ವಕ್ತ್ಯಗಳ ಸರಕಾರಿ ಭೂಮಿಯಲ್ಲಿ ಮಲ್ಲಿಗೆ ಬೆಳೆಯುತ್ತಿಲ್ಲ. ಪುತ್ತೂರು ತಾಲೂಕಿನ ಮಲ್ಲಿಗೆ ಬೆಳೆಗಾರರು ಹೊಂದಿರುವ ಮಲ್ಲಿಗೆ ಕೃಷಿ ಭೂಮಿಯಲ್ಲಿ ಶೇ. ೬೬.೭ ಪಿತ್ರಾರ್ಜಿತವಾದರೆ ಶೇ. ೩೩.೩ ಸ್ವಯಾರ್ಜಿತ. ಸುಳ್ಯ ತಾಲೂಕಿನಲ್ಲಿ ಈ ಪ್ರಮಾಣ ಅನುಕ್ರಮವಾಗಿ ಶೇ. ೮೦ ಮತ್ತು ಶೇ.೨೦.

ವಕ್ಕಲಿಗರ ಭೂಮಿಯ ಸಂಯೋಜನೆಯ ವಿಶ್ಲೇಷಣೆಯು ಕೆಲವು ಗಮನಾರ್ಹ ಅಂಶಗಳನ್ನು ಬಯಲುಗೊಳಿಸುತ್ತದೆ.

- ಸರಕಾರಿ ಭೂಮಿಯನ್ನು ಮಲ್ಲಿಗೆ ಬೆಳೆಸಲು ಬಳಸಿಕೊಂಡವರ ಪ್ರಮಾಣ ಬಹಳ ಕಡಿಮೆ. ಇದಕ್ಕೆ ಲಭ್ಯವಿರುವ ಸರಕಾರಿ ಭೂಮಿ ಮಲ್ಲಿಗೆ ಬೆಳೆಗೆ ಸೂಕ್ತವಲ್ಲದಿರುವಿಕೆ ಕಾರಣವಾಗಿರುತ್ತದೆ.
- ಸ್ವಯಾರ್ಜಿತ ಭೂಮಿಯಲ್ಲಿ ಮಲ್ಲಿಗೆ ಬೆಳೆಯುವವರ ಪ್ರಮಾಣ ಕೂಡ ತುಲನಾತ್ಮಕವಾಗಿ ಬಹಳ ಕಡಿಮೆ. ಹೊಸ ಭೂಮಿ ಹೊಂದಿದವರು ಅದನ್ನು ಬಹುತೇಕವಾಗಿ ಇತರ ಉದ್ದೇಶಗಳಿಗೆ ಬಳಸುತ್ತಾರೆ ಎನ್ನುವುದನ್ನು ಇದು ತಿಳಿಸುತ್ತದೆ.
- ವಕ್ಕಲಿಗರು ಬಹುತೇಕವಾಗಿ ಪಿತ್ರಾರ್ಜಿತ ಆಸ್ತಿಯಲ್ಲಿ ಮಲ್ಲಿಗೆ ಕೃಷಿ ನಡೆಸುತ್ತಿದ್ದಾರೆ. ಪಾರಂಪರಿಕ ಜ್ಞಾನ, ನಷ್ಟವನ್ನು ತಾಳಿಕೊಳ್ಳುವ ಸಾಮರ್ಥ್ಯ ಇದಕ್ಕೆ ಕಾರಣವಾಗಿರುತ್ತದೆ.

ಮಲ್ಲಿಗೆ ಕೃಷಿಯು ಬಹುತೇಕವಾಗಿ ಒಂದು ಕುಟುಂಬ ವೃತ್ತಿಯೆನ್ನುವುದನ್ನು ಈಗಾಗಲೇ ಕಂಡುಕೊಳ್ಳಲಾಗಿದೆ. ಅದನ್ನು ಕೋಷ್ಟಕ ೫.೮ ದೃಢೀಕರಿಸುತ್ತದೆ. ಮಲ್ಲಿಗೆ ಕೃಷಿಯಲ್ಲಿ ಕೂಲಿಕಾರರನ್ನು ನೇಮಿಸಿಕೊಂಡ ವಕ್ಕಲಿಗರ ಪ್ರಮಾಣ ತೀರಾ ಕಡಿಮೆ. ಉಡುಪಿ ಜಿಲ್ಲೆಯಲ್ಲಿ ಉಡುಪಿ ತಾಲೂಕಿನ ವಕ್ಕಲಿಗರ ಪೈಕಿ ಶೇ. ೧೩.೩೩ ಮಂದಿಗಳು ಹೊರಗಿನ ಕೂಲಿಕಾರರನ್ನು ನೇಮಿಸಿಕೊಂಡಿರುತ್ತಾರೆ. ಉಳಿದೆರಡು ತಾಲೂಕುಗಳಲ್ಲಿ ಯಾರೂ ಕೂಲಿಕಾರರನ್ನು ನೇಮಿಸಿಕೊಂಡಿಲ್ಲ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಂಗಳೂರು ತಾಲೂಕಿನ ವಕ್ಕಲಿಗರ ಪೈಕಿ ಶೇ: ೧೮.೧ ಮತ್ತು ಬೆಳ್ತಂಗಡಿ ತಾಲೂಕಿನ ವಕ್ಕಲಿಗರ ಪೈಕಿ ಶೇ. ೧೮.೧ ಮತ್ತು ಬೆಳ್ತಂಗಡಿ ತಾಲೂಕಿನ ವಕ್ಕಲಿಗರ ಪೈಕಿ ಶೇ.೧೬ ಮಂದಿಗಳು ಕೂಲಿಕಾರರ ಸಹಾಯ ಪಡೆದುಕೊಳ್ಳುತ್ತಾರೆ. ಬಂಟ್ವಾಳ, ಪುತ್ತೂರು, ಸುಳ್ಯಗಳಲ್ಲಿ ಇದು ಸಂಪೂರ್ಣವಾಗಿ ಕುಟುಂಬಗಳ ವೃತ್ತಿಯಾಗಿದೆ.

### ಕೋಷ್ಟಕ ೫.೮

## ಮಲ್ಲಿಗೆ ಕೃಷಿಯಲ್ಲಿ ಕೂಲಿಕಾರರ ನೇಮಕಾತಿ

| ತಾಲೂಕು | ಕೂಲಿಕಾರರನ್ನು ನೇಮಿಸಿದವರು (ಶೇಕಡಾ) | ಕೂಲಿಕಾರರನ್ನು ನೇಮಿಸಿದವರು (ಶೇಕಡಾ) | ಒಟ್ಟು |
|---|---|---|---|
| ಕುಂದಾಪುರ | - | ೧೦೦ | ೧೦೦ |
| ಉಡುಪಿ | ೧೩.೩೩ | ೮೬.೬೭ | ೧೦೦ |
| ಕಾರ್ಕಳ | - | ೧೦೦ | ೧೦೦ |
| **ಉಡುಪಿ ಜಿಲ್ಲೆ** | **೪.೪೪** | **೯೫.೫೬** | **೧೦೦** |
| ಮಂಗಳೂರು | ೧೮.೧ | ೮೧.೯ | ೧೦೦ |
| ಬಂಟ್ವಾಳ | - | ೧೦೦ | ೧೦೦ |
| ಬೆಳ್ತಂಗಡಿ | ೧೬.೦ | ೮೪.೦ | ೧೦೦ |
| ಪುತ್ತೂರು | - | ೧೦೦ | ೧೦೦ |
| ಸುಳ್ಯ | - | ೧೦೦ | ೧೦೦ |
| **ದಕ್ಷಿಣ ಕನ್ನಡ ಜಿಲ್ಲೆ** | **೬.೮೨** | **೯೩.೧೮** | **೧೦೦** |
| **ಎರಡು ಜಿಲ್ಲೆಗಳ ಒಟ್ಟು** | **೫.೬೩** | **೯೪.೩೭** | **೧೦೦** |

**ಆಧಾರ:ಅಧ್ಯಯನದ ಪ್ರಾಥಮಿಕ ಸಮೀಕ್ಷಾ ಅಂಕಿ ಅಂಶಗಳು ೨೦೦೯-೧೦**

ಉಡುಪಿ, ಮಂಗಳೂರು ಮತ್ತು ಬೆಳ್ತಂಗಡಿ ತಾಲೂಕುಗಳಲ್ಲಿ ಕೆಲವು ಶ್ರೀಮಂತ ಕುಟುಂಬಗಳು ಮಾತ್ರ ಕೂಲಿ ಕಾರ್ಮಿಕರ ಮೂಲಕ ಮಲ್ಲಿಗೆ ಕೃಷಿ ನಡೆಸುತ್ತದೆ. ಈ ಕುಟುಂಬಗಳಿಗೆ ಮಲ್ಲಿಗೆ ಕೃಷಿಯು ಪ್ರಧಾನ ಆದಾಯದ ಮೂಲವಲ್ಲ. ಅದೊಂದು ಉಪವೃತ್ತಿಯಾಗಿ ಈ ಕುಟುಂಬಗಳ ಆದಾಯದ ಹೆಚ್ಚಳಕ್ಕೆ ಕಾರಣವಾಗಿದೆ. ಆದರೆ ಮಲ್ಲಿಗೆ ಕೃಷಿಯನ್ನು ಪ್ರಧಾನ ವೃತ್ತಿಯಾಗಿ ಸ್ವೀಕರಿಸಿದ ಕುಟುಂಬಗಳು ಕೂಲಿಕಾರರ ನೆರವನ್ನು

ಪಡೆಯುತ್ತಿಲ್ಲ. ಇದಕ್ಕೆ ಅವರ ಆದಾಯ ಒಂದು ಕಾರಣವಾದರೆ ಸಣ್ಣ ಪ್ರಮಾಣದ ಕೃಷಿಗೆ ಕೂಲಿಕಾರರ ಅಗತ್ಯವಿಲ್ಲದಿರುವುದು ಪ್ರಧಾನ ಕಾರಣವಾಗಿರುತ್ತದೆ.

ಚಿತ್ರ ೫.೩ ಮಲ್ಲಿಗೆ ಕೃಷಿಯಲ್ಲಿ ಕೂಲಿಕಾರರ ಪ್ರಮಾಣವನ್ನು ತೋರಿಸುತ್ತದೆ.




**ಚಿತ್ರ ೫.೩ ಮಲ್ಲಿಗೆ ಕೃಷಿಯಲ್ಲಿ ಕೂಲಿಕಾರ್ಮಿಕರ ನೇಮಕಾತಿ**

ಕ್ಷೇತ್ರಾಧ್ಯಯನ ಕಾಲದಲ್ಲಿ ಬೆಳೆಗಾರರು ಮಲ್ಲಿಗೆಯನ್ನು ಆರಿಸಿಕೊಳ್ಳಲು ಕಾರಣ ಅಥವಾ ಪ್ರೇರಣೆ ಏನು ಎಂಬ ಪ್ರಶ್ನೆಯನ್ನು ಹಾಕಲಾಯಿತು. ಸಿಕ್ಕ ಉತ್ತರಗಳನ್ನು ಕೋಷ್ಟಕ ೫.೯ ರಲ್ಲಿ ಸಂಕ್ಷೇಪಿಸಲಾಗಿದೆ. ಉಡುಪಿ ಜಿಲ್ಲೆಯಲ್ಲಿ ಶೇಕಡಾ ೮೬.೩ ಮಂದಿ ವಕ್ತೃಗಳು ಮಲ್ಲಿಗೆ ಬೆಳೆಯಲು ಕಾರಣ ಅದು ಜೀವನೋಪಾಯದ ಮಾರ್ಗವಾಗಿರುವುದು. ಕುಂದಾಪುರ ತಾಲೂಕಿನಲ್ಲಿ ಇಂತವರ ಪ್ರಮಾಣ ಶೇ. ೮೫.೭ ಮತ್ತು ಉಡುಪಿ ತಾಲೂಕಿನಲ್ಲಿ ೭೩.೩. ಕಾರ್ಕಳ ತಾಲೂಕಿನ ಎಲ್ಲಾ ವಕ್ತೃಗಳು ಜೀವನೋಪಾಯಕ್ಕಾಗಿಯೇ ಮಲ್ಲಿಗೆ ಬೆಳೆಯುತ್ತಿದ್ದೇವೆ ಎಂದು ಉತ್ತರಿಸಿದ್ದಾರೆ. ಕುಂದಾಪುರದ ವಕ್ತೃಗಳಲ್ಲಿ ೧೪.೩ ಮಂದಿ ಸಾಮಾಜಿಕ ಮತ್ತು ಸೇವಾ ಸಂಘಟನೆಗಳಿಂದ ಪ್ರೇರಿತರಾಗಿ ಮಲ್ಲಿಗೆ ಕೃಷಿ ಕಾಯಕದಲ್ಲಿ ತೊಡಗಿಸಿಕೊಂಡಿದ್ದಾರೆ. ಇಂತವರ ಪ್ರಮಾಣ ಉಡುಪಿ ತಾಲೂಕಿನಲ್ಲಿ ಶೇ.೨೦. ಉಡುಪಿ ಜಿಲ್ಲೆಯ ಉಡುಪಿ ತಾಲೂಕಿನಲ್ಲಿ ಮಾತ್ರ ಶೇ. ೬.೭ ರಷ್ಟು ಮಂದಿ ಮಲ್ಲಿಗೆ ಕೃಷಿಯನ್ನು ಉಪವೃತ್ತಿಯಾಗಿ ಕೈಗೊಳುತ್ತಿದ್ದಾರೆ. ಇಂತವರು ಕೂಲಿಕಾರರ ನೆರವನ್ನು ಪಡೆಯುತ್ತಿದ್ದಾರೆ.

## ಕೋಷ್ಟಕ ೫.೯

## ಮಲ್ಲಿಗೆ ಬೆಳೆಯಲು ಕಾರಣ / ಪ್ರೇರಣೆ

| ತಾಲೂಕು | ಜೀವನೋಪಾಯ (%) | ಉಪವೃತ್ತಿ (%) | ಸಂಘಟನೆಗಳಿಂದ ಪ್ರೇರಣೆ (%) | ಒಟ್ಟು |
|---|---|---|---|---|
| ಕುಂದಾಪುರ | ೮೫.೭ | – | ೧೪.೩ | ೧೦೦ |
| ಉಡುಪಿ | ೭೩.೩ | ೬.೭ | ೨೦.೦ | ೧೦೦ |
| ಕಾರ್ಕಳ | ೧೦೦ | – | – | ೧೦೦ |
| **ಉಡುಪಿ ಜಿಲ್ಲೆ** | **೮೬.೩೩** | **೨.೨೩** | **೧೧.೪೪** | **೧೦೦** |
| ಮಂಗಳೂರು | ೭೨.೮ | ೨೭.೨ | – | ೧೦೦ |
| ಬಂಟ್ವಾಳ | ೮೦.೦ | – | ೨೦.೦ | ೧೦೦ |
| ಬೆಳ್ತಂಗಡಿ | ೭೬.೦ | ೨೦ | ೪.೦ | ೧೦೦ |
| ಪುತ್ತೂರು | ೮೦.೦ | – | ೨೦.೦ | ೧೦೦ |
| ಸುಳ್ಯ | ೯೦.೦ | – | ೧೦ | ೧೦೦ |
| **ದ.ಕ. ಜಿಲ್ಲೆ** | **೭೯.೭೬** | **೯.೪೪** | **೧೦.೮** | **೧೦೦** |
| **ಎರಡು ಜಿಲ್ಲೆ** | **೮೩.೦೫** | **೫.೮೩** | **೧೧.೧೨** | **೧೦೦** |

**ಆಧಾರ:ಅಧ್ಯಯನದ ಪ್ರಾಥಮಿಕ ಸಮೀಕ್ಷಾ ಅಂಕಿ ಅಂಶಗಳು ೨೦೦೯–೧೦**

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಮಂಗಳೂರು ತಾಲೂಕಿನ ಬೆಳೆಗಾರರಲ್ಲಿ ಶೇ. ೭೨.೮ ಮಂದಿ ಜೀವನೋಪಾಯಕ್ಕಾಗಿ ಮಲ್ಲಿಗೆ ಕೃಷಿಯನ್ನು ಮಾಡುತ್ತಿದ್ದಾರೆ. ಈ ಪ್ರಮಾಣ ಬಂಟ್ವಾಳ ಮತ್ತು ಪುತ್ತೂರು ತಾಲೂಕಿನಲ್ಲಿ ಶೇ. ೮೦; ಬೆಳ್ತಂಗಡಿ ತಾಲೂಕಿನಲ್ಲಿ ಶೇ. ೭೬ ಮತ್ತು ಸುಳ್ಯ ತಾಲೂಕಿನಲ್ಲಿ ಶೇ.೯೦ ಆಗಿರುತ್ತದೆ. ಸಂಘಟನೆಗಳಿಂದ ಪ್ರೇರಿತರಾಗಿ ಮಲ್ಲಿಗೆ ಬೆಳೆಯುವವರ ಪ್ರಮಾಣ ಬಂಟ್ವಾಳ ಮತ್ತು ಪುತ್ತೂರು ಶೇ.೨೦, ಸುಳ್ಯ ಶೇ.೧೦ ಮತ್ತು ಬೆಳ್ತಂಗಡಿ ಶೇ. ೪ ಆಗಿರುತ್ತದೆ. ಮಂಗಳೂರು ಮತ್ತು ಬೆಳ್ತಂಗಡಿ ತಾಲೂಕುಗಳಲ್ಲಿ ಅನುಕ್ರಮವಾಗಿ ಶೇ. ೨೭.೨ ಮತ್ತು ಶೇ.೨೦ ಮಂದಿ ವಕ್ತೃಗಳು ಮಲ್ಲಿಗೆ ಬೆಳೆಯನ್ನು ಉಪವೃತ್ತಿಯಾಗಿ ಸ್ವೀಕರಿಸಿದ್ದಾರೆ. ಅವರು ಅನಿವಾರ್ಯವಾಗಿ ಕೂಲಿಕಾರರ ನೆರವನ್ನು ಪಡೆದುಕೊಳ್ಳಬೇಕಾಗುತ್ತದೆ. ಚಿತ್ರ ೫.೪

ಅವಿಭಜಿತ ದಕ್ಷಿಣ ಕನ್ನಡ ಜಿಲ್ಲೆಯ ವಕ್ತೃಗಳ ಮಲ್ಲಿಗೆ ಬೆಳೆಯಲು ಕಾರಣವಾದ ಅಥವಾ ಪ್ರೇರಣೆ ನೀಡಿದ ಅಂಶಗಳನ್ನು ತಿಳಿಸುತ್ತದೆ.




ಚಿತ್ರ: ೫.೪ ಮಲ್ಲಿಗೆ ಬೆಳೆಯಲು ಕಾರಣ/ ಪ್ರೇರಣೆ

ಅಧ್ಯಯನ ನಡೆಸಿದ ಎರಡು ಜಿಲ್ಲೆಗಳಲ್ಲಿ ಸರಾಸರಿ ೮೩.೦೫ ವಕ್ತೃಗಳು ಜೀವನೋಪಾಯಕ್ಕಾಗಿ ಮಲ್ಲಿಗೆ ಬೆಳೆಯನ್ನು ಕೈಗೊಂಡಿದ್ದಾರೆ. ಇದು ಮಲ್ಲಿಗೆ ಬೆಳೆಯ ಲಾಭದಾಯಕತೆಯನ್ನು ಮತ್ತು ಮಲ್ಲಿಗೆ ಬೆಳೆಯು ಅತೀ ಸಣ್ಣ ಹಿಡುವಳಿದಾರರಿಗೆ ಬದುಕುವ ದಾರಿಯೆಂಬುದನ್ನು ತಿಳಿಸುತ್ತದೆ. ಸ್ವಸಹಾಯ ಗುಂಪುಗಳು, ಶ್ರೀ. ಕ್ಷೇತ್ರ ಧರ್ಮಸ್ಥಳ ಪ್ರಗತಿ ಬಂಧು ಯೋಜನೆ, ಅತೀ ಸಣ್ಣ ರೈತರನ್ನು ಮತ್ತು ತೀರಾ ಕಡಿಮೆ ಭೂಮಿ ಹೊಂದಿರುವವರನ್ನೂ ಮಲ್ಲಿಗೆ ಬೆಳೆಯಲು ಉತ್ತೇಜಿಸುತ್ತಿದೆ. ಪರಿಣಾಮವಾಗಿ ಸಂಘಟನೆಗಳಿಂದ ಪ್ರೇರಿತರಾಗಿ ಮಲ್ಲಿಗೆ ಬೆಳೆಯುತ್ತಿರುವವರ ಸಂಖ್ಯೆ ನಿಧಾನವಾಗಿ ಏರಿಕೆಯಾಗುತ್ತಿದೆ.[೬]

ಮಲ್ಲಿಗೆ ಬೆಳೆಗಾರರಲ್ಲಿ ಅತಿ ಸಣ್ಣ ಬೆಳೆಗಾರರು ಬಹುಮತೀಯರು ಎಂಬುದನ್ನು ಸಾಂದರ್ಭಿಕವಾಗಿ ಈ ಮೊದಲು ಪ್ರಸ್ತಾಪಿಸಲಾಗಿದೆ. ಅದನ್ನು ಕೋಷ್ಟಕ ೫.೧೦ ಸಮರ್ಥಿಸುತ್ತದೆ. ಉಡುಪಿ ಜಿಲ್ಲೆಯ ವಕ್ತೃಗಳಲ್ಲಿ ಶೇ. ೭೮.೯ ಮಂದಿ ೨೦ ಸೆಂಟ್ಸ್‌ಗಿಂತ ಕಡಿಮೆ ಪ್ರದೇಶದಲ್ಲಿ ಮಲ್ಲಿಗೆ ಬೆಳೆಯುತ್ತಿದ್ದಾರೆ. ಕುಂದಾಪುರ ತಾಲೂಕಿನಲ್ಲಿ ಇವರ ಪ್ರಮಾಣ ಶೇ. ೧೦೦. ಉಡುಪಿ ತಾಲೂಕಿನಲ್ಲಿ ಶೇ.೬೬.೭ ಮತ್ತು ಕಾರ್ಕಳ ತಾಲೂಕಿನಲ್ಲಿ ಶೇ.೭೦ .

ಕೋಷ್ಟಕ ೫.೧೦

## ವಕ್ತೃಗಳು ಮಲ್ಲಿಗೆ ಬೆಳೆಯುವ ಪ್ರದೇಶದ ವಿಸ್ತೀರ್ಣ

| ತಾಲೂಕು | ೨೫ ಸೆಂಟ್ಸ್‌ಗಿಂತ ಕಡಿಮೆ (ಶೇ) | ೨೬ ಲಿಂದ ೫೦ ಸೆಂಟ್ಸ್ (ಶೇ) | ೫೧ ಲಿಂದ ೧೦೦ ಸೆಂಟ್ಸ್ (ಶೇ) | ೧ ಎಕರೆಗಿಂತ ಅಧಿಕ (ಶೇ) |
|---|---|---|---|---|
| ಕುಂದಾಪುರ | ೧೦೦ | - | - | - |
| ಉಡುಪಿ | ೬೬.೭೭ | ೨೩.೩ | ೧೦.೦ | - |
| ಕಾರ್ಕಳ | ೭೦.೦ | ೩೦.೦ | - | - |
| **ಉಡುಪಿ ಜಿಲ್ಲೆ** | **೭೮.೯** | **೧೭.೮** | **೩.೩** | **೧೦೦** |
| ಮಂಗಳೂರು | ೫೪.೫ | ೨೭.೩ | ೧೮.೨ | - |
| ಬಂಟ್ವಾಳ | ೬೫.೦ | ೨೫.೦ | ೧೦.೦ | - |
| ಬೆಳ್ತಂಗಡಿ | ೭೬.೦ | ೧೬.೦ | ೮.೦ | - |
| ಪುತ್ತೂರು | ೯೧.೬೭ | ೮.೩೩ | - | - |
| ಸುಳ್ಯ | ೧೦೦ | - | - | - |
| **ದ.ಕ. ಜಿಲ್ಲೆ** | **೭೭.೪** | **೧೫.೩** | **೭.೩** | **೧೦೦** |
| **ಎರಡು ಜಿಲ್ಲೆ** | **೭೮.೨** | **೧೬.೬** | **೫.೨** | **೧೦೦** |

**ಆಧಾರ:ಅಧ್ಯಯನದ ಪ್ರಾಥಮಿಕ ಸಮೀಕ್ಷಾ ಅಂಕಿ ಅಂಶಗಳು ೨೦೦೯-೧೦.**

ಉಡುಪಿ ಜಿಲ್ಲೆಯಲ್ಲಿ ೨೬ ಲಿಂದ ೫೦ ಸೆಂಟ್ಸ್ ಭೂ ಪ್ರದೇಶದಲ್ಲಿ ಮಲ್ಲಿಗೆ ಬೆಳೆಯುವವರ ಪ್ರಮಾಣ ಶೇ.೧೭.೮. ಈ ಪ್ರಮಾಣ ಕಾರ್ಕಳ ತಾಲೂಕಿನಲ್ಲಿ ಶೇ. ೩೦ ಮತ್ತು ಉಡುಪಿ ತಾಲೂಕಿನಲ್ಲಿ ಶೇ.೨೦.೩. ಉಡುಪಿ ಜಿಲ್ಲೆಯ ಉಡುಪಿ ತಾಲೂಕಿನಲ್ಲಿ ಮಾತ್ರ ೫೧ ಸೆಂಟ್ಸ್‌ನಿಂದ ೧ ಎಕರೆ ಭೂ ಪ್ರದೇಶದಲ್ಲಿ ಮಲ್ಲಿಗೆ ಬೆಳೆಯುವರು ಕಂಡು ಬರುತ್ತಾರೆ. ಇತರ ತಾಲೂಕುಗಳಲ್ಲಿ ಈ ವಿಭಾಗದಲ್ಲಿ ಮಲ್ಲಿಗೆ ಬೆಳೆಯುವವರು ದೊರೆತಿಲ್ಲ.

ದ.ಕ. ಜಿಲ್ಲೆಯ ವಕ್ಕಗಳ ಪೈಕಿ ೨೫ ಸೆಂಟ್ಸ್‌ಗಿಂತ ಕಡಿಮೆ ಭೂ ಪ್ರದೇಶದಲ್ಲಿ ಮಲ್ಲಿಗೆ ಬೆಳೆಯುವರ ಪ್ರಮಾಣ ಶೇ. ೭೭.೪. ಮಂಗಳೂರು ತಾಲೂಕಿನಲ್ಲಿ ಇವರ ಪ್ರಮಾಣ ಶೇ. ೫೪.೫, ಬಂಟ್ವಾಳ ತಾಲೂಕಿನಲ್ಲಿ ಶೇ.೬೫, ಬೆಳ್ತಂಗಡಿ ತಾಲೂಕಿನಲ್ಲಿ ಶೇ.೭೬, ಪುತ್ತೂರು ತಾಲೂಕಿನಲ್ಲಿ ಶೇ.೯೧.೬೭. ಸುಳ್ಯ ತಾಲೂಕಿನಲ್ಲಿ ಎಲ್ಲಾ ವಕ್ಕಗಳು ೨೫ ಸೆಂಟ್ಸಿಗಿಂತ ಕಡಿಮೆ ಭೂಮಿಯಲ್ಲಿ ಮಲ್ಲಿಗೆ ಬೆಳೆಯುತ್ತಿದ್ದಾರೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶೇ.೧೫.೩ ಮಂದಿ ವಕ್ಕಗಳು ೨೬ ಲಿಂದ ೫೦ ಸೆಂಟ್ಸ್‌ವರೆಗಿನ ಮಲ್ಲಿಗೆ ಬೆಳೆ ಪ್ರದೇಶವನ್ನು ಹೊಂದಿದ್ದಾರೆ. ಇವರ ಪ್ರಮಾಣ ಪುತ್ತೂರು ತಾಲೂಕಿನಲ್ಲಿ ಶೇ. ೮.೩೩, ಬೆಳ್ತಂಗಡಿ ತಾಲೂಕಿನಲ್ಲಿ ಶೇ. ೧೬.೦, ಬಂಟ್ವಾಳ ತಾಲೂಕಿನಲ್ಲಿ ಶೇ.೨೫.೦ ಮತ್ತು ಮಂಗಳೂರು ತಾಲೂಕಿನಲ್ಲಿ ಶೇ. ೨೭.೩.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶೇ. ೭.೩ ಮಂದಿ ವಕ್ಕಗಳು ೫೧ ಸೆಂಟ್ಸ್‌ನಿಂದ ೧ ಎಕರೆ ವರೆಗಿನ ಭೂಮಿಯಲ್ಲಿ ಮಲ್ಲಿಗೆ ಕೃಷಿ ನಡೆಸುತ್ತಿದ್ದಾರೆ. ಬೆಳ್ತಂಗಡಿ ತಾಲೂಕಿನ ವಕ್ಕಗಳಲ್ಲಿ ಶೇ. ೮.೦, ಬಂಟ್ವಾಳ ತಾಲೂಕಿನ ವಕ್ಕಗಳಲ್ಲಿ ಶೇ. ೧೦, ಮತ್ತು ಮಂಗಳೂರು ತಾಲೂಕಿನ ವಕ್ಕಗಳಲ್ಲಿ ಶೇ. ೧೮.೨ ಈ ವರ್ಗಕ್ಕೆ ಸೇರಿದವರು.

ಚಿತ್ರ ೫.೫ ಅವಿಭಜಿತ ದ.ಕ. ಜಿಲ್ಲೆಯ ವಕ್ಕಗಳು ಮಲ್ಲಿಗೆ ಬೆಳೆಯುವ ಪ್ರದೇಶದ ಸಂಯೋಜನೆಯನ್ನು ತೋರಿಸುತ್ತದೆ.

ಎರಡು ಜಿಲ್ಲೆಗಳಲ್ಲಿ ೨೫ ಸೆಂಟ್ಸ್‌ಗಿಂತ ಕಡಿಮೆ ಬೆಳೆಯುವವರ ಪ್ರಮಾಣ ಶೇ.೭೮.೨, ೨೬ ಲಿಂದ ೫೦ ಸೆಂಟ್ಸ್‌ನ ವರೆಗಿನ ಪ್ರದೇಶದಲ್ಲಿ ಬೆಳೆಯುವವರ ಪ್ರಮಾಣ ಶೇ.೧೬.೬; ೫೧ ಸೆಂಟ್ಸಿನಿಂದ ೧ ಎಕರೆಯ ವರೆಗಿನ ಪ್ರದೇಶದಲ್ಲಿ ಬೆಳೆಯುವವರ ಪ್ರಮಾಣ ಶೇ.೭.೩. ಇದು ಮಲ್ಲಿಗೆ ಕೃಷಿಯನ್ನು ತೀರಾ ಸಣ್ಣ ಪ್ರಮಾಣದಲ್ಲಿ ಕೈಗೊಳ್ಳಲಾಗುತ್ತದೆ ಎನ್ನುವುದಕ್ಕೆ ಸಾಕ್ಷಿಯಾಗಿದೆ.




**ಚಿತ್ರ ೫.೫ ಮಲ್ಲಿಗೆ ಬೆಳೆಯುವ ಪ್ರದೇಶದ ಸಂಯೋಜನೆ**

ಉಡುಪಿ ಜಿಲ್ಲೆಯಲ್ಲಿ ೧೦-೫೦ ಗಿಡಗಳನ್ನು ಬೆಳೆಯುವವರ ಪ್ರಮಾಣ ಶೇ. ೬೩.೫. ಇದರಲ್ಲಿ ಶೇ. ೭೩.೪ ರಷ್ಟು ಪ್ರಮಾಣ ಹೊಂದಿರುವ ಉಡುಪಿ ತಾಲೂಕು ಪ್ರಥಮ ಸ್ಥಾನವನ್ನು ಹೊಂದಿರುತ್ತದೆ. ಈ ಪ್ರಮಾಣ ಕಾರ್ಕಳ ತಾಲೂಕಿನಲ್ಲಿ ಶೇ.೬೦ ಮತ್ತು ಕುಂದಾಪುರ ತಾಲೂಕಿನಲ್ಲಿ ಶೇ.೫೭.೧ ಮಾತ್ರ.

೫೧-೧೦೦ ವರೆಗೆ ಗಿಡಗಳನ್ನು ಬೆಳೆಯುವವರ ಪ್ರಮಾಣ ಉಡುಪಿ ಜಿಲ್ಲೆಯಲ್ಲಿ ಶೇ. ೨೦.೬, ಕುಂದಾಪುರ ತಾಲೂಕಿನಲ್ಲಿ ಶೇ. ೨೮.೬, ಕಾರ್ಕಳ ತಾಲೂಕಿನಲ್ಲಿ ಶೇ. ೨೦ ಮತ್ತು ಉಡುಪಿ ತಾಲೂಕಿನಲ್ಲಿ ಶೇ. ೧೩.೩ ಆಗಿರುತ್ತದೆ.

೧೦೦-೨೫೦ ರ ವರೆಗೆ ಮಲ್ಲಿಗೆ ಗಿಡಗಳನ್ನು ಬೆಳೆಯುವವರ ಪ್ರಮಾಣ ಉಡುಪಿ ಜಿಲ್ಲೆಯ ಶೇ.೧೧.೪; ಕುಂದಾಪುರ ತಾಲೂಕಿನಲ್ಲಿ ಶೇ.೧೪.೩; ಉಡುಪಿ ಮತ್ತು ಕಾರ್ಕಳ ತಾಲೂಕಿನಲ್ಲಿ ಶೇ.೧೦ ಆಗಿರುತ್ತದೆ. ಉಡುಪಿ ಜಿಲ್ಲೆಯ ವಕ್ತೃಗಳಲ್ಲಿ ಶೇ.೪.೫ರಷ್ಟು ಮಂದಿ ೨೫೦-೫೦೦ ರಷ್ಟು ಮಲ್ಲಿಗೆ ಗಿಡಗಳನ್ನು ಬೆಳೆಯುತ್ತಿದ್ದಾರೆ. ಕಾರ್ಕಳ ತಾಲೂಕಿನಲ್ಲಿ ಇವರ ಪ್ರಮಾಣ ಶೇ.೧೦ ಮತ್ತು ಉಡುಪಿ ತಾಲೂಕಿನಲ್ಲಿ ಶೇ.೩.೩. ಕುಂದಾಪುರ ತಾಲೂಕಿನ ವಕ್ತೃಗಳಲ್ಲಿ ಯಾರೂ ಈ ವರ್ಗದಲ್ಲಿ ಸೇರ್ಪಡೆಗೊಂಡಿಲ್ಲ. ಇದಕ್ಕೆ ಪೂರಕವಾಗಿ ಕೋಷ್ಟಕ ೫.೧೧ ವಕ್ತೃಗಳು ಬೆಳೆಯುವ ಗಿಡಗಳ ಪ್ರಮಾಣವನ್ನು ಸೂಚಿಸುತ್ತದೆ.

## ಕೋಷ್ಟಕ ೫.೧೧

## ವಕ್ಕಗಳು ಬೆಳೆಯುವ ಗಿಡಗಳ ಪ್ರಮಾಣ (ಶೇಕಡಾ)

| ತಾಲೂಕು | ೧೦ ರಿಂದ ೫೦ | ೫೧ ರಿಂದ ೧೦೦ | ೧೦೧ ರಿಂದ ೨೫೦ | ೨೫೧ ರಿಂದ ೫೦೦ |
|---|---|---|---|---|
| ಕುಂದಾಪುರ | ೫೭.೧ | ೨೮.೬ | ೧೪.೩ | - |
| ಉಡುಪಿ | ೭೩.೪ | ೧೩.೩ | ೧೦ | ೩.೩ |
| ಕಾರ್ಕಳ | ೬೦.೦ | ೨೦.೦ | ೧೦.೦ | ೧೦.೦ |
| **ಉಡುಪಿ ಜಿಲ್ಲೆ** | **೬೩.೫** | **೨೦.೬** | **೧೧.೪** | **೪.೫** |
| ಮಂಗಳೂರು | ೭೩.೦ | ೧೮.೦ | ೯.೦ | - |
| ಬಂಟ್ವಾಳ | ೫೫.೦ | ೩೦.೦ | ೧೦.೦ | ೫.೦ |
| ಬೆಳ್ತಂಗಡಿ | ೫೮.೦ | ೨೦.೦ | ೧೮.೦ | ೪.೦ |
| ಪುತ್ತೂರು | ೬೭.೦ | ೩೩.೦ | - | - |
| ಸುಳ್ಯ | ೮೦.೦ | ೨೦.೦ | - | - |
| **ದ.ಕ. ಜಿಲ್ಲೆ** | **೬೬.೬** | **೨೪.೨** | **೭.೪** | **೧.೮** |
| **ಎರಡು ಜಿಲ್ಲೆ** | **೬೫.೦೫** | **೨೨.೪** | **೯.೪** | **೩.೧೫** |

ಆಧಾರ:ಅಧ್ಯಯನದ ಪ್ರಾಥಮಿಕ ಸಮೀಕ್ಷಾ ಅಂಕಿ ಅಂಶಗಳು ೨೦೦೯-೧೦.

ದಕ್ಷಿಣ ಕನ್ನಡ ಜಿಲ್ಲೆಯ ವಕ್ಕಗಳಲ್ಲಿ ಶೇ.೬೬.೬ ಮಂದಿ ೧೦-೫೦ರ ವರೆಗೆ ಗಿಡಗಳನ್ನು ಬೆಳೆಯುತ್ತಿದ್ದಾರೆ. ಅವರ ಪ್ರಮಾಣ ಮಂಗಳೂರು ತಾಲೂಕಿನಲ್ಲಿ ಶೇ. ೭೩. ಬಂಟ್ವಾಳ ತಾಲೂಕಿನಲ್ಲಿ ಶೇ.೫೫; ಬೆಳ್ತಂಗಡಿ ತಾಲೂಕಿನಲ್ಲಿ ಶೇ.೫೮; ಪುತ್ತೂರು ತಾಲೂಕಿನಲ್ಲಿ ಶೇ.೬೭ ಮತ್ತು ಸುಳ್ಯ ತಾಲೂಕಿನಲ್ಲಿ ಶೇ.೮೦ ಆಗಿರುತ್ತದೆ.

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೫೧-೧೦೦ ರ ವರೆಗೆ ಗಿಡಗಳನ್ನು ಬೆಳೆಯುತ್ತಿರುವವರ ಪ್ರಮಾಣ ಶೇ. ೨೪.೨, ಮಂಗಳೂರು ತಾಲೂಕಿನಲ್ಲಿ ಈ ಪ್ರಮಾಣ ಶೇ. ೧೮, ಬಂಟ್ವಾಳ ತಾಲೂಕಿನಲ್ಲಿ ಶೇ. ೩೦, ಬೆಳ್ತಂಗಡಿ ತಾಲೂಕಿನಲ್ಲಿ ಶೇ.೨೦, ಪುತ್ತೂರು ತಾಲೂಕಿನಲ್ಲಿ ಶೇ.೩೩ ಮತ್ತು ಸುಳ್ಯ ತಾಲೂಕಿನಲ್ಲಿ ಶೇ. ೨೦ ಆಗಿರುತ್ತದೆ. ಪುತ್ತೂರು ಮತ್ತು ಸುಳ್ಯ

ತಾಲೂಕುಗಳಲ್ಲಿ ೧೦೦ ಕ್ಕಿಂತ ಅಧಿಕ ಗಿಡ ಬೆಳೆಯುವ ವಕ್ತೃಗಳು ದೊರಕಿಲ್ಲ. ಮಂಗಳೂರು ತಾಲೂಕಿನಲ್ಲಿ ಇವರ ಪ್ರಮಾಣ ಶೇ. ೯, ಬಂಟ್ವಾಳ ತಾಲೂಕಿನಲ್ಲಿ ಶೇ. ೧೦; ಮತ್ತು ಬೆಳ್ತಂಗಡಿ ತಾಲೂಕಿನಲ್ಲಿ ಶೇ. ೧೮ ಆಗಿರುತ್ತದೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅತ್ಯಧಿಕ ಮಲ್ಲಿಗೆ ಬೆಳೆಯುವ ಬೆಳ್ತಂಗಡಿ ಮತ್ತು ಬಂಟ್ವಾಳ ತಾಲೂಕುಗಳಲ್ಲಿ ೨೫೦ ರಿಂದ ೫೦೦ ರ ವರೆಗಿನ ಗಿಡಗಳನ್ನು ಬೆಳೆಯುವ ವಕ್ತೃಗಳು ಬಂಟ್ವಾಳ ಶೇ. ೫ ಮತ್ತು ಬೆಳ್ತಂಗಡಿ ಶೇ. ೪ ರಷ್ಟು ಪ್ರಮಾಣವನ್ನು ಹೊಂದಿರುತ್ತದೆ. ಆದರೆ ಅವಿಭಜಿತ ದಕ್ಷಿಣ ಕನ್ನಡದಲ್ಲಿ ನಡೆಸಲಾದ ಅಧ್ಯಯನದಲ್ಲಿ ೫೦೦ ಗಿಡಗಳಿಗಿಂತ ಅಧಿಕ ಗಿಡಗಳನ್ನು ಹೊಂದಿದ ವಕ್ತೃಗಳು ಲಭ್ಯವಾಗಿಲ್ಲ.[೭]

ಎರಡು ಜಿಲ್ಲೆಗಳ ವಕ್ತೃಗಳಲ್ಲಿ ಮೂರನೇ ಎರಡರಷ್ಟು ಮಂದಿ ೧೦ ರಿಂದ ೫೦ ರ ವರೆಗೆ ಗಿಡಗಳನ್ನು ಬೆಳೆಯುವ ವರ್ಗಕ್ಕೆ ಸೇರಿದವರು. ಇವೆರಡು ಜಿಲ್ಲೆಗಳಲ್ಲಿ ಈಗಲೂ ಮಲ್ಲಿಗೆ ಕೃಷಿಯಲ್ಲಿ ಅತಿ ಸಣ್ಣ ರೈತರದ್ದೆ ಮೇಲುಗೈ ಎನ್ನುವುದನ್ನು ಈ ಚಿತ್ರ ಸೂಚಿಸುತ್ತದೆ. ಮಹಾತ್ಮಾ ಗಾಂಧೀಜಿ ಯಂತ್ರಗಳ ಮೂಲಕ ಬೃಹತ್ ಉತ್ಪಾದನೆಯ ಬದಲು ಸಮುದಾಯದ ಪಾಲ್ಗೊಳ್ಳುವಿಕೆಯಿಂದ ಬೃಹತ್ ಉತ್ಪಾದನೆಯಾಗಬೇಕೆಂದು ಬಯಸಿದ್ದರು.[೮] ಜರ್ಮನಿಯ ಶುಮಾಕರ್[೯] ಎಂಬ ಅರ್ಥಶಾಸ್ತ್ರಜ್ಞ ಸಣ್ಣ ಪ್ರಮಾಣದ ಉತ್ಪಾದನೆಯ ಪ್ರಾಮುಖ್ಯತೆಯನ್ನು 'ಸಣ್ಣದು ಸುಂದರವಾದುದು' (Small is Beautiful) ಎಂಬ ಕೃತಿಯಲ್ಲಿ ಪ್ರತಿಪಾದಿಸಿದ್ದಾನೆ. ಮಲ್ಲಿಗೆ ಕೃಷಿಯು, ಶ್ರಮಬಾಹುಳ್ಯ ತಂತ್ರಜ್ಞಾನವನ್ನು ಬಳಸುವುದರಿಂದ ಮತ್ತು ಬಹುಸಂಖ್ಯಾತರಾಗಿರುವ ಅತಿ ಸಣ್ಣ ಹಿಡುವಳಿದಾರರಿಗೆ ಆದಾಯ ಗಳಿಕೆಯ ಪ್ರಮುಖ ಮೂಲವಾಗಿರುವುದರಿಂದ ಇದು ಹೆಚ್ಚಿನ ಮಹತ್ವವನ್ನು ಪಡೆದುಕೊಳ್ಳುತ್ತದೆ. ಮಲ್ಲಿಗೆ ಬೆಳೆಗಾರರು ಹೊಂದಿರುವ ಮಲ್ಲಿಗೆ ಗಿಡಗಳ ಪ್ರಾಯದ ಬಗೆಗಿನ ಅಧ್ಯಯನವನ್ನು ಕ್ಷೇತ್ರಕಾರ್ಯದ ಒಂದು ಭಾಗವಾಗಿ ಮಾಡಲಾಗಿದೆ.

ಮಲ್ಲಿಗೆ ಗಿಡಗಳು ಎರಡನೆಯ ವರ್ಷದಿಂದ ಇಳುವರಿ ನೀಡಲು ಆರಂಭಿಸುತ್ತದೆ. ಉಡುಪಿ ಜಿಲ್ಲೆಯ ವಕ್ತೃಗಳಲ್ಲಿ ೨ ರಿಂದ ೬ ರ ವರೆಗಿನ ವರ್ಷದ ಗಿಡಗಳನ್ನು ಹೊಂದಿರುವವರ ಪ್ರಮಾಣ ಶೇ. ೬೧.೭. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಈ ಪ್ರಮಾಣ ಶೇ. ೬೬.೭. ಇದು ಎರಡು ಜಿಲ್ಲೆಗಳಲ್ಲಿ ಈ ವರ್ಗಕ್ಕೆ ಸೇರಿದ ಗಿಡಗಳನ್ನು ಹೊಂದಿರುವ ವಕ್ತೃಗಳ ಸಂಖ್ಯೆ ಅತ್ಯಧಿಕವಾಗಿರುವುದನ್ನು ಸೂಚಿಸುತ್ತದೆ. ಮಲ್ಲಿಗೆ ಗಿಡಗಳ ಇಳುವರಿ ಸಾದಾರಣವಾಗಿ ೧೦ ವರ್ಷಗಳವರೆಗೆ ಹೆಚ್ಚಾಗುತ್ತಾ ಹೋಗುತ್ತದೆ. ಆ ಬಳಿಕ ಇಳುವರಿ ಇಳಿಮುಖವಾಗುತ್ತದೆ. ಆಗ ಹಳೆಗಿಡಗಳನ್ನು ತೆಗೆದು ಹೊಸಗಿಡಗಳನ್ನು ನಾಟಿ ಮಾಡಬೇಕಾಗುತ್ತದೆ. ಈ ಪ್ರಕ್ರಿಯೆಯು ನಿರಂತರವಾಗಿರುವುದರಿಂದ ಕಡಿಮೆ ಪ್ರಾಯದ ಗಿಡಗಳನ್ನು ಹೊಂದಿರುವ ರೈತರ ಸಂಖ್ಯೆ ಅಧಿಕವಾಗಿದೆ. ಚಿತ್ರ ೫.೭ ಎರಡು ಜಿಲ್ಲೆಗಳ ವಕ್ತೃಗಳು ಹೊಂದಿರುವ ಮಲ್ಲಿಗೆ ಗಿಡಗಳ

ಸರಾಸರಿ ಪ್ರಾಯ ಸಂಯೋಜನೆಯನ್ನು ತಿಳಿಸುತ್ತದೆ. ೨ ರಿಂದ ೬ ವರ್ಷದವರೆಗಿನ ಪ್ರಾಯದ ಮಲ್ಲಿಗೆ ಗಿಡಗಳನ್ನು ಹೊಂದಿರುವ ರೈತರ ಪ್ರಮಾಣ ಸುಮಾರು ಮೂರನೇ ಎರಡರಷ್ಟು. ೬ ರಿಂದ ೮ ರ ವರೆಗಿನ ಪ್ರಾಯದ ಗಿಡಗಳನ್ನು ಶೇ.೧೮.೪, ಮತ್ತು ೮ ರಿಂದ ೧೦ ವರ್ಷ ಪ್ರಾಯದ ಗಿಡಗಳನ್ನು ಶೇ.೧೨.೮ ಮಂದಿ ರೈತರು ಹೊಂದಿದ್ದಾರೆ. ಸಾಧಾರಣವಾಗಿ ೧೦ ವರ್ಷದ ಬಳಿಕ ಗಿಡಗಳನ್ನು ತೆಗೆದು ಮರುನಾಟಿ ಮಾಡಲಾಗುತ್ತದೆ. ಆದರೆ ಒಳ್ಳೆಯ ಇಳುವರಿ ನೀಡುವ ಗಿಡಗಳ ತಂಟೆಗೆ ರೈತರು ಹೋಗುವುದಿಲ್ಲ. ಆದುದರಿಂದ ೧೦ ವರ್ಷ ಪ್ರಾಯ ಮೀರಿದ ಮಲ್ಲಿಗೆ ಗಿಡಗಳನ್ನು ಹೊಂದಿರುವ ಕೆಲವು ವಕ್ತೃಗಳು ಎರಡೂ ಜಿಲ್ಲೆಗಳಲ್ಲಿ ಕಂಡುಬರುತ್ತಾರೆ.

ಕೋಷ್ಟಕ ೫.೧೨

**ಮಲ್ಲಿಗೆ ಗಿಡಗಳ ಪ್ರಾಯ ಸಂಯೋಜನೆ**

| ಜಿಲ್ಲೆ | ವಕ್ತೃಗಳು | ಗಿಡಗಳ ಪ್ರಾಯ (ವರ್ಷಗಳಲ್ಲಿ) | | | | | |
|---|---|---|---|---|---|---|---|
| | | ೨–೪ | ೪–೬ | ೬–೮ | ೮–೧೦ | ೧೦ ಕ್ಕಿಂತ ಅಧಿಕ | ಒಟ್ಟು |
| ಉಡುಪಿ ಜಿಲ್ಲೆ | ವಕ್ತೃಗಳು | ೧೪ | ೧೫ | ೧೦ | ೬ | ೨ | ೪೭ |
| | ಶೇಕಡಾ | ೨೯.೮ | ೩೧.೯ | ೨೧.೩ | ೧೨.೮ | ೪.೨ | ೧೦೦ |
| ದ.ಕ ಜಿಲ್ಲೆ | ವಕ್ತೃಗಳು | ೨೮ | ೨೪ | ೧೩ | ೧೦ | ೩ | ೭೮ |
| | ಶೇಕಡಾ | ೩೫.೯ | ೩೦.೮ | ೧೬.೭ | ೧೨.೮ | ೩.೮ | ೧೦೦ |
| ಎರಡು ಜಿಲ್ಲೆ | ವಕ್ತೃಗಳು | ೪೨ | ೩೯ | ೨೩ | ೧೬ | ೫ | ೧೨೫ |
| | ಶೇಕಡಾ | ೩೩.೬ | ೩೧.೨ | ೧೮.೪ | ೧೨.೮ | ೪.೦ | ೧೦೦ |

ಆಧಾರ:ಅಧ್ಯಯನದ ಪ್ರಾಥಮಿಕ ಸಮೀಕ್ಷಾ ಅಂಕಿ ಅಂಶಗಳು ೨೦೦೯–೧೦.




**ಚಿತ್ರ: ೫.೬ ಮಲ್ಲಿಗೆ ಗಿಡಗಳ ಪ್ರಾಯ ಸಂಯೋಜನೆ**

ಉಡುಪಿ ಜಿಲ್ಲೆಯ ಉಡುಪಿ ತಾಲೂಕಿನಲ್ಲಿ ಶೇ.೨೦ ಮಂದಿ ವಕ್ತೃಗಳು ಜಾಜಿ ಮಲ್ಲಿಗೆಯನ್ನು, ಶೇ.೧೦ ಮಂದಿ ವಕ್ತೃಗಳು ಕನಕಾಂಬರವನ್ನು ಮತ್ತು ಶೇ.೩ ಮಂದಿ ವಕ್ತೃಗಳು ಗುಲಾಬಿ ಹೂವನ್ನು ಬೆಳೆಸುತ್ತಾರೆ. ಕುಂದಾಪುರದಲ್ಲಿ ಕನಕಾಂಬರ ಮತ್ತು ಸೇವಂತಿಗೆ ಹೂಗಳನ್ನು ಬೆಳೆಸುವ ವಕ್ತೃಗಳಿದ್ದಾರೆ. ಕಾರ್ಕಳ ತಾಲೂಕಿನ ವಕ್ತೃಗಳಲ್ಲಿ ಕೆಲವರು ಜಾಜಿ ಮಲ್ಲಿಗೆ ಬೆಳೆಗೆ ಮಹತ್ವ ನೀಡಿದ್ದಾರೆ.

ದಕ್ಷಿಣ ಕನ್ನಡ ಜಿಲ್ಲೆಯ ಸುಳ್ಯ ತಾಲೂಕನ್ನೂ ಹೊರತು ಪಡಿಸಿದರೆ ಉಳಿದೆಲ್ಲಾ ತಾಲೂಕುಗಳ ವಕ್ತೃಗಳು ಸ್ವಲ್ಪ ಪ್ರಮಾಣದಲಿ ಜಾಜಿ ಮಲ್ಲಿಗೆ ಬೆಳೆಯುತ್ತಾರೆ. ಬಂಟ್ವಾಳ, ಬೆಳ್ತಂಗಡಿ, ಪುತ್ತೂರು ಮತ್ತು ಸುಳ್ಯ ತಾಲೂಕುಗಳ ವಕ್ತೃಗಳು ಸ್ವಲ್ಪ ಮಟ್ಟಿಗೆ ಕನಕಾಂಬರ ಬೆಳೆಗೆ ಪ್ರಾಶಸ್ತ್ಯ ನೀಡಿದ್ದಾರೆ. ಮಂಗಳೂರು ಮತ್ತು ಬಂಟ್ವಾಳ ತಾಲೂಕುಗಳಲ್ಲಿ ವಾಣಿಜ್ಯ ಉದ್ದೇಶಗಳಿಗಾಗಿ ಗುಲಾಬಿಯನ್ನು ಬೆಳೆಯಲಾಗುತ್ತದೆ. ದಕ್ಷಿಣ ಕನ್ನಡ ಜಿಲ್ಲೆಯ ಬೆಳ್ತಂಗಡಿ ತಾಲೂಕಿನಲ್ಲಿ ಸೇವಂತಿಗೆ ಬೆಳೆಗೆ ಸ್ವಲ್ಪ ಪ್ರಾಶಸ್ತ್ಯವಿದೆ. ಎರಡೂ ಜಿಲ್ಲೆಗಳ ವಕ್ತೃಗಳು ಇತರ ಕೆಲವು ಪುಷ್ಪಗಳನ್ನು ಬೆಳೆಯುತ್ತಾರೆ. ಅವುಗಳೆಂದರೆ ಗುಂಡು ಮಲ್ಲಿಗೆ, ಚೆಂಡು ಹೂ, ನಿತ್ಯಪುಷ್ಪ, ದಾಸವಾಳ, ಮುದ್ದು ಮಲ್ಲಿಗೆ, ಜರ್ಬೇರ ಮತ್ತು ಅಂಥೋರಿಯಂ. ಆದರೆ ಈ ಜಿಲ್ಲೆಗಳಲ್ಲಿ ಬೆಳೆಯುವ ಹೂಗಳು ಮಲ್ಲಿಗೆ ಮತ್ತು ಸ್ವಲ್ಪ ಮಟ್ಟಿಗೆ ಗುಲಾಬಿಯನ್ನು ಹೊರತು ಪಡಿಸಿದರೆ ಇತರ ಪುಷ್ಪಗಳು ಇನ್ನು ಆರ್ಥಿಕ ಮಹತ್ವ ಪಡೆದುಕೊಂಡಿಲ್ಲ. ಸಂದರ್ಶನ ನಡೆಸಲಾದ ವಕ್ತೃಗಳು ಮಲ್ಲಿಗೆಯೊಂದಿಗೆ ಇತರ ಹೂಗಳನ್ನು ಕೂಡಾ ಬೆಳೆಸುತ್ತಾರೆ. ಅವುಗಳ ವಿವರಗಳನ್ನು ಕೋಷ್ಟಕ ೫.೧೩ ನೀಡುತ್ತದೆ

ಕೋಷ್ಟಕ ೫.೧೩

ವರ್ತಕರು ಬಳಸುವ ಇತರ ಪುಷ್ಪಗಳು

| ತಾಲೂಕು | ಜಾಜಿ ಮಲ್ಲಿಗೆ | ಕನಕಾಂಬರ | ಗುಲಾಬಿ | ಸೇವಂತಿಗೆ | ಇತರ |
|---|---|---|---|---|---|
| ಕುಂದಾಪುರ | - | ೨೮.೫ | - | ೧೪.೨ | ೨೮.೫ |
| ಉಡುಪಿ | ೨೦.೦ | ೧೦.೦ | ೩.೦ | - | ೬.೦ |
| ಕಾರ್ಕಳ | ೧೦.೦ | - | - | - | ೨೦.೦ |
| **ಉಡುಪಿ ಜಿಲ್ಲೆ** | **೧೦.೦** | **೧೨.೮೩** | **೧** | **೪.೭೪** | **೧೮.೧೬** |
| ಮಂಗಳೂರು | ೯.೦ | - | ೧೮.೧ | - | ೧೮.೧ |
| ಬಂಟ್ವಾಳ | ೧೦.೦ | ೧೫.೦ | ೫.೦ | - | - |
| ಬೆಳ್ತಂಗಡಿ | ೧೮.೦ | ೧೨.೦ | - | ೧೨.೦ | ೬.೦ |
| ಪುತ್ತೂರು | ೧೬.೬ | ೧೬.೬ | - | - | ೮.೩ |
| ಸುಳ್ಯ | - | ೨೦ | - | - | - |
| ದ.ಕ. ಜಿಲ್ಲೆ | ೧೦.೭೨ | ೧೨.೭೨ | ೪.೬೨ | ೨.೪ | ೬.೪೮ |
| **ಎರಡು ಜಿಲ್ಲೆ** | **೧೦.೩೬** | **೧೨.೭೮** | **೨.೮೧** | **೩.೫೭** | **೧೨.೩೨** |

ಆಧಾರ:ಅಧ್ಯಯನದ ಪ್ರಾಥಮಿಕ ಸಮೀಕ್ಷಾ ಅಂಕಿ ಅಂಶಗಳು ೨೦೦೯-೧೦.

## ೫.೩ ಮಲ್ಲಿಗೆ ಬೆಳೆಯ ಆರ್ಥಿಕತೆ

ಆರ್ಥಿಕ ಪ್ರಗತಿ ಸಾಧಿಸುವುದು ಮಲ್ಲಿಗೆ ಬೆಳೆಗಾರರ ಪ್ರಮುಖ ಉದ್ದೇಶ. ಮಲ್ಲಿಗೆ ಅದರ ಕಚ್ಚಾ ರೂಪದಲ್ಲಿ ಬಹುತೇಕವಾಗಿ ಅನುಭೋಗಿಸಲ್ಪಡುವ ಒಂದು ಅಂತಿಮ ಸರಕು. ಆದುದರಿಂದ ಮಲ್ಲಿಗೆಗೆ ರೂಪ ತುಷ್ಟೀಗುಣದ ಬದಲು ಸಮಯ ಮತ್ತು ಸ್ಥಳ ತುಷ್ಟೀಗುಣವಿರುತ್ತದೆ. ಮಲ್ಲಿಗೆ ಬೆಳೆಯನ್ನು ಒಂದು ಉದ್ಯಮವಾಗಿ ಪರಿಗಣಿಸಿದರೆ ಕಾರ್ಖಾನೆಗಳ ಸಿದ್ಧಾಂತವನ್ನು (Theory of Firm) ಮಲ್ಲಿಗೆ ಉದ್ಯಮಕ್ಕೂ ಅನ್ವಯಿಸಬಹುದಾಗಿದೆ.

ಕಾರ್ಖಾನೆಗಳ ಸಿದ್ಧಾಂತಗಳ ಪ್ರಕಾರ ಉತ್ಪಾದನಾ ಘಟಕ ಒಂದರ ಉತ್ಪಾದನೆಯ ಅಂತಿಮ ಉದ್ದೇಶ ಗರಿಷ್ಠ ಲಾಭಗಳಿಸುವಿಕೆ. ಈ ಉದ್ದೇಶಕ್ಕಿರುವ ಮಿತಿಗಳನ್ನು ಅರ್ಥಮಾಡಿಕೊಂಡಿರುವ ಅರ್ಥಶಾಸ್ತ್ರಜ್ಞರು ಕಾರ್ಖಾನೆಯ ಬದಲೀ ಉದ್ದೇಶಗಳನ್ನು ನಿರೂಪಿಸಿದ್ದಾರೆ. ಅವುಗಳಲ್ಲಿ ಪ್ರೋ. ಬಾಮೋಲ್‌ರ ಮಾರಾಟ ಗರಿಷ್ಠತೆ (Sales Maxmisation) ಸಿದ್ಧಾಂತವು ಅತ್ಯಂತ ಪ್ರಸಿದ್ಧಿ ಪಡೆದಿದೆ. ಬಾಮೋಲ್‌ರ ಪ್ರಕಾರ ಯಾವುದೇ ಉತ್ಪಾದನಾ ಸ್ಥಾವರ ಸದಾಕಾಲ ಲಾಭ ಗರಿಷ್ಠತೆಯ ಉದ್ದೇಶವನ್ನು ಇರಿಸಿ ಕೊಂಡರೆ ಯಶಸ್ವಿಯಾಗಲು ಸಾಧ್ಯವಿಲ್ಲ. ಏಕೆಂದರೆ ಲಾಭ ಗರಿಷ್ಠತೆಯು ಶೋಷಣೆಯ ಅಂಶಗಳನ್ನು ಒಳಗೊಂಡಿರುತ್ತದೆ. ಆದುದರಿಂದ ಮಾರಾಟವನ್ನು ಹೆಚ್ಚಿಸಿ ದೀರ್ಘಕಾಲ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಉತ್ಪಾದಕರು ಯತ್ನಿಸುತ್ತಾರೆ ಎನ್ನುವುದು ಬಾಮೋಲರ ಅಭಿಪ್ರಾಯವಾಗಿದೆ.[೧೦]

ಕಾರ್ಖಾನೆಗಳ ಸಿದ್ಧಾಂತಗಳನ್ನು ಮಲ್ಲಿಗೆ ಬೆಳೆಗಾರರು ಗಳಿಸುವ ಆದಾಯದ ಹಿನ್ನೆಲೆಯಿಂದ ಪರಿಶೀಲಿಸಿದಾಗ ಮಲ್ಲಿಗೆ ಬೆಳೆಯು ಒಂದು ಉದ್ಯಮವಾಗಿ ಬೆಳವಣಿಗೆ ಹೊಂದುತ್ತಿರುವುದು ವೇದ್ಯವಾಗುತ್ತದೆ. ಎರಡೂ ಜಿಲ್ಲೆಗಳ ವಕ್ತೃಗಳ ಕೌಟುಂಬಿಕ ಆದಾಯದಲ್ಲಿ ಮಲ್ಲಿಗೆಯಿಂದ ಸರಿ ಸುಮಾರು ಶೇ.೬೫ ರಷ್ಟು ಆದಾಯ ಬರುತ್ತದೆ. ಈ ಪ್ರಮಾಣ ಕುಂದಾಪುರ ತಾಲೂಕಿನಲ್ಲಿ ಶೇ.೬೫.೮; ಉಡುಪಿ ತಾಲೂಕಿನಲ್ಲಿ ಶೇ.೬೦.೧; ಮತ್ತು ಕಾರ್ಕಳ ತಾಲೂಕಿನಲ್ಲಿ ೭೫.೪. ದಕ್ಷಿಣ ಕನ್ನಡ ಜಿಲ್ಲೆಯಲ್ಲೂ ಇದೇ ಪ್ರವೃತ್ತಿಯನ್ನು ಬಹುತೇಕವಾಗಿ ಗುರುತಿಸಬಹುದು. ಬೆಳ್ತಂಗಡಿ ತಾಲೂಕಿನಲ್ಲಿ ವಕ್ತೃಗಳ ಆದಾಯದಲ್ಲಿ ಮಲ್ಲಿಗೆಯಿಂದ ಬರುವ ಆದಾಯದ ಪಾಲು ಶೇ.೮೦.೫ ಸುಳ್ಯ ತಾಲೂಕಿನಲ್ಲಿ ಈ ಪ್ರಮಾಣ ಶೇ. ೭೭.೯ ಮತ್ತು ಪುತ್ತೂರಿನಲ್ಲಿ ಶೇ.೬೬.೮.

## ಕೋಷ್ಟಕ ೫.೧೪

### ಆದಾಯದಲ್ಲಿ ಮಲ್ಲಿಗೆಯ ಪಾತ್ರ

| ತಾಲೂಕು | ವಕ್ತೃಗಳ ಸರಾಸರಿ ವಾರ್ಷಿಕ ಆದಾಯ | ಮಲ್ಲಿಗೆ ಆದಾಯ ವಾರ್ಷಿಕ ಸರಾಸರಿ | ಮಲ್ಲಿಗೆ ಆದಾಯ (ಶೇಕಡಾ) |
|---|---|---|---|
| ಕುಂದಾಪುರ | ೬೧೫೦೦ | ೪೦೫೦೦ | ೬೫.೮ |
| ಉಡುಪಿ | ೯೪೦೦೦ | ೫೬೦೦೦ | ೬೦.೧ |
| ಕಾರ್ಕಳ | ೫೯೦೦೦ | ೪೪೫೦೦ | ೭೫.೪ |
| **ಉಡುಪಿ ಜಿಲ್ಲೆ** | **೭೧೫೦೦** | **೪೭೦೦೦** | **೬೭.೧** |
| ಮಂಗಳೂರು | ೯೫೦೦೦ | ೪೫೫೦೦ | ೪೭.೯ |
| ಬಂಟ್ವಾಳ | ೯೦೦೦೦ | ೪೮೦೦೦ | ೫೩.೩ |
| ಬೆಳ್ತಂಗಡಿ | ೭೪೫೦೦ | ೬೦೦೦೦ | ೮೦.೫ |
| ಪುತ್ತೂರು | ೮೦೦೦೦ | ೫೩೫೦೦ | ೬೬.೮ |
| ಸುಳ್ಯ | ೫೨೦೦೦ | ೪೦೫೦೦ | ೭೭.೯ |
| **ದ.ಕ ಜಿಲ್ಲೆ** | **೭೮೩೦೦** | **೪೯೫೦೦** | **೬೩.೨** |
| **ಎರಡು ಜಿಲ್ಲೆ** | **೭೪೯೦೦** | **೪೮೨೫೦** | **೬೫.೧೫** |

ಆಧಾರ: ಅಧ್ಯಯನದ ಪ್ರಾಥಮಿಕ ಸಮೀಕ್ಷಾ ಅಂಕಿ ಅಂಶಗಳು ೨೦೦೯-೧೦

ಮಲ್ಲಿಗೆಯಿಂದ ಬರುವ ಆದಾಯದ ಪ್ರಮಾಣದ ವಿಶ್ಲೇಷಣೆಯಿಂದ ಕೆಲವು ಖಚಿತ ತೀರ್ಮಾನಗಳಿಗೆ ನಾವು ಬರಬಹುದು.

- ಬಹುತೇಕ ಮಲ್ಲಿಗೆ ಬೆಳೆಗಾರರಿಗೆ ಮಲ್ಲಿಗೆಯು ಪ್ರಧಾನ ಆದಾಯ ಗಳಿಕೆಯ ಮೂಲವಾಗಿದೆ.

* ನಗರೀಕರಣಗೊಂಡ ಪ್ರದೇಶಗಳ ಮಲ್ಲಿಗೆ ಬೆಳೆಗಾರರ ಒಟ್ಟು ಆದಾಯದಲ್ಲಿ ಮಲ್ಲಿಗೆಯಿಂದ ಬರುವ ಆದಾಯ ತುಲನಾತ್ಮಕವಾಗಿ ಕಡಿಮೆಯಿರುತ್ತದೆ.
* ಗ್ರಾಮೀಣ ಪ್ರದೇಶಗಳ ಮಲ್ಲಿಗೆ ಬೆಳೆಗಾರರ ಆದಾಯದಲ್ಲಿ ಮಲ್ಲಿಗೆಯ ಆದಾಯ ಸಿಂಹಪಾಲು ಆಗಿರುತ್ತದೆ.

ಈ ವಿಶ್ಲೇಷಣೆಯ ಆಧಾರದಲ್ಲಿ ಮಲ್ಲಿಗೆ ಕೃಷಿಯು ಗ್ರಾಮೀಣ ಪ್ರದೇಶದಲ್ಲಿ ಆದಾಯ ಸೃಷ್ಟಿಸುವಲ್ಲಿ ಗಣನೀಯ ಪಾತ್ರ ವಹಿಸುವುದನ್ನು ತಿಳಿಸುತ್ತದೆ. ಆದುದರಿಂದ ಗ್ರಾಮೀಣ ಬಡತನ ಮತ್ತು ನಿರುದ್ಯೋಗ ನಿವಾರಣೆಯಲ್ಲಿ ಮಲ್ಲಿಗೆ ಕೃಷಿಗೆ ಮುಂದಿನ ದಿನಗಳಲ್ಲಿ ಪ್ರಧಾನ ಪಾತ್ರ ನಿಡುವುದನ್ನು ಮುನ್ನೂಹಿಸಬಹುದಾಗಿದೆ.

ಯಾವುದೇ ಯೋಜನೆಯನ್ನು ಕೈಗೆತ್ತಿಕೊಳ್ಳುವ ಮೊದಲು ಅದರ ವೆಚ್ಚ ಉತ್ಪನ್ನ ವಿಶ್ಲೇಷಣೆ (Cost-Output Analysis) ನಡೆಸುವುದು ಉದ್ಯಮವೊಂದರ ಲಕ್ಷಣವಾಗಿರುತ್ತದೆ.[೧೧] ರೈತರು ಆರಂಭದಲ್ಲಿ ಮಲ್ಲಿಗೆ ಬೆಳೆಯನ್ನು ಕೈಗೆತ್ತಿಕೊಳ್ಳಲು ಯಾವುದೇ ಆರ್ಥಿಕ ಕಾರಣಗಳು ಇದ್ದಂತೆ ಕಂಡು ಬರುವುದಿಲ್ಲ. ಆದರೆ ನಗರೀಕರಣ ಪ್ರಕ್ರಿಯೆಯಲ್ಲಿ ಎಲ್ಲ ಉತ್ಪನ್ನಗಳಿಗೂ ಬೆಲೆ ಬರುವಂತೆ, ಮಲ್ಲಿಗೆ ಒಂದು ಮೌಲ್ಯವನ್ನು ಗಳಿಸಿಕೊಂಡಿತು. ಇದಕ್ಕೆ ಕಾರಣ ಮಲ್ಲಿಗೆಯ ಬೇಡಿಕೆ ಹೆಚ್ಚಾದದ್ದು, ಬೇಡಿಕೆಯ ಏರಿಕೆಯು ಬೆಲೆಯನ್ನು ಹೆಚ್ಚಿಸುತ್ತದೆ ಮತ್ತು ಲಾಭದ ಪ್ರಮಾಣವನ್ನು ಹಿಗ್ಗಿಸುತ್ತದೆ. ಮಲ್ಲಿಗೆಯ ಪಾಲಿಗೂ ಈ ಸಿದ್ಧಾಂತ ನಿಜವಾಯಿತು. ಇದು ಮಲ್ಲಿಗೆ ಬೆಳೆಗಾರರ ಸಂಖ್ಯೆ ಹೆಚ್ಚಾಗಲು ಕಾರಣವಾಯಿತು.

ಕ್ಷೇತ್ರಾಧ್ಯಯನ ಕಾಲದಲ್ಲಿ ಲಭ್ಯವಾದ ದತ್ತಾಂಶಗಳನ್ನು ಆಧರಿಸಿ ಮಲ್ಲಿಗೆ ಬೆಳೆಯ ಸರಾಸರಿ ವೆಚ್ಚ ಉತ್ಪನ್ನ ಅನುಪಾತವನ್ನು ಕೋಷ್ಟಕವೊಂದರಲ್ಲಿ ಅಭಿವ್ಯಕ್ತಿಸಲಾಗಿದೆ.

## ಕೋಷ್ಟಕ ೫.೧೫

## ಮಲ್ಲಿಗೆ ಬೆಳೆಯ ವೆಚ್ಚ ಉತ್ಪನ್ನ ಅನುಪಾತ

| ತಾಲೂಕು | ೨೦ : ೮೦ | ೨೫ : ೭೫ | ೩೦ :೭೦ | ೪೦ :೬೦ |
|---|---|---|---|---|
| ಕುಂದಾಪುರ | ೧೪.೨ | ೨೮.೫ | ೪೨.೮ | ೧೪.೫ |
| ಉಡುಪಿ | ೧೦.೦ | ೨೦.೦ | ೩೬.೭ | ೩೩.೩ |
| ಕಾರ್ಕಳ | – | – | ೮೦.೦ | ೨೦.೦ |
| **ಉಡುಪಿ ಜಿಲ್ಲೆ** | **೮.೦೬** | **೧೬.೧೬** | **೫೩.೨** | **೨೨.೬** |
| ಮಂಗಳೂರು | ೯.೦ | ೨೭.೨ | ೪೫.೪ | ೧೮.೪ |
| ಬಂಟ್ವಾಳ | ೫.೦ | ೧೫.೦ | ೪೫.೦ | ೩೫.೦ |
| ಬೆಳ್ತಂಗಡಿ | ೮.೦ | ೧೨.೦ | ೭೨.೦ | ೮.೦ |
| ಪುತ್ತೂರು | ೧೬.೭ | ೩೩.೩ | ೫೦.೦ | – |
| ಸುಳ್ಯ | ೧೦.೦ | ೨೦.೦ | ೬೦.೦ | ೧೦.೦ |
| **ದ.ಕ ಜಿಲ್ಲೆ** | **೯.೭೪** | **೨೧.೫** | **೫೪.೪೮** | **೧೪.೨೮** |
| **ಎರಡು ಜಿಲ್ಲೆ** | **೮.೯** | **೧೮.೮೩** | **೫೩.೮೪** | **೧೮.೪೪** |

**ಆಧಾರ: ಅಧ್ಯಯನದ ಪ್ರಾಥಮಿಕ ಸಮೀಕ್ಷಾ ಅಂಕಿ ಅಂಶಗಳು ೨೦೦೯-೧೦**

ಉಡುಪಿ ಜಿಲ್ಲೆಯ ವಕ್ತ್ಯಗಳಲ್ಲಿ ೨೦ : ೮೦ ರ ವೆಚ್ಚ ಉತ್ಪನ್ನ ಅನುಪಾತದವರ ಪ್ರಮಾಣ ೮.೦೬. ದ.ಕ. ಜಿಲ್ಲೆಯಲ್ಲಿ ಈ ಪ್ರಮಾಣ ಶೇ.೯.೭೪. ಉಡುಪಿ ಜಿಲ್ಲೆಯಲ್ಲಿ ೨೫ : ೭೫ ರ ವೆಚ್ಚ ಉತ್ಪನ್ನ ಅನುಪಾತದ ವಕ್ತ್ಯಗಳ ಪ್ರಮಾಣ ಶೇ.೧೬.೧೬ ಮತ್ತು ದ.ಕ. ಜಿಲ್ಲೆಯಲ್ಲಿ ಶೇ.೨೧.೫. ಉಡುಪಿ ಜಿಲ್ಲೆಯಲ್ಲಿ ೩೦ : ೭೦ ವೆಚ್ಚ-ಉತ್ಪನ್ನ ಅನುಪಾತದ ವಕ್ತ್ಯಗಳ ಪ್ರಮಾಣ ಶೇ.೫೩.೨ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶೇ.೫೪.೪೮. ಉಡುಪಿ ಜಿಲ್ಲೆಯಲ್ಲಿ ೪೦ : ೬೦ ವೆಚ್ಚ-ಉತ್ಪನ್ನ ಅನುಪಾತದ ವಕ್ತ್ಯಗಳ ಪ್ರಮಾಣ ಶೇ.೨೨.೬ ಮತ್ತು ದ.ಕ. ಜಿಲ್ಲೆಯಲ್ಲಿ ಶೇ.೧೪.೨೮. ವಕ್ತ್ಯಗಳ ಪೈಕಿ ಅರ್ದಾಂಶಕ್ಕಿಂತಲೂ ಹೆಚ್ಚು ಮಂದಿಯ ವೆಚ್ಚ-ಉತ್ಪನ್ನ ಅನುಪಾತವು ೩೦ : ೭೦ ಆಗಿರುತ್ತದೆ. ಇದು ಮಲ್ಲಿಗೆ ಕೃಷಿಗೆ ಹಾಕಿದ ಬಂಡವಾಳವು ಎರಡು

ಪಟ್ಟಿಗಿಂತ ಹೆಚ್ಚು ಪ್ರತಿಫಲ ನೀಡುವುದನ್ನು ಸೂಚಿಸುತ್ತದೆ. ಆದುದರಿಂದ ಮಲ್ಲಿಗೆ ಬೆಳೆ ಅತ್ಯಂತ ಲಾಭದಾಯಕ ಎನ್ನುವ ತೀರ್ಮಾನಕ್ಕೆ ನಾವು ಬರಬಹುದು.

ಅಧ್ಯಯನಕ್ಕೆ ಆಯ್ದುಕೊಂಡ ಎರಡು ಜಿಲ್ಲೆಗಳಲ್ಲಿ ಶೇ. ೫೩.೮೪ ವಕ್ತೃಗಳ ವೆಚ್ಚ – ಉತ್ಪನ್ನ ಅನುಪಾತವು ೩೦: ೭೦ ಆಗಿರುವುದನ್ನು ಕಾಣಬಹುದು. ಶೇ. ೨೭.೬ ಮಂದಿ ವಕ್ತೃಗಳು ಇದಕ್ಕಿಂತ ಕಡಿಮೆ ವೆಚ್ಚ – ಉತ್ಪನ್ನ ಅನುಪಾತ ಹೊಂದಿರುವುದು ಕಂಡು ಬರುತ್ತದೆ. ಶೇ.೧೮.೪೪ ಮಂದಿ ವಕ್ತೃಗಳು ೪೦ : ೬೦ ವೆಚ್ಚ ಉತ್ಪನ್ನ ವರ್ಗಕ್ಕೆ ಸೇರಿದವರಾಗಿರುತ್ತಾರೆ.

ವೆಚ್ಚ ಕಡಿಮೆಯಾಗಿ ಉತ್ಪನ್ನ ಹೆಚ್ಚಾಗುವುದು ಲಾಭದಾಯಕತೆಯ ಲಕ್ಷಣ ಕೆಲವು ವಕ್ತೃಗಳು ಕಡಿಮೆ ವೆಚ್ಚದಲ್ಲಿ ಹೆಚ್ಚು ಉತ್ಪಾದನೆ ಮಾಡಲು ಕೆಲವು ನಿರ್ದಿಷ್ಟ ಕಾರಣಗಳನ್ನು ಮೌಖಿಕ ಸಂದರ್ಶನ ಕಾಲದಲ್ಲಿ ನೀಡಿದ್ದಾರೆ. ಮಲ್ಲಿಗೆ ಬೆಳೆಗೆ ಪೂರಕವಾದ ಮಣ್ಣಿನ ಸಾರ, ಸುಲಭವಾಗಿ ನೀರಿನ ಮತ್ತು ಹಸಿರು ಸೊಪ್ಪಿನ ಲಭ್ಯತೆ ಹಾಗೂ ಅನುವಂಶೀಯತೆಯ ಗುಣಗಳು ವೆಚ್ಚ ಕಡಿಮೆಯಿರಲು ಕಾರಣವಾಗಿರುತ್ತದೆ. ಏನಿದ್ದರೂ ಹಾಕಿದ್ದಕ್ಕಿಂತ ಹೆಚ್ಚು ಬಂಡವಾಳವನ್ನು ಮಲ್ಲಿಗೆ ಉದ್ಯಮದಿಂದ ಪಡೆಯಲು ಸಾಧ್ಯ ಎನ್ನುವುದು ಕ್ಷೇತ್ರಾಧ್ಯಯನ ಕಾಲದಲ್ಲಿ ಗಮನಕ್ಕೆ ಬಂದ ಅಂಶ. ಇದು ಕೃಷಿಯು ಲಾಭದಾಯಕದ ಉದ್ಯಮವಲ್ಲ ಎಂದು ವಾದಿಸುವವರು ಗಮನಿಸಬೇಕಾದ ವಿಚಾರವಾಗಿರುತ್ತದೆ.

ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಮಲ್ಲಿಗೆ ಕೃಷಿಯು ಸಣ್ಣ ಪ್ರಮಾಣದ ಬಂಡವಾಳವನ್ನು ಬಯಸುವ ಕೌಟುಂಬಿಕ ವೃತ್ತಿಯಾಗಿರುವುದು ಈಗಾಗಲೇ ನಮ್ಮ ಗಮನಕ್ಕೆ ಬಂದಿರುತ್ತದೆ. ಆದರೂ ಗೊಬ್ಬರ, ನೀರು ಸಂಗ್ರಹ ಮತ್ತು ಸಾಗಾಟಕ್ಕೆಂದು ಬೆಳೆಗಾರರು ಖರ್ಚು ಮಾಡಬೇಕಾಗಿ ಬರುತ್ತದೆ. ಮಲ್ಲಿಗೆ ಕೃಷಿಯ ಉತ್ಪಾದನಾ ವೆಚ್ಚವನ್ನು ಹೀಗೆ ತೋರಿಸಬಹುದು.[೧೨]

ವೆಚ್ಚ = ಕೂಲಿ + ಗಿಡಗಳ ಬೆಲೆ + ಗೊಬ್ಬರದ ಮೌಲ್ಯ + ನೀರಾವರಿ ಮೌಲ್ಯ + ಸಂಗ್ರಹದ ಖರ್ಚು + ಸಾಗಾಟದ ಖರ್ಚು. ಬಹುತೇಕವಾಗಿ ಈ ಖರ್ಚುಗಳನ್ನು ವಕ್ತೃಗಳು ತಾವೇ ಭರಿಸುತ್ತಾರೆ. ಕೋಷ್ಟಕ ೫.೧೬ ಮಲ್ಲಿಗೆ ಬೆಳೆಯ ಹಣಕಾಸಿನ ವಿವಿಧ ಮೂಲಗಳನ್ನು ತೋರಿಸುತ್ತದೆ.

## ಕೋಷ್ಟಕ ೫ .೧೬

## ಮಲ್ಲಿಗೆ ಬೆಳೆಯ ಹಣಕಾಸಿನ ಮೂಲಗಳು

| ತಾಲೂಕು | ಸ್ವಂತ | ವಾಣಿಜ್ಯ ಬ್ಯಾಂಕುಗಳು | ಸಹಕಾರಿ ಬ್ಯಾಂಕ್‌ಗಳು | ಸರಕಾರೇತರ ಸಂಘಟನೆಗಳು | ಖಾಸಗಿ ಇತರ | ಒಟ್ಟು |
|---|---|---|---|---|---|---|
| ಕುಂದಾಪುರ | ೭೦ | ೨೦ | - | ೧೦ | - | ೧೦೦ |
| ಉಡುಪಿ | ೮೫.೭ | ೧೪.೩ | - | - | - | ೧೦೦ |
| ಕಾರ್ಕಳ | ೬೩.೪ | ೧೩.೩ | ೨೩.೩ | - | - | ೧೦೦ |
| **ಉಡುಪಿ ಜಿಲ್ಲೆ** | **೭೩.೦೩** | **೧೫.೮೭** | **೭.೮** | **೩.೩** | - | **೧೦೦** |
| ಮಂಗಳೂರು | ೭೨.೮ | - | ೨೭.೨ | - | - | ೧೦೦ |
| ಬಂಟ್ವಾಳ | ೭೦.೦೭ | ೧೫ | ೫.೦ | ೧೦ | - | ೧೦೦ |
| ಬೆಳ್ತಂಗಡಿ | ೬೪ | ೧೬ | - | ೨೦ | - | ೧೦೦ |
| ಪುತ್ತೂರು | ೬೬.೭ | ೮.೩ | - | ೨೫ | - | ೧೦೦ |
| ಸುಳ್ಯ | ೭೦ | - | ೨೦ | ೧೦ | - | ೧೦೦ |
| **ದ.ಕ ಜಿಲ್ಲೆ** | **೬೮.೭** | **೭.೮೬** | **೧೦.೪೪** | **೧೩** | - | **೧೦೦** |
| **ಎರಡು ಜಿಲ್ಲೆ** | **೭೦.೦** | **೧೧.೮** | **೯.೧** | **೮.೨** | - | **೧೦೦** |

**ಆಧಾರ: ಅಧ್ಯಯನದ ಪ್ರಾಥಮಿಕ ಸಮೀಕ್ಷಾ ಅಂಕಿ ಅಂಶಗಳು ೨೦೦೯-೧೦**

ಉಡುಪಿ ಜಿಲ್ಲೆಯ ಶೇ ೭೩.೦೩ ಮಂದಿ ವಕ್ತೃಗಳು ಮಲ್ಲಿಗೆ ಬೆಳೆಯ ಖರ್ಚನ್ನು ಸ್ವಂತ ಗಳಿಕೆಯಿಂದ ನಿಭಾಯಿಸುತ್ತಾರೆ. ಇಂತಹವರ ಪ್ರಮಾಣ ಉಡುಪಿ ತಾಲೂಕಿನಲ್ಲಿ ಶೇ. ೮೫.೭; ಕುಂದಾಪುರ ತಾಲೂಕಿನಲ್ಲಿ ಶೇ. ೭೦.೦ ಮತ್ತು ಕಾರ್ಕಳ ತಾಲೂಕಿನಲ್ಲಿ ಶೇ. ೬೩.೪. ದಕ್ಷಿಣ ಕನ್ನಡ ಜಿಲ್ಲೆಯ ವಕ್ತೃಗಳಲ್ಲಿ ಶೇ. ೬೮.೭ ಮಂದಿ ತಮ್ಮ ಗಳಿಕೆಯಿಂದಲೇ ಮಲ್ಲಿಗೆ ಕೃಷಿಯ ವೆಚ್ಚವನ್ನು ಭರಿಸುತ್ತಾರೆ. ಇವರ ಪ್ರಮಾಣ ಮಂಗಳೂರು ತಾಲೂಕಿನಲ್ಲಿ ಶೇ. ೭೨.೮, ಬಂಟ್ವಾಳ ತಾಲೂಕಿನಲ್ಲಿ ೭೦.೦೭, ಸುಳ್ಯ ತಾಲೂಕಿನಲ್ಲಿ ಶೇ. ೭೦, ಪುತ್ತೂರು ತಾಲೂಕಿನಲ್ಲಿ ಶೇ. ೬೬.೭ ಮತ್ತು ಬೆಳ್ತಂಗಡಿ ತಾಲೂಕಿನಲ್ಲಿ ಶೇ. ೬೪. ನಗರೀಕರಣ ಪ್ರಕ್ರಿಯೆಗೆ ಒಳಗಾದ ಪ್ರದೇಶಗಳಲ್ಲಿನ ಬಹುತೇಕ ವಕ್ತೃಗಳು ಮಲ್ಲಿಗೆ ಕೃಷಿಗೆ ಬೇಕಾದ

ಹಣಕಾಸನ್ನು ಸ್ವಂತ ಮೂಲಗಳಿಂದಲೇ ಭರಿಸಿಕೊಳ್ಳುವುದನ್ನು ಗಮನಿಸಬಹುದು. ವಾಣಿಜ್ಯ ಬ್ಯಾಂಕುಗಳು ಮತ್ತು ಸಹಕಾರಿ ಬ್ಯಾಂಕುಗಳು ಮಲ್ಲಿಗೆ ಕೃಷಿಗೆ ಹಣಕಾಸನ್ನು ಸ್ವಲ್ಪ ಮಟ್ಟಿಗೆ ಒದಗಿಸುತ್ತದೆ. ಇತ್ತೀಚೆಗೆ ಸರಕಾರೇತರ ಸಂಘಟನೆಗಳು ಕೂಡಾ ಮಲ್ಲಿಗೆ ಕೃಷಿಯ ಹಣಕಾಸಿನ ಮೂಲಗಳೆನಿಸಿವೆ. ಆದರೆ ಅವುಗಳ ಪಾತ್ರ ತೀರಾ ನಗಣ್ಯವಾದುದು.

ಚಿತ್ರ ೫.೨ ಎರಡೂ ಜಿಲ್ಲೆಗಳ ಮಲ್ಲಿಗೆ ಬೆಳೆಯ ಹಣಕಾಸಿನ ಮೂಲಗಳನ್ನು ತೋರಿಸುತ್ತದೆ.




**ಚಿತ್ರ ೫.೨ ಎರಡೂ ಜಿಲ್ಲೆಗಳ ಮಲ್ಲಿಗೆ ಬೆಳೆಯ ಹಣಕಾಸಿನ ಮೂಲಗಳು**

ಬಹುತೇಕ ವಕ್ತೃಗಳು ಸ್ವಂತ ಮೂಲದಿಂದ ಅಥವಾ ಮಲ್ಲಿಗೆಯ ಗಳಿಕೆಯಿಂದಲೇ ಮಲ್ಲಿಗೆ ಕೃಷಿ ವೆಚ್ಚವನ್ನು ಭರಿಸುತ್ತಿದ್ದಾರೆ. ವಸ್ತುಶಹಃ ಅವರಿಗೆ ವಿಶೇಷ ಸಾಲ ಸೌಲಭ್ಯದ ಅಗತ್ಯವಿರುವಂತೆ ಕಾಣುವುದಿಲ್ಲ. ಆದರೆ ಮಲ್ಲಿಗೆ ಕೃಷಿ ವಿಸ್ತರಣೆ ಕಾಲದಲ್ಲಿ ಅಥವಾ ಹೊಸದಾಗಿ ಮಲ್ಲಿಗೆ ಕೃಷಿಯನ್ನು ಆರಂಭಿಸುವವರಿಗೆ ಸಂಘಟನಾತ್ಮಕ ಹಣಕಾಸಿನ ನೆರವಿನ ಅಗತ್ಯವಿದೆ. ವಾಣಿಜ್ಯ ಬ್ಯಾಂಕುಗಳು ಮತ್ತು ಸಹಕಾರಿ ಬ್ಯಾಂಕುಗಳು ನೀಡುವ ಕೃಷಿ ಸಾಲವನ್ನು ಕೆಲವು ಮಲ್ಲಿಗೆ ಬೆಳೆಗಾರರು ಕೃಷಿ ವಿಸ್ತರಣೆಗಾಗಿ ಅಥವಾ ಮೂಲ ಸರಂಜಾಮುಗಳಿಗಾಗಿ ಬಳಸಿಕೊಳ್ಳುತ್ತಾರೆ. ಎರಡೂ ಜಿಲ್ಲೆಗಳಲ್ಲಿ ಸಕ್ರಿಯವಾಗಿರುವ ಸ್ವಸಹಾಯ ಗುಂಪುಗಳ ಸದಸ್ಯರು ಮಲ್ಲಿಗೆ ಬೆಳೆಯನ್ನು ಒಂದು ಆದಾಯದ ಪ್ರಮುಖ ಮೂಲವಾಗಿ ಪರಿಗಣಿಸುತ್ತಿದ್ದಾರೆ. ಹಾಗಾಗಿ ಸ್ವಸಹಾಯ ಗುಂಪುಗಳು ಕೂಡಾ ಮಲ್ಲಿಗೆ ಬೆಳೆಯ ಹಣಕಾಸಿನ ಮೂಲಗಳಾಗಿ ತಮ್ಮ ಮಿತಿಯೊಳಗೆ ಕಾರ್ಯನಿರ್ವಹಿಸುತ್ತವೆ.

## ೫.೪ ಮಲ್ಲಿಗೆ ಬೆಳೆಗಾರರ ಸಮಸ್ಯೆಗಳು

ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಮಲ್ಲಿಗೆ ಬೆಳೆಗಾರರು ಎದುರಿಸುತ್ತಿರುವ ಸಮಸ್ಯೆಗಳ ಬಗ್ಗೆ ಕ್ಷೇತ್ರಾಧ್ಯಯನದ ಸಂದರ್ಭದಲ್ಲಿ ಮಾಹಿತಿ ಕಲೆ ಹಾಕಲಾಯಿತು. ಮಲ್ಲಿಗೆ ಬೆಳೆಗಾರರು ಎದುರಿಸುವ ಸಮಸ್ಯೆಗಳು ನೀರಾವರಿ, ಗೊಬ್ಬರ, ರೋಗ ನಿರ್ವಹಣೆ, ಮಾರಾಟ ಮತ್ತು ಮೌಲ್ಯ ನಿರ್ಧಾರಕ್ಕೆ ಸಂಬಂಧಿಸಿದವುಗಳಾಗಿವೆ.

ಮಲ್ಲಿಗೆ ಬೆಳೆಯು ಮೂಲ ಸರಂಜಾಮುಗಳಲ್ಲಿ ನೀರು ಅತ್ಯಂತ ಪ್ರಮುಖವಾದವುಗಳು. ಕೋಷ್ಟಕ ೫.೧೭ ಮಲ್ಲಿಗೆ ಬೆಳೆಯ ನೀರಾವರಿ ಮೂಲಗಳನ್ನು ತೋರಿಸುತ್ತದೆ.

ಮಲ್ಲಿಗೆ ಬೆಳೆಗೆ ಬಹುತೇಕವಾಗಿ ವಕ್ತೃಗಳು ಬಾವಿ ನೀರನ್ನು ಅವಲಂಬಿಸಿರುತ್ತಾರೆ. ಕುಂದಾಪುರ ತಾಲೂಕಿನಲ್ಲಿ ಶೇ. ೫೭.೧, ಉಡುಪಿ ಮತ್ತು ಕಾರ್ಕಳ ತಾಲೂಕುಗಳಲ್ಲಿ ಶೇ. ೬೦, ಮಂಗಳೂರು ತಾಲೂಕಿನಲ್ಲಿ ಶೇ. ೬೩.೮, ಬಂಟ್ವಾಳ ತಾಲೂಕಿನಲ್ಲಿ ಶೇ. ೬೫, ಬೆಳ್ತಂಗಡಿ ತಾಲೂಕಿನಲ್ಲಿ ಶೇ. ೫೬, ಪುತ್ತೂರು ತಾಲೂಕಿನಲ್ಲಿ ಶೇ. ೪೯.೫ ಮತ್ತು ಸುಳ್ಯ ತಾಲೂಕಿನಲ್ಲಿ ಶೇ. ೫೦ ಮಂದಿ ವಕ್ತೃಗಳು ಬಾವಿ ನೀರಾವರಿ ಮೂಲಕ ಮಲ್ಲಿಗೆ ಕೃಷಿ ಮಾಡುತ್ತಿದ್ದಾರೆ. ಮಲ್ಲಿಗೆ ಕೃಷಿಗೆ ನೀರಾವರಿ ಮೂಲವಾಗಿ ಕೊಳವೆ ಬಾವಿಗಳು ಎರಡನೆಯ ಸ್ಥಾನವನ್ನು ಪಡೆದುಕೊಂಡಿವೆ. ಕುಂದಾಪುರ ತಾಲೂಕಿನಲ್ಲಿ ಶೇ. ೨೮.೭, ಉಡುಪಿ ತಾಲೂಕಿನಲ್ಲಿ ಶೇ. ೩೩.೩, ಕಾರ್ಕಳ ತಾಲೂಕಿನಲ್ಲಿ ಶೇ. ೨೦, ಮಂಗಳೂರು ತಾಲೂಕಿನಲ್ಲಿ ಶೇ. ೧೮.೧, ಬಂಟ್ವಾಳ ಮತ್ತು ಸುಳ್ಯ ತಾಲೂಕುಗಳಲ್ಲಿ ಶೇ. ೧೦, ಬೆಳ್ತಂಗಡಿ ತಾಲೂಕಿನಲ್ಲಿ ಶೇ. ೨೪ ಮತ್ತು ಪುತ್ತೂರು ತಾಲೂಕಿನಲ್ಲಿ ಶೇ. ೩೩.೩ ಮಂದಿ ಕೊಳವೆ ಬಾವಿ ನೀರನ್ನು ಮಲ್ಲಿಗೆ ಗಿಡಗಳಿಗೆ ನೀರುಣಿಸಲು ಬಳಸುತ್ತಿದ್ದಾರೆ. ನಳ್ಳಿ ನೀರನ್ನು ಮಲ್ಲಿಗೆ ಕೃಷಿಗೆ ಬಳಸುವವರ ಸಂಖ್ಯೆಯು ಗಣನೀಯವಾಗಿದೆ. ಕುಂದಾಪುರ ತಾಲೂಕಿನಲ್ಲಿ ಶೇ. ೧೪.೨, ಉಡುಪಿ ತಾಲೂಕಿನಲ್ಲಿ ಶೇ. ೬.೭, ಕಾರ್ಕಳ ತಾಲೂಕಿನಲ್ಲಿ ಶೇ. ೧೦, ಮಂಗಳೂರು ತಾಲೂಕಿನಲ್ಲಿ ಶೇ. ೧೮.೧, ಬಂಟ್ವಾಳ ತಾಲೂಕಿನಲ್ಲಿ ಶೇ. ೨೦, ಬೆಳ್ತಂಗಡಿ ತಾಲೂಕಿನಲ್ಲಿ ಶೇ. ೧೬, ಪುತ್ತೂರು ತಾಲೂಕಿನಲ್ಲಿ ಶೇ. ೧೬.೬ ಮತ್ತು ಸುಳ್ಯ ತಾಲೂಕಿನಲ್ಲಿ ಶೇ. ೧೦ ಮಂದಿ ವಕ್ತೃಗಳು ಸಾರ್ವಜನಿಕ ನಳ್ಳಿ ನೀರನ್ನು ಮಲ್ಲಿಗೆ ಕೃಷಿಗಾಗಿ ಬಳಸುತ್ತಿದ್ದಾರೆ. ನದಿ, ಕೆರೆ, ತೋಡು ಇತ್ಯಾದಿ ಮೂಲಗಳಿಂದ ಕಾರ್ಕಳ ತಾಲೂಕಿನ ಶೇ. ೧೦ ಮಂದಿ ಬಂಟ್ವಾಳ ತಾಲೂಕಿನ ಶೇ. ೫ ಮಂದಿ, ಬೆಳ್ತಂಂಗಡಿ ತಾಲೂಕಿನ ಶೇ. ೪ ಮಂದಿ ಮತ್ತು ಸುಳ್ಯ ತಾಲೂಕಿನ ಶೇ. ೩೦ ಮಂದಿ ರೈತರು ಮಲ್ಲಿಗೆ ಬೆಳೆಯುತ್ತಿದ್ದಾರೆ.

## ಕೋಷ್ಟಕ ೫. ೧೭

## ವಕ್ತೃಗಳ ನೀರಾವರಿ ಮೂಲಗಳು

| ತಾಲೂಕು | ನಳ್ಳಿ | ಬಾವಿ | ಕೊಳವೆ ಬಾವಿ | ನದಿ/ಕೆರೆ, ತೋಡು | ಒಟ್ಟು |
|---|---|---|---|---|---|
| ಕುಂದಾಪುರ | ೧೪.೨ | ೫೭.೧ | ೨೮.೭ | - | ೧೦೦ |
| ಉಡುಪಿ | ೬.೭ | ೬೦.೦ | ೩೩.೩ | - | ೧೦೦ |
| ಕಾರ್ಕಳ | ೧೦.೦ | ೬೦.೦ | ೨೦.೦ | ೧೦.೦ | ೧೦೦ |
| **ಉಡುಪಿ ಜಿಲ್ಲೆ** | **೧೦.೩** | **೫೯.೦** | **೨೭.೩೩** | **೩.೩** | **೧೦೦** |
| ಮಂಗಳೂರು | ೧೮.೧ | ೬೩.೮ | ೨೭.೩೩ | ೩.೩ | ೧೦೦ |
| ಬಂಟ್ವಾಳ | ೨೦.೦ | ೬೫ | ೧೦ | ೫ | ೧೦೦ |
| ಬೆಳ್ತಂಗಡಿ | ೧೬ | ೫೬ | ೨೪ | ೪ | ೧೦೦ |
| ಪುತ್ತೂರು | ೧೬.೬ | ೪೯.೫ | ೩೩.೩ | - | ೧೦೦ |
| ಸುಳ್ಯ | ೧೦ | ೫೦ | ೧೦ | ೩೦ | ೧೦೦ |
| **ದ.ಕ ಜಿಲ್ಲೆ** | **೧೬.೦೪** | **೫೬.೮೬** | **೧೯.೦೮** | **೭.೮** | **೧೦೦** |
| **ಎರಡು ಜಿಲ್ಲೆ** | **೧೩.೧೭** | **೫೭.೯೩** | **೨೩.೨೦** | **೫.೫೫** | **೧೦೦** |

ಆಧಾರ: ಅಧ್ಯಯನದ ಪ್ರಾಥಮಿಕ ಸಮೀಕ್ಷಾ ಅಂಕಿ ಅಂಶಗಳು ೨೦೦೯-೧೦

ಚಿತ್ರ ೫.೧೦ ಎರಡೂ ಜಿಲ್ಲೆಗಳ ಮಲ್ಲಿಗೆ ಬೆಳೆಯ ನೀರಾವರಿ ಮೂಲಗಳನ್ನು ತೋರಿಸುತ್ತದೆ.




**ಚಿತ್ರ ೫.೧೦ ಮಲ್ಲಿಗೆ ಬೆಳೆಯ ನೀರಾವರಿ ಮೂಲಗಳು**

ವಕ್ತೃಗಳಲ್ಲಿ ಅರ್ಧಾಂಶಕ್ಕಿಂತಲೂ ಹೆಚ್ಚು ಮಂದಿ ಮಲ್ಲಿಗೆ ಕೃಷಿಗೆ ನೀರುಣಿಸುವ ಬಾವಿಗಳನ್ನು ಅವಲಂಬಿಸಬೇಕಾಗಿ ಬಂದಿದೆ. ಸುಮಾರು ಕಾಲಂಶ ಮಂದಿ ಕೊಳವೆ ಬಾವಿಯ ನೀರಿನಿಂದ ಮಲ್ಲಿಗೆ ಕೃಷಿ ನಡೆಸುತ್ತಿದ್ದಾರೆ. ಬೇಸಿಗೆ ಕಾಲದಲ್ಲಿ ಸಹಜವಾಗಿ ನೀರಿನ ಕ್ಷಾಮ ತಲೆದೋರುವುದರಿಂದ ಮಲ್ಲಿಗೆ ಕೃಷಿಗಾರರು ನೀರಿನ ಸಮಸ್ಯೆಯನ್ನು ಎದುರಿಸುತ್ತಿದ್ದಾರೆ. ನಳ್ಳಿಗಳ ಮೂಲಕ ಬರುವ ಕುಡಿಯುವ ನೀರನ್ನು ಮಲ್ಲಿಗೆ ಕೃಷಿಗಾಗಿ ಬಳಸುವವರ ಪ್ರಮಾಣ ಶೇ.೧೩ ರಷ್ಟಿದೆ. ಇದು ಸಾರ್ವಜನಿಕ ಸೊತ್ತಿನ ದುರುಪಯೋಗವೆನಿಸುತ್ತದೆ. ಬೇಸಿಗೆಯಲ್ಲಿ ಎರಡೂ ಜಿಲ್ಲೆಗಳಲ್ಲಿ ಕುಡಿಯುವ ನೀರಿನ ಸಮಸ್ಯೆಯಿದೆ. ಅಂತಹ ಸಂದರ್ಭದಲ್ಲಿ ಕುಡಿಯುವ ನೀರನ್ನು ಮಲ್ಲಿಗೆ ಕೃಷಿಗಾಗಿ ಬಳಸುವುದು ನೈತಿಕ ಅಪರಾಧ (Moral Offence) ಎನಿಸುತ್ತದೆ. ಆದರೆ ಮಲ್ಲಿಗೆ ಆದಾಯದಿಂದಲೇ ಬದುಕು ಸಾಗಿಸುವವರಿಗೆ ಅನ್ಯ ದಾರಿ ಇಲ್ಲದಿರುವಾಗ ಅನಿವಾರ್ಯವಾಗಿ ಅವರು ಸಾರ್ವಜನಿಕ ನಳ್ಳಿ ನೀರನ್ನು ಮಲ್ಲಿಗೆ ಕೃಷಿಗಾಗಿ ಬಳಸಬೇಕಾಗುತ್ತದೆ. ಇದನ್ನು ತಪ್ಪಿಸಲು ನೀರಾವರಿಯ ಅನ್ಯ ಮೂಲಗಳನ್ನು ಕಂಡುಹುಡುಕಿ ಬಳಸಿಕೊಳ್ಳಬೇಕಾಗಿದೆ.

ಗೊಬ್ಬರವು ಮಲ್ಲಿಗೆ ಕೃಷಿಯ ಇನ್ನೊಂದು ಪ್ರಮುಖ ಮೂಲ ಸರಂಜಾಮು ಆಗಿದೆ. ಹಟ್ಟಿ ಗೊಬ್ಬರ, ಹಟ್ಟಿ ಗಂಜಳ, ಬೇವಿನ ಹಿಂಡಿ, ಬೂದಿ ಮತ್ತು ಸುಡುಮಣ್ಣು, ನೆಲಕಡಲೆ ಹಿಂಡಿ, ರಾಸಾಯನಿಕ ಗೊಬ್ಬರ, ಆಡು ಮತ್ತು ಕೋಳಿಯ ಹಿಕ್ಕೆ, ಎರೆಹುಳ ಗೊಬ್ಬರ ಇವು ಮಲ್ಲಿಗೆ

ಕೃಷಿಗೆ ಬಳಕೆಯಾಗುವ ಗೊಬ್ಬರಗಳಾಗಿವೆ. ಇವುಗಳ ಬಳಕೆಯ ಸಂಯೋಜನೆಯನ್ನು ಕೋಷ್ಟಕ ೫.೧೮ರಲ್ಲಿ ನೀಡಲಾಗಿದೆ.

ಕೋಷ್ಟಕ ೫.೧೮

## ಮಲ್ಲಿಗೆ ಕೃಷಿಯ ಗೊಬ್ಬರ ಸಂಯೋಜನೆ

| ತಾಲೂಕು | ಹಟ್ಟಿ ಗೊಬ್ಬರ | ಹಟ್ಟಿ ಗಂಜಳ | ಬೇವಿನ ಹಿಂಡಿ | ಸುಡು ಮಣ್ಣು | ನೆಲ ಕಡಲೆ ಹಿಂಡಿ | ರಾಸಾಯನಿಕ ಗೊಬ್ಬರ | ಇತರ |
|---|---|---|---|---|---|---|---|
| ಕುಂದಾಪುರ | ೧೪.೩ | ೨೮.೫ | ೧೪.೩ | ೮೫.೭ | ೨೮.೫ | ೮೫.೭ | ೨೮.೫ |
| ಉಡುಪಿ | ೪೦.೦ | ೨೦.೦ | ೬೭.೦ | ೧೦೦ | ೧೦೦ | ೫೦.೦ | ೬೭ |
| ಕಾರ್ಕಳ | ೧೦ | ೩೦ | ೨೦ | ೧೦೦ | ೧೦೦ | ೬೦.೦ | ೨೦ |
| **ಉಡುಪಿ ಜಿಲ್ಲೆ** | **೨೧.೪೩** | **೨೬.೧೬** | **೩೩.೭೬** | **೯೫.೨೩** | **೭೬.೧೬** | **೬೫.೨** | **೩೮.೫** |
| ಮಂಗಳೂರು | ೩೬.೪ | ೨೭.೨ | ೩೬.೪ | ೮೧.೮ | ೧೦೦ | ೯೦.೯ | ೨೭.೨ |
| ಬಂಟ್ವಾಳ | ೨೫.೦ | ೩೦.೦ | ೧೫.೦ | ೯೦.೦ | ೯೦.೦ | ೭೫.೦ | ೧೦ |
| ಬೆಳ್ತಂಗಡಿ | ೪೮.೦ | ೪೮ | ೨೪ | ೧೦೦ | ೭೨ | ೯೨ | ೮.೦ |
| ಪುತ್ತೂರು | ೮೩.೩ | ೮೩.೩ | ೨೫.೫ | ೯೧.೬ | ೯೧.೬ | ೭೫.೦ | ೩೩.೩ |
| ಸುಳ್ಯ | ೯೦.೦ | ೮೦.೦ | ೨೦.೦ | ೮೦.೦ | ೮೦.೦ | ೯೦.೦ | ೨೦.೦ |
| **ದ.ಕ. ಜಿಲ್ಲೆ** | **೫೬.೫೪** | **೫೩.೭** | **೨೪.೧೮** | **೮೮.೬೮** | **೮೬.೭೨** | **೮೪.೫೮** | **೧೯.೭** |
| **ಎರಡು ಜಿಲ್ಲೆ** | **೭೮.೯೮** | **೩೯.೯೩** | **೨೮.೯೭** | **೯೧.೯೫** | **೮೧.೪೪** | **೭೪.೮೯** | **೨೯.೧** |

ಆಧಾರ: ಅಧ್ಯಯನದ ಪ್ರಾಥಮಿಕ ಸಮೀಕ್ಷಾ ಅಂಕಿ ಅಂಶಗಳು ೨೦೦೯–೧೦.

ಮಲ್ಲಿಗೆ ಕೃಷಿಗೆ ಬಳಕೆಯಾಗುವ ಗೊಬ್ಬರಗಳಲ್ಲಿ ಸುಡುಮಣ್ಣು ಮತ್ತು ಬೂದಿಗೆ ಪ್ರಥಮ ಸ್ಥಾನ. ಉಡುಪಿ ಜಿಲ್ಲೆಯ ವಕ್ತೃಗಳಲ್ಲಿ ಶೇ. ೯೫.೨೩ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ವಕ್ತೃಗಳಲ್ಲಿ ಶೇ. ೮೮.೬೮ ಮಂದಿ ಸುಡುಮಣ್ಣು ಮತ್ತು ಬೂದಿಯನ್ನು ಮಲ್ಲಿಗೆ ಕೃಷಿಗೆ ಬಳಸುತ್ತಿದ್ದಾರೆ. ಉಡುಪಿ ಜಿಲ್ಲೆಯಲ್ಲಿ ನೆಲಕಡಲೆ ಹಿಂಡಿಯನ್ನು ಬಳಸುವವರ ಪ್ರಮಾಣ ಶೇ.

೭೬.೧೬ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶೇ. ೮೬.೭೨. ಉಡುಪಿ ಜಿಲ್ಲೆಯ ಶೇ. ೬೫.೨ ಮಂದಿ ವಕ್ತೃಗಳು ರಾಸಾಯನಿಕ ಗೊಬ್ಬರವನ್ನು ಬಳಸುತ್ತಾರೆ. ದಕ್ಷಿಣ ಕನ್ನಡದಲ್ಲಿ ರಾಸಾಯನಿಕ ಗೊಬ್ಬರ ಬಳಸುವ ವಕ್ತೃಗಳ ಪ್ರಮಾಣ ಶೇ. ೮೪.೫೮. ಹಟ್ಟಿ ಗಂಜಳ ಮಲ್ಲಿಗೆ ಕೃಷಿಗೆ ಅತ್ಯಂತ ಸೂಕ್ತವಾದ ಮೂಲ ಸರಂಜಾಮು. ಉಡುಪಿ ಜಿಲ್ಲೆಯ ಶೇ. ೨೬.೧೬ ಮಂದಿ ವಕ್ತೃಗಳು ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಶೇ. ೫೩.೭ ಮಂದಿ ವಕ್ತೃಗಳು ಹಟ್ಟಿ ಗಂಜಳವನ್ನು ಮಲ್ಲಿಗೆ ಕೃಷಿಗೆ ಬಳಸುತ್ತಾರೆ. ಉಡುಪಿ ಜಿಲ್ಲೆಯ ಹಟ್ಟಿ ಗೊಬ್ಬರವನ್ನು ಬಳಸುವ ಪ್ರಮಾಣ ಶೇ. ೨೧.೪೩, ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶೇ. ೫೬.೫೪. ಬೇವಿನ ಹಿಂಡಿಯನ್ನು ಉಡುಪಿ ಜಿಲ್ಲೆಯಲ್ಲಿ ಶೇ. ೩೩.೭೬ ಮಂದಿ ಬಳಸಿದರೆ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶೇ. ೨೪.೧೮ ಮಂದಿ ಬಳಸುತ್ತಿದ್ದಾರೆ. ಆಡಿನ ಹಿಕ್ಕೆ, ಕೋಳಿಯ ಹಿಕ್ಕೆ, ಎರೆಹುಳ ಗೊಬ್ಬರ ಇತ್ಯಾದಿಗಳನ್ನು ಬಳಸುವ ಪ್ರಮಾಣ ಉಡುಪಿ ಜಿಲ್ಲೆಯಲ್ಲಿ ಶೇ.೩೮.೫ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶೇ.೧೯.೨ ಆಗಿರುತ್ತದೆ.

ಮಲ್ಲಿಗೆ ಬೆಳೆಗಾರರು ಹಟ್ಟಿಗೊಬ್ಬರ ಗಂಜಳಕ್ಕಿಂತ ಹೆಚ್ಚು ಸುಡುಮಣ್ಣು, ನೆಲಕಡಲೆ ಹಿಂಡಿ, ರಾಸಾಯನಿಕ ಗೊಬ್ಬರ ಇತ್ಯಾದಿಗಳನ್ನು ಅವಲಂಬಿಸಿದ್ದಾರೆ. ವಾಸ್ತವವಾಗಿ ಹಟ್ಟಿಗೊಬ್ಬರ ಮತ್ತು ಗಂಜಳ ಮಲ್ಲಿಗೆ ಕೃಷಿಗೆ ಅತ್ಯುಪಯುಕ್ತವಾದ ಮೂಲ ಸರಂಜಾಮುಗಳು. ಆದರೆ ಮಲ್ಲಿಗೆ ಬೆಳೆಗಾರರು ಬಹುತೇಕರು ಅತೀ ಸಣ್ಣ ರೈತರು. ಅವರು ರಾಸುಗಳನ್ನು ಕೊಂಡು ಹಟ್ಟಿ ನಿರ್ಮಿಸಿ ಗೊಬ್ಬರ ಮತ್ತು ಗಂಜಳ ಪಡೆಯುವ ಸ್ಥಿತಿಯಲ್ಲಿ ಇಲ್ಲ. ಅಲ್ಲದೇ ನಗರೀಕರಣಗೊಂಡ ಪ್ರದೇಶಗಳಲ್ಲಿ ಅರಣ್ಯ ನಾಶವಾಗಿರುವುದರಿಂದ ಹಸಿರು ಸೊಪ್ಪುಗಳು ಇಲ್ಲವಾಗಿ ಹಟ್ಟಿ ಗೊಬ್ಬರ ಕಣ್ಮರೆಯಾಗಿ ಬಿಟ್ಟಿದೆ. ಇದು ರಾಸಾಯನಿಕ ಗೊಬ್ಬರದ ಮೇಲಿನ ಅವಲಂಬನೆಯನ್ನು ಹೆಚ್ಚಿಸಿದೆ. ರಾಸಾಯನಿಕ ಗೊಬ್ಬರಗಳು ಬಳಕೆಯ ಆರಂಭದಲ್ಲಿ ಇಳುವರಿಯನ್ನು ಹೆಚ್ಚಿಸುತ್ತದೆ. ಆದರೆ ಕಾಲ ಕ್ರಮೇಣ ಅವು ಮಣ್ಣಿನ ಮೂಲ ಮತ್ತು ಅವಿನಾಶಿಗುಣವನ್ನು ನಾಶ ಮಾಡಿ ಕಡಿಮೆ ಇಳುವರಿಗೆ ಕಾರಣವಾಗುತ್ತದೆ. ಸಾಂಪ್ರದಾಯಿಕ ಅರ್ಥಶಾಸ್ತ್ರಜ್ಞನಾದ ಡೇವಿಡ್ ರಿಕಾರ್ಡೋ ಭೂಮಿಯ ಮಿಗುತೆಯನ್ನು ಮಣ್ಣಿನ ಮೂಲ ಮತ್ತು ಅವಿನಾಶಗುಣಗಳ ಬಳಕೆಗಾಗಿ ಸಿಗುವ ಪ್ರತಿಫಲವೆಂದು ಕರೆದಿದ್ದಾನೆ. ರಾಸಾಯನಿಕ ಗೊಬ್ಬರಗಳ ಬಳಕೆ ಅತಿಯಾದಾಗ ಭೂಮಿಯು ಮಿಗುತೆಯನ್ನು ಸೃಷ್ಟಿಸುವ ಸಾಮರ್ಥ್ಯವನ್ನು ಕಳಕೊಳ್ಳುತ್ತದೆ.[೧೩]

ಮಲ್ಲಿಗೆ ಕೃಷಿಗೆ ತಗಲುವ ರೋಗಗಳ ವಿವರಗಳನ್ನು ಕೋಷ್ಟಕ ೫.೧೯ ತೋರಿಸುತ್ತದೆ

## ಕೋಷ್ಟಕ ೫.೧೯

### ಮಲ್ಲಿಗೆ ಕೃಷಿಗೆ ತಗಲುವ ರೋಗಗಳು

| ತಾಲೂಕು | ಬೆಂಕಿರೋಗ | ಗೆದ್ದಲು ಹುಳಬಾಧೆ | ಎಲೆ ಉದುರುವಿಕೆ | ಮೊಗ್ಗು ಮುದುಡುವಿಕೆ | ಇತರ |
|---|---|---|---|---|---|
| ಕುಂದಾಪುರ | ೩೩.೩ | ೨೬.೬ | ೧೩.೩ | – | – |
| ಉಡುಪಿ | ೪೨.೮ | ೫೭.೧ | ೪೨.೦ | ೧೪.೨ | ೨೮.೫ |
| ಕಾರ್ಕಳ | – | ೨೦.೦ | ೧೦.೦ | – | ೧೦.೦ |
| **ಉಡುಪಿ ಜಿಲ್ಲೆ** | **೨೫.೪** | **೩೪.೬** | **೨೨.೧** | **೪.೭೪** | **೧೨.೮** |
| ಮಂಗಳೂರು | ೬೩.೬ | ೭೨ | ೩೬.೩ | ೫೪.೫ | ೧೮.೧ |
| ಬಂಟ್ವಾಳ | ೨೫ | ೪೦ | ೫೦ | ೧೦.೦ | – |
| ಬೆಳ್ತಂಗಡಿ | ೨೦ | ೧೨.೦ | ೨೪ | ೪.೦ | – |
| ಪುತ್ತೂರು | ೧೬.೬ | ೩೩.೩ | ೮.೩ | – | – |
| ಸುಳ್ಯ | ೧೦.೦ | – | – | ೧೦.೦ | – |
| **ದ.ಕ. ಜಿಲ್ಲೆ** | **೨೭.೦೪** | **೩೧.೪೬** | **೨೩.೭೨** | **೧೫.೭** | **೩.೦೧** |
| **ಎರಡು ಜಿಲ್ಲೆ** | **೨೬.೨೨** | **೩೧.೮೮** | **೨೨.೯೧** | **೧೦.೨೨** | **೭.೯** |

**ಆಧಾರ: ಅಧ್ಯಯನದ ಪ್ರಾಥಮಿಕ ಸಮೀಕ್ಷಾ ಅಂಕಿ ಅಂಶಗಳು ೨೦೦೯–೧೦.**

ಮಲ್ಲಿಗೆ ಬೆಳೆಯನ್ನು ಅತ್ಯಂತ ಹೆಚ್ಚು ಕಾಡುವ ರೋಗ ಗೆದ್ದಲು ಹುಳದ ಭಾದೆ. ಉಡುಪಿ ಜಿಲ್ಲೆಯ ಶೇ. ೩೪.೬ ಮಂದಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಶೇ. ೩೧.೮೮ ಮಂದಿ ಗೆದ್ದಲು ಹುಳದ ಭಾದೆಯಿಂದ ಮಲ್ಲಿಗೆ ಕೃಷಿ ತೊಂದರೆಗೊಳಗಾದುದನ್ನು ತಿಳಿಸಿದ್ದಾರೆ. ಈ ಕೃಷಿಕರನ್ನು ಕಾಡುವ ಎರಡನೆಯ ಅತೀ ದೊಡ್ಡ ರೋಗವೆಂದರೆ ಬೆಂಕಿರೋಗ. ಉಡುಪಿ ಜಿಲ್ಲೆಯ ವಕ್ತೃಗಳಲ್ಲಿ ಶೇ.೨೫.೪ ಮಂದಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ವಕ್ತೃಗಳಲ್ಲಿ ಶೇ.೨೭.೦೪ ಮಂದಿ ಬೆಂಕಿ ರೋಗದ ಬಗ್ಗೆ ತಮ್ಮ ಅಸಹಾಯಕತೆಯನ್ನು ತೋಡಿಕೊಂಡಿರುತ್ತಾರೆ. ಎಲೆ ಉದುರುವಿಕೆಯಿಂದ ಮಲ್ಲಿಗೆ ಕೃಷಿಗೆ ಹಾನಿಯಾಗುತ್ತಿರುವುದನ್ನು ಉಡುಪಿ ಜಿಲ್ಲೆಯ ಶೇ.೨೨.೮ ಮಂದಿ ಮತ್ತು ದಕ್ಷಿಣ ಕನ್ನಡ

ಶೇ.೨೩.೭೨ ಮಂದಿ ವರದಿ ಮಾಡಿದ್ದಾರೆ ಮೊಗ್ಗು ಮುದುಡುವಿಕೆಯ ಸಮಸ್ಯೆಯಿಂದ ಮಲ್ಲಿಗೆ ಬೆಳೆ ಕಡಿಮೆಯಾಗಿರುವುದನ್ನು ಉಡುಪಿ ಜಿಲ್ಲೆಯ ಶೇ.೪.೭೪ ಮಂದಿ ಮತ್ತು ದ.ಕ.ಜಿಲ್ಲೆಯ ಶೇ.೧೫.೭ ಮಂದಿ ತಿಳಿಸಿರುತ್ತಾರೆ.

ಚಿತ್ರ ೫.೧೨ ಎರಡು ಜಿಲ್ಲೆಗಳಲ್ಲಿ ಮಲ್ಲಿಗೆಗೆ ತಗಲುವ ರೋಗಗಳ ಬಗ್ಗೆ ಪ್ರತಿಕ್ರಿಯೆ ನೀಡಿದ ಬೆಳೆಗಾರರ ಪ್ರಮಾಣವನ್ನು ತೋರಿಸುತ್ತದೆ.




ಚಿತ್ರ. ೫.೧೯ ಮಲ್ಲಿಗೆ ಕೃಷಿಗೆ ತಗಲುವ ರೋಗಗಳು

ಗೆದ್ದಲು ಹುಳಬಾಧೆ, ಬೆಂಕಿರೋಗ ಮತ್ತು ಎಲೆ ಉದುರುವಿಕೆ ಮಲ್ಲಿಗೆ ಕೃಷಿಯನ್ನು ಪೀಡಿಸುವ ಪ್ರಧಾನ ರೋಗಗಳು. ಅಲ್ಪ ಪ್ರಮಾಣದಲ್ಲಿ ಮೊಗ್ಗು ಮುದುಡುವಿಕೆಯು ಮಲ್ಲಿಗೆ ಬೆಳೆಗಾರರನ್ನು ಒಂದು ಸಮಸ್ಯೆಯಾಗಿ ಕಾಡುತ್ತಿದೆ. ಈ ರೋಗಗಳ ಪರಿಹಾರಕ್ಕಾಗಿ ರೈತರು ಸಿಂಪಡಿಸುವ ರಾಸಾಯನಿಕವು ಇತರ ಕೆಲವು ಸಮಸ್ಯೆಗಳಿಗೆ ಕಾರಣವಾಗಿದೆ. ಎಲೆಗಳ ಬಣ್ಣ ಬದಲಾವಣೆ, ಗಿಡ ಒಣಗುವಿಕೆ, ಇಳುವರಿಯ ಇಳಿತ, ಇತ್ಯಾದಿ ಸಮಸ್ಯೆಗಳನ್ನು ರೈತರು ಎದುರಿಸಬೇಕಾಗಿ ಬಂದಿದೆ. ಈ ಸಮಸ್ಯೆಗಳು ನಗರೀಕರಣಗೊಂಡ ಪ್ರದೇಶಗಳಲ್ಲಿ ಹೆಚ್ಚು ಕಾಣಿಸಿಕೊಂಡಿದೆ. ಆದುದರಿಂದ ಕೆಲವು ರೈತರು ಜಲ ಮತ್ತು ವಾಯು ಮಾಲಿನ್ಯದಿಂದಾಗಿ ಈ ಸಮಸ್ಯೆಗಳು ಕಾಣಿಸಿಕೊಂಡಿವೆ ಎಂದು ಹೇಳಿಕೊಂಡಿದ್ದಾರೆ. ಮಲ್ಲಿಗೆಯ ಮಾರಾಟ ಪದ್ಧತಿಯಿಂದ ರೈತರು ತೊಂದರೆಗೊಳಗಾಗಿರುವುದನ್ನು ಅಧ್ಯಯನ ಕಾಲದಲ್ಲಿ ಕಂಡು ಕೊಳ್ಳಲಾಗಿದೆ. ಮಲ್ಲಿಗೆ ಮಾರಾಟ ಪದ್ಧತಿಯನ್ನು ಚಿತ್ರ ೫.೧೩ರಲ್ಲಿ ತೋರಿಸಲಾಗಿದೆ.




**ಚಿತ್ರ ೫.೧೦ ಮಲ್ಲಿಗೆ ಮಾರಾಟ ವ್ಯವಸ್ಥೆ**

ಸಂದರ್ಶಿಸಲಾದ ವಕ್ತೃಗಳು ಮಲ್ಲಿಗೆಯನ್ನು ಸ್ಥಳೀಯವಾಗಿ ಅಥವಾ ಬಾಹ್ಯವಾಗಿ ಮಾರಾಟ ಮಾಡುತ್ತಾರೆ. ಸ್ಥಳೀಯ ಅಂಗಡಿಗಳು ಮತ್ತು ಕೆಲವು ಆರಾಧನಾ ಕೇಂದ್ರಗಳು ಪ್ರತಿದಿನ ಇವರಿಂದ ಮಲ್ಲಿಗೆ ಕೊಂಡುಕೊಳ್ಳುತ್ತಾರೆ. ಇದು ಅವರಿಗೆ ಒಂದು ಸ್ಥಿರ ಮಾರುಕಟ್ಟೆಯನ್ನು ಒದಗಿಸಿಕೊಟ್ಟಿದೆ. ಆದರೆ ಇಂತಹ ಮಾರಾಟದಿಂದ ಅವರ ಲಾಭದ ಪ್ರಮಾಣ ಹೆಚ್ಚಾಗಲು ಸಾಧ್ಯವಿಲ್ಲ ಎಂಬ ಆತಂಕವನ್ನು ಅವರು ವ್ಯಕ್ತಪಡಿಸಿದ್ದಾರೆ. ಹಬ್ಬ ಹರಿದಿನಗಳು, ಮದುವೆ ಪೂಜೆಗಳ ಸಂದರ್ಭಗಳು ಸ್ಥಳೀಯ ಗ್ರಾಹಕರಿಂದ ಮಲ್ಲಿಗೆಗೆ ತುರ್ತು ಬೇಡಿಕೆ ಬರುತ್ತದೆ. ಇಂತಹ ಸಂದರ್ಭಗಳಲ್ಲಿ ಲಾಭದ ಪ್ರಮಾಣ ಅಧಿಕವಾಗಿರುತ್ತದೆ.

ಬಾಹ್ಯವಾಗಿ ಏಜೆಂಟಗಳ ಮೂಲಕ ವ್ಯಾಪಾರಿಗಳಿಗೆ ಅಥವಾ ನೇರವಾಗಿ ವ್ಯಾಪಾರಿಗಳಿಗೆ ಮಲ್ಲಿಗೆಯ ಪೂರೈಕೆ ಮಾಡಲಾಗುತ್ತದೆ. ಏಜೆಂಟರುಗಳ ಮೂಲಕ ಮಾರಾಟ ಮಾಡಿದರೆ ಲಾಭದ ಪ್ರಮಾಣ ಸಹಜವಾಗಿ ಕಡಿಮೆಯಾಗುತ್ತದೆ. ನೇರವಾಗಿ ವ್ಯಾಪಾರಿಗಳಿಗೆ ಮಾರಾಟ ಮಾಡಿದರೆ ಬೇಡಿಕೆ ಮತ್ತು ಪೂರೈಕೆಗಳಿಗನುಗುಣವಾಗಿ ಲಾಭದ ಪ್ರಮಾಣದಲ್ಲಿ ಏರಿಳಿತಗಳಾಗುತ್ತದೆ. ಆದರೆ ವ್ಯಾಪಾರಿಗಳು ಮತ್ತು ಏಜೆಂಟರು ಮಲ್ಲಿಗೆ ಬೆಳೆಗಾರರಿಗೆ ತೀರ ತಡವಾಗಿ ಹಣವನ್ನು ಪಾವತಿಸುವ ಮತ್ತು ಕಡಿಮೆ ಬೆಲೆಯನ್ನು ಪಾವತಿಸುವ ಪ್ರಕರಣಗಳು ಸಾಕಷ್ಟು ದಾಖಲಾಗಿದೆ. ಕೋಷ್ಟಕ ೫.೨೦ ಮಲ್ಲಿಗೆಯ ಮಾರಾಟ ವ್ಯವಸ್ಥೆಯನ್ನು ತೋರಿಸುತ್ತದೆ.

## ಕೋಷ್ಟಕ ೫.೨೦

## ಮಲ್ಲಿಗೆ ಮಾರಾಟ ವ್ಯವಸ್ಥೆ (ಶೇ.)

| ತಾಲೂಕು | ಮಾರಾಟಗಾರರಿಗೆ ವಿಲೇವಾರಿ | ಗ್ರಾಹಕರಿಗೆ ನೇರ ವಿಲೇವಾರಿ | ಒಟ್ಟು |
|---|---|---|---|
| ಕುಂದಾಪುರ | ೮೫.೭೨ | ೧೪.೨೮ | ೧೦೦ |
| ಉಡುಪಿ | ೯೩.೩೩ | ೬.೬೭ | ೧೦೦ |
| ಕಾರ್ಕಳ | ೯೦.೦೦ | ೧೦.೦೦ | ೧೦೦ |
| ಉಡುಪಿ ಜಿಲ್ಲೆ | ೮೯.೬೮ | ೧೦.೩೨ | ೧೦೦ |
| ಮಂಗಳೂರು | ೯೦.೯೧ | ೮೦.೦೯ | ೧೦೦ |
| ಬಂಟ್ವಾಳ | ೯೦.೦೦ | ೧೦.೦೦ | ೧೦೦ |
| ಬೆಳ್ತಂಗಡಿ | ೮೮.೦೦ | ೧೨.೦೦ | ೧೦೦ |
| ಪುತ್ತೂರು | ೮೩.೩೦ | ೧೬.೭೦ | ೧೦೦ |
| ಸುಳ್ಯ | ೭೦.೦೦ | ೩೦.೦೦ | ೧೦೦ |
| ದ.ಕ ಜಿಲ್ಲೆ | ೮೪.೪೪ | ೧೫.೫೬ | ೧೦೦ |
| ಎರಡು ಜಿಲ್ಲೆ | ೮೭.೦೬ | ೧೨.೯೪ | ೧೦೦ |

**ಆಧಾರ: ಅಧ್ಯಯನದ ಪ್ರಾಥಮಿಕ ಸಮೀಕ್ಷಾ ಅಂಕಿ ಅಂಶಗಳು ೨೦೦೯–೧೦.**

ಉಡುಪಿ ಜಿಲ್ಲೆಯ ವಕ್ತೃಗಳಲ್ಲಿ ಶೇಕಡಾ ೮೯.೬೮ ವಕ್ತೃಗಳು ಮಾರಾಟಗಾರರಿಗೆ ಮಲ್ಲಿಗೆಯನ್ನು ನೇರವಾಗಿ ಪೂರೈಕೆ ಮಾಡುತ್ತಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶೇಕಡಾ ೮೪.೪೪ ಮಂದಿ ಬೆಳೆಗಾರರು ತಮ್ಮ ಮಲ್ಲಿಗೆ ಬೆಳೆಯನ್ನು ಮಾರಾಟಗಾರರಿಗೆ ನೇರವಾಗಿ ವಿಲೇವಾರಿ ಮಾಡುತ್ತಾರೆ. ಇವೆರಡು ಜಿಲ್ಲೆಗಳಲ್ಲೂ ಕಮಿಷನ್ ಏಜೆಂಟರುಗಳ ಹಾವಳಿ ತೀವ್ರವಾಗಿಲ್ಲ.

ಉಡುಪಿ ಜಿಲ್ಲೆಯಲ್ಲಿ ಗ್ರಾಹಕರಿಗೆ ಮಲ್ಲಿಗೆಯನ್ನು ನೇರವಾಗಿ ಶೇ. ೧೯.೩೨ ಮಂದಿ ವಕ್ತ್ರಗಳು ಮಾರಾಟ ಮಾಡುತ್ತಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಈ ಪ್ರಮಾಣ ಶೇ. ೧೫.೬. ತುಲನಾತ್ಮಕವಾಗಿ ನಗರೀಕರಣಗೊಂಡ ಪ್ರದೇಶಗಳಿಗಿಂತ ನಗರೀಕರಣಗೊಳ್ಳದ ಪ್ರದೇಶಗಳು ಗ್ರಾಹಕರಿಗೆ ನೇರ ಮಾರಾಟ ಮಾಡುವುದರಲ್ಲಿ ಪ್ರಗತಿ ಸಾಧಿಸಿವೆ ಎನ್ನುವುದು

ಕ್ಷೇತ್ರಾಧ್ಯಯನ ಕಾಲದಲ್ಲಿ ಕಂಡುಬಂದ ಒಂದು ವಾಸ್ತವಿಕ ಸತ್ಯ.[೧೪] ಚಿತ್ರ ೫.೧೪ ಮಲ್ಲಿಗೆ ಮಾರಾಟ ಸಂಯೋಜನೆಯನ್ನು ತೋರಿಸುತ್ತದೆ.




**ಚಿತ್ರ ೫.೧೧ ಮಲ್ಲಿಗೆಯ ಮಾರಾಟ ಕ್ರಮ**

ಎರಡೂ ಜಿಲ್ಲೆಗಳನ್ನು ಒಟ್ಟಾಗಿ ಪರಿಗಣಿಸಿದಾಗ ಶೇ. ೮೭.೦೬ ಮಂದಿ ವಕ್ತೃಗಳು ಮಲ್ಲಿಗೆಯನ್ನು ಮಾರಾಟಗಾರರಿಗೆ ನೇರವಾಗಿ ವಿಲೇವಾರಿ ಮಾಡುವುದು ಕಂಡುಬರುತ್ತದೆ. ಈ ಬೆಳೆಗಾರರಲ್ಲಿ ಕೆಲವರು ತಮ್ಮ ಊರಿಗೆ ಬರುವ ಬಸ್ಸುಗಳ ಮೂಲಕ ಪ್ರಧಾನ ಮಾರುಕಟ್ಟೆಯ ನಿಗಧಿತ ವ್ಯಾಪಾರಿಗಳಿಗೆ ಮಲ್ಲಿಗೆ ಅಟ್ಟಿಗಳನ್ನು[೧೫] ಕಳುಹಿಸಿಕೊಡುತ್ತಾರೆ. ನಿಶ್ಚಿತ ಮೊತ್ತವನ್ನು ಬಸ್ಸು ಚಾಲಕನಿಗೆ ಗೌರವ ಧನವಾಗಿ ನೀಡುತ್ತಾರೆ. ಆದರೆ ಬಹುತೇಕ ಬೆಳೆಗಾರರು ಮಲ್ಲಿಗೆ ಕಟ್ಟೆಯಲ್ಲಿ[೧೬] ಮಲ್ಲಿಗೆ ವ್ಯಾಪಾರಿಗಳಿಗೆ ತಮ್ಮ ಉತ್ಪನ್ನವನ್ನು ಮಾರಾಟ ಮಾಡುತ್ತಾರೆ. ಸಾಧಾರಣವಾಗಿ ಒಂದು ಪಟ್ಟಣ ಕೇಂದ್ರ ಮಲ್ಲಿಗೆ ಕಟ್ಟೆಯಾಗಿ ಕಾರ್ಯ ನಿರ್ವಹಿಸುತ್ತದೆ. ಶಂಕರಪುರದ ಮಲ್ಲಿಗೆ ಕಟ್ಟೆ ಎರಡು ಜಿಲ್ಲೆಗಳಿಗೆ ಮಲ್ಲಿಗೆ ಒದಗಿಸುವ ಪ್ರಮುಖ ಕೇಂದ್ರವಾಗಿ ಕಾರ್ಯನಿರ್ವಹಿಸುತ್ತದೆ.

ಬೆಳೆಗಾರರು ನೇರವಾಗಿ ಮಾರಾಟ ಮಾಡುವಾಗ ಬೆಲೆ ನಿರ್ಧಾರದ ಹಕ್ಕನ್ನು ಹೊಂದಿರುತ್ತಾರೆ. ಆದರೆ ಈ ಬೆಲೆಯು ಸಾಮಾನ್ಯವಾಗಿ ಮಾರುಕಟ್ಟೆಯಲ್ಲಿ ಚಾಲ್ತಿಯಲ್ಲಿರುವ ಬೆಲೆಯನ್ನು ಅವಲಂಬಿಸಿಕೊಂಡಿರುತ್ತದೆ. ಮಲ್ಲಿಗೆಯು ಒಂದು ಕೃಷಿ ಉತ್ಪನ್ನವಾಗಿದ್ದು ಅದರ ಮೌಲ್ಯವನ್ನು ಮಾರುಕಟ್ಟೆಯ ಶಕ್ತಿಗಳಾದ ಬೇಡಿಕೆ ಮತ್ತು ಪೂರೈಕೆಗಳು ನಿರ್ಧರಿಸುತ್ತವೆ. ಇದನ್ನು ಚಿತ್ರ ೫.೧೫ ತೋರಿಸುತ್ತದೆ.




ಚಿತ್ರ ೫. ೧೨ ಮಲ್ಲಿಗೆಯ ಬೆಲೆ ನಿರ್ಧಾರ

ಮಲ್ಲಿಗೆಯು ಅತ್ಯಂತ ಅಲ್ಪಾವಧಿ ಆಯುಷ್ಯವನ್ನು ಹೊಂದಿದ ಒಂದು ಉತ್ಪನ್ನ. ಅದರ ಪೂರೈಕೆಯನ್ನು ಅತ್ಯಂತ ಅಲ್ಪಾವಧಿಯಲ್ಲಿ ಹೆಚ್ಚಿಸಲು ಸಾಧ್ಯವಿಲ್ಲದ ಕಾರಣ ಪೂರೈಕೆ ರೇಖೆಯು (S,S) ಲಂಬ ರೂಪದ್ದಾಗಿದೆ. ಬೆಲೆ ನಿರ್ಧಾರದಲ್ಲಿ ಬೇಡಿಕೆ ಮಾತ್ರ ಮಹತ್ತರ ಪಾತ್ರ ವಹಿಸುತ್ತದೆ. ಬೇಡಿಕೆ ಹೆಚ್ಚಾದಾಗ ($D_2D_2$) ಬೆಲೆ ಹೆಚ್ಚಾಗುತ್ತದೆ. ($OP_2$) ಮುಂಚಿತವಾಗಿ ಅನುಭೋಗಿಗಳು ಸೂಚನೆ ಕೊಟ್ಟರೆ ಬೇರೆ ಕಡೆಗೆ ಪೂರೈಕೆ ಮಾಡುವ ಹೂವುಗಳ ಪ್ರಮಾಣವನ್ನು ಕಡಿಮೆ ಮಾಡಿ ತುರ್ತು ಅನುಭೋಗಿಗಳಿಗೆ ನೀಡಬೇಕಾಗುತ್ತದೆ. ಆದರೆ ಮಾರುಕಟ್ಟೆ ಪೂರೈಕೆಯಲ್ಲಿ ಯಾವುದೇ ಬದಲಾವಣೆ ಮಾಡಲು ಸಾಧ್ಯವಾಗುವುದಿಲ್ಲ. ಇಂತಹ ತುರ್ತು ಬೇಡಿಕೆ ನೇರವಾಗಿ ಬೆಳೆಗಾರರಿಗೆ ಬಂದರೆ ಅವರು ಪಡೆಯುವ ಲಾಭದ ಪ್ರಮಾಣ ಹೆಚ್ಚಾಗುತ್ತದೆ. ತುರ್ತು ಬೇಡಿಕೆ ಮಾರಾಟಗಾರರಿಗೆ ಹೋದರೆ ಲಾಭವು ಅವರ ಪಾಲಾಗುತ್ತದೆ.

ಹಾಗಿದ್ದರೂ ಬೇಡಿಕೆ ಹೆಚ್ಚಿರುವಾಗ ಮಾರುಕಟ್ಟೆ ಮೌಲ್ಯ ಹೆಚ್ಚಾಗಿರುವುದರಿಂದ ಮಲ್ಲಿಗೆ ಬೆಳೆಗಾರರು ಹೆಚ್ಚಿನ ಪ್ರತಿಫಲ ಪಡೆಯುತ್ತಾರೆ.

ಬೇಡಿಕೆ ಕುಸಿದರೆ $(D_1D_1)$ ಬೆಲೆ ಕುಸಿಯುತ್ತದೆ. $(OP_1)$ ಅಂತಹ ಸಂದರ್ಭಗಳಲ್ಲಿ ಮಾರಾಟಗಾರರ ಲಾಭದ ಪ್ರಮಾಣ ಕಡಿಮೆ ಇರುವುದರಿಂದ ಸಹಜವಾಗಿ ಮಲ್ಲಿಗೆ ಬೆಳೆಗಾರರಿಗೆ ಸಿಗುವ ಲಾಭಾಂಶ ಕಡಿಮೆಯಾಗುತ್ತದೆ. ಶೀತಲೀಕರಣ ವ್ಯವಸ್ಥೆಯಿಂದ ಮಲ್ಲಿಗೆಯ ಬಾಳಿಕೆಯ ಅವಧಿಯನ್ನು ಸ್ವಲ್ಪಮಟ್ಟಿಗೆ ವಿಸ್ತರಿಸಬಹುದು. ಮದುವೆ, ಗೃಹ ಪ್ರವೇಶ ಇತ್ಯಾದಿ ಶುಭ ಸಮಾರಂಭಗಳು ಹೆಚ್ಚಾಗುವಾಗ ಮಲ್ಲಿಗೆಗೆ ಹೆಚ್ಚು ಬೇಡಿಕೆ ಬರುತ್ತದೆ. ಶುಭ ಸಮಾರಂಭಗಳಿಗೆ ನಿಶ್ಚಿತ ಮುಹೂರ್ತಗಳಿರುತ್ತದೆ. ಇದರಿಂದಾಗಿ ಅಂತಹ ಮುಹೂರ್ತಗಳಿರುವ ದಿವಸಗಳಲ್ಲಿ ಮಾತ್ರ ಮಲ್ಲಿಗೆ ಬೇಡಿಕೆ ಅಧಿಕವಾಗಿರುತ್ತದೆ. ಮುಹೂರ್ತಗಳು ಇಲ್ಲದ ತಿಂಗಳಲ್ಲಿ ಅಥವಾ ಮೌಢ್ಯ ಕಾಲದಲ್ಲಿ ಮಲ್ಲಿಗೆ ಬೇಡಿಕೆ ಕುಸಿದು ಬೆಳೆಗಾರರು ಆತಂಕಕ್ಕೆ ಒಳಗಾಗುತ್ತಾರೆ. ಇದು ಮಲ್ಲಿಗೆ ಬೆಳೆಗಾರರಲ್ಲಿ ಅನಿಶ್ಚಿತತೆ ಮತ್ತು ಅಸ್ಥಿರತೆಯ ಭಾವವನ್ನು ಉಂಟುಮಾಡಿದೆ.

ಅಧ್ಯಯನ ನಡೆಸಲಾದ ಎರಡು ಜಿಲ್ಲೆಗಳ ವಕ್ತೃಗಳು ಕೂಡುವಳಿಗಳ ಬೆಲೆಯೇರಿಕೆ ಮತ್ತು ನೀರಾವರಿ ಸಮಸ್ಯೆಯನ್ನು ಪ್ರಧಾನ ಸಮಸ್ಯೆಗಳೆಂದು ಪರಿಗಣಿಸಿದ್ದಾರೆ. ಅವರನ್ನು ಕಾಡುವ ಇನ್ನೊಂದು ಮುಖ್ಯ ಸಮಸ್ಯೆ ಎಂದರೆ ಮಲ್ಲಿಗೆಯು ಕೆಡದಂತೆ ಕಾಪಾಡುವ ಸಮಸ್ಯೆ. ಬಹುತೇಕ ಬೆಳೆಗಾರರು ಶೀತಲೀಕರಣದ ವ್ಯವಸ್ಥೆಯನ್ನು ಹೊಂದಿಲ್ಲದ ಕಾರಣ ಹೂಗಳನ್ನು ಕಿತ್ತ ದಿವಸವೇ ಮಾರಾಟ ಮಾಡಬೇಕಾಗುತ್ತದೆ. ಅಂದು ಬೇಡಿಕೆ ಹೆಚ್ಚು ಇದ್ದರೆ ಅವರ ಅದೃಷ್ಟ. ಬೇಡಿಕೆ ಕುಸಿದಿದ್ದರೆ ದುರಾದೃಷ್ಟ ವಕ್ಕರಿಸಿಕೊಳ್ಳುತ್ತದೆ. ಈ ಸಂದರ್ಭದ ಸದುಪಯೋಗವನ್ನು ಮಾರಾಟಗಾರ ಮಾಡಿಕೊಳ್ಳುತ್ತಾನೆ. ಯಾಕೆಂದರೆ ಆತನಲ್ಲಿ ಶೀತಲೀಕರಣದ ವ್ಯವಸ್ಥೆ ಇರುತ್ತದೆ. ಕೂಡುವಳಿಗಳ ಬೆಲೆಯೇರಿಕೆ, ನೀರಿನ ಕೊರತೆ ಮತ್ತು ಶೀತಲೀಕರಣ ವ್ಯವಸ್ಥೆ ಇಲ್ಲದಿರುವಿಕೆ – ಈ ಸಮಸ್ಯೆಗಳಿಗೆ ಪರಿಹಾರ ಕಂಡುಕೊಳ್ಳುವವರೆಗೆ ತಮ್ಮ ಸಂಕಷ್ಟ ಪರಿಹಾರವಾಗುವುದಿಲ್ಲವೆಂದು ಮಲ್ಲಿಗೆ ಬೆಳೆಗಾರರು ಭಾವಿಸುತ್ತಾರೆ.

ಕ್ಷೇತ್ರ ಅಧ್ಯಯನ ಕಾಲದಲ್ಲಿ ಮಲ್ಲಿಗೆ ಬೆಳೆಗಾರರಿಗೆ ಆಧುನಿಕ ಪುಷ್ಪ ಉದ್ಯಮದ ಬಗ್ಗೆ ಎಷ್ಟರ ಮಟ್ಟಿಗೆ ಅರಿವು ಮತ್ತು ಒಲವು ಇದೆ ಎಂಬ ಪ್ರಶ್ನೆಯನ್ನು ಹಾಕಲಾಯಿತು. ಉಡುಪಿ ಜಿಲ್ಲೆಯಲ್ಲಿ ಶೇ. ೩೪.೧ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶೇ. ೩೯.೭ ಮಂದಿ ವಕ್ತೃಗಳಿಗೆ ಆಧುನಿಕ ಪುಷ್ಪ ಉದ್ಯಮದ ಬಗ್ಗೆ ಅರಿವು ಇದೆ. ಉಡುಪಿ ಜಿಲ್ಲೆಯಲ್ಲಿ ಶೇ.೬೫.೯ ಮಂದಿ, ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶೇ.೬೦.೩ ಮಂದಿ ವಕ್ತೃಗಳಿಗೆ ಆಧುನಿಕ ಪುಷ್ಪೋದ್ಯಮದ ಲಾಭದಾಯಕತೆಯ ಬಗ್ಗೆ ಅರಿವಿಲ್ಲ. ಅರಿವು ಇರುವ ವಕ್ತೃಗಳಲ್ಲಿ ಆಧುನಿಕ ಪುಷ್ಪೋದ್ಯಮ ಕೈಗೊಳ್ಳಲು ಇಚ್ಛಿಸುವವರ ಪ್ರಮಾಣ ಉಡುಪಿ ಜಿಲ್ಲೆಯಲ್ಲಿ ಶೇ.೨೫ ಮತ್ತು

ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶೇ.೪೮.೪ ಮಾತ್ರ ಅರಿವು ಇದ್ದು ಆಧುನಿಕ ಪುಷ್ಪ ಉದ್ಯಮದಲ್ಲಿ ತೊಡಗಿಸಿಕೊಳ್ಳಲು ಇಚ್ಛಿಸದವರು ಉಡುಪಿ ಜಿಲ್ಲೆಯಲ್ಲಿ ಶೇ.೭೫ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶೇ.೫೬.೧ ಮಂದಿಗಳು. ಮಲ್ಲಿಗೆ ಬೆಳೆಗಾರರಲ್ಲಿ ಹೊಸತನಕ್ಕೆ ತಮ್ಮನ್ನು ಒಡ್ಡಿಕೊಳ್ಳುವ ಆವಿಷ್ಕಾರಿಗಳು ತೀರಾ ಕಡಿಮೆಯಿರುವುದನ್ನು ಈ ಅಂಕಿ ಅಂಶಗಳು ತಿಳಿಸುತ್ತವೆ. ಅರಿವು ಇದ್ದು ಆಧುನಿಕ ಪುಷ್ಪ ಉದ್ಯಮಕ್ಕೆ ತಮ್ಮನ್ನು ಒಡ್ಡಿಕೊಳ್ಳಲು ಇಚ್ಛಿಸುವವರಲ್ಲಿ ಉಡುಪಿ ಜಿಲ್ಲೆಯಲ್ಲಿ ಶೇ. ೨೫ ಮಂದಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶೇ. ೩೩.೩ ಮಂದಿ ಅದು ಲಾಭದಾಯಕವೆಂದು ಭಾವಿಸುತ್ತಾರೆ. ಉಳಿದವರು ಆಧುನಿಕ ಪುಷ್ಪಗಳಿಗೆ ಹೆಚ್ಚು ಬೇಡಿಕೆ ಇರುವುದರಿಂದ ಅದನ್ನು ಒಂದು ಜೀವನೋಪಾಯವಾಗಿ ಮಾಡಿಕೊಳ್ಳಬಹುದೆಂದು ಭಾವಿಸುತ್ತಾರೆ.

ಅರಿವು ಇದ್ದು ನಿರ್ವಹಣೆ ಕ್ಲಿಷ್ಟಕರ ಎಂಬ ಕಾರಣಕ್ಕೆ ಆಧುನಿಕ ಪುಷ್ಪ ಉದ್ಯಮವನ್ನು ನೆಚ್ಚಿಕೊಳ್ಳಲು ಹಿಂದೇಟು ಹಾಕುವವರ ಪ್ರಮಾಣ ಉಡುಪಿ ಜಿಲ್ಲೆಯಲ್ಲಿ ಶೇ. ೪೧.೭ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶೇ. ೫೦. ಸ್ಥಳೀಯ ಬೇಡಿಕೆಯ ಕೊರತೆ ಒಂದು ಸಮಸ್ಯೆಯಾಗಿ ಕಾಡಬಹುದೆಂದು ಭಾವಿಸುವವರ ಪ್ರಮಾಣ ಉಡುಪಿ ಜಿಲ್ಲೆಯಲ್ಲಿ ಶೇ. ೩೩.೩ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶೇ. ೨೫. ಆರಂಭಿಕ ಭಂಡವಾಳದ ಕೊರತೆಯಿಂದಾಗಿ ಆಧುನಿಕ ಪುಷ್ಪೋದ್ಯಮಕ್ಕೆ ತಮ್ಮನ್ನು ತೆರೆದುಕೊಳ್ಳಲು ಇಚ್ಛಿಸದಿರುವವರ ಪ್ರಮಾಣ ಉಡುಪಿ ಜಿಲ್ಲೆಯಲ್ಲಿ ಶೇ. ೧೬.೭ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶೇ. ೧೮.೭.

ಈ ವಿಶ್ಲೇಷಣೆಗಳ ಫಲಿತಾಂಶಗಳನ್ನು ಮತ್ತು ಸಮಸ್ಯೆಗಳಿಗೆ ಪರಿಹಾರಗಳನ್ನು ಅಧ್ಯಾಯ ಏಳರಲ್ಲಿ ವಿಸ್ತೃತವಾಗಿ ಚರ್ಚಿಸಲಾಗಿದೆ.

## ಉಲ್ಲೇಖಗಳು ಮತ್ತು ಟಿಪ್ಪಣಿಗಳು

೧. ದಕ್ಷಿಣ ಕನ್ನಡ ಜಿಲ್ಲೆಯ ಅಂಕಿ ಅಂಶಗಳ ನೋಟ – ೨೦೦೮-೦೯, ಪೂರ್ವೋಕ್ತ, ಪು. ೧.

೨. ಉಡುಪಿ ಜಿಲ್ಲೆಯ ಅಂಕಿ ಅಂಶಗಳ ನೋಟ ೨೦೦೮-೦೯, ಪು. ೧.

೩. ಕರ್ನಾಟಕ ರಾಜ್ಯ ತೋಟಗಾರಿಕೆ ಇಲಾಖೆಯ ಅಂಕಿ ಅಂಶಗಳು, ೨೦೦೮-೦೯ ಪು. ೮.

೪. ಶಂಕರ ಪುರದ ಲಾನ್ಸಿಮಾರ್ಟಿಸ್ ಅವರು ನೀಡಿದ ಮಾಹಿತಿ.

೫. ಅಧ್ಯಯನ ಕಾಲದಲ್ಲಿ ಕಂಡುಕೊಂಡ ಪ್ರಕಾರ ಮಲ್ಲಿಗೆ ಬೆಳೆ ಕುಟುಂಬ ವೃತ್ತಿಯಾಗಿರುವಲ್ಲಿ ೨೦ಕ್ಕಿಂತ ಕೆಳಗಿನ ವಯೋಮಾನದ ಮಕ್ಕಳು ಗಿಡಗಳಿಗೆ ನೀರು ಹಾಕಲು, ಹೂ ಕೀಳಲು ಸಹಾಯ ಮಾಡುತ್ತಾರೆ. ೭೦ ಕ್ಕಿಂತ ಹೆಚ್ಚಿನ ವಯೋಮಾನದ ಹೆಂಗಸರು ಮಲ್ಲಿಗೆ ಮಾಲೆ ಕಟ್ಟಲು ನೆರವಾಗುತ್ತಾರೆ. ಆದರೆ ಇವರ ಸೀಮಾಂತ ಉತ್ಪಾದಕತೆಯನ್ನು ಕಂಡು ಹಿಡಿಯಲು ಸಾಧ್ಯವಿಲ್ಲದ ಕಾರಣ ಇವರ ಕೆಲಸವನ್ನು ಪ್ರಚ್ಛನ್ನ ನಿರುದ್ಯೋಗವೆಂದು ಪರಿಭಾವಿಸಬಹುದು.

೬. ಕ್ಷೇತ್ರಾಧ್ಯಯನದಲ್ಲಿ ದೊರೆತ ಮಾಹಿತಿ. ಮಾಹಿತಿ ನೀಡಿದವರು ಬೆಳ್ತಂಗಡಿಯ ಗಿರಿಯಪ್ಪ ನಾಯಕ.

೭. ಕ್ಷೇತ್ರಾಧ್ಯಯನದಲ್ಲಿ ಪಡೆದ ಮಾಹಿತಿ. ಮಾಹಿತಿ ನೀಡಿದವರು ಬೆಳ್ತಂಗಡಿ ತಾಲೂಕಿನ ಇಳಂತಿಲ ಗ್ರಾಮದ ಪೂವಣಿ ಗೌಡ.

೮. ಪ್ರಭಾಕರ ಶಿಶಿಲ, ೧೯೯೬; ಮಹಾನ್ ಅರ್ಥಶಾಸ್ತ್ರಜ್ಞರು, ಕಲಾ ಪ್ರಕಾಶನ ಬೆಂಗಳೂರು. ಪು. ೫೦೦ – ೫೦೧

೯. Schemacher E.F, 1977, 'Small is Beautiful', Radhakrishna Publication Delhi.

೧೦. ಕಾರ್ಖಾನೆಗಳ ಸಿದ್ಧಾಂತಗಳ ವಿವರಣೆ ನೋಡಿ

P.L Mehta, Business and Management Economics, 1986, Sulthan Chand and Sons, New Delhi, P. 28-47.

೧೧. Reddy and Appannaiah, Principles of Business Economics 2000, S. Chand and Co Ltd New Delhi, P. 288.

೧೨. Prabhakara Shishila, Principles of Managerial Economics, 1998, Spell Bound Publications, Hariyana P.302.

೧೩. ಪ್ರಭಾಕರ ಶಿಶಿಲ, ಆರ್ಥಿಕ ಚಿಂತನವಾಹಿನಿ, ೨೦೦೨, ಮಂಗಳ ಪ್ರಕಾಶನ ಮಂಗಳೂರು ಪು. ೮೭.

೧೪. ಕ್ಷೇತ್ರ ಸಂದರ್ಶನ ಕಾಲದಲ್ಲಿ ವಕ್ತೃಗಳು ನೀಡಿರುವ ಮಾಹಿತಿ.

೧೫. ಚೆಂಡು ಮತ್ತು ಅಟ್ಟಿಗಳು ಮಲ್ಲಿಗೆ ಹೂವಿನ ಪ್ರಮಾಣದ ಮಾಪನ ವಿಧಾನಗಳು. ೪ ಚೆಂಡುಗಳು ಒಟ್ಟು ಸೇರಿದರೆ ಒಂದು ಮಲ್ಲಿಗೆಯ ಅಟ್ಟಿ. ಒಂದು ಚೆಂಡು ಎಂದರೆ ಮಾಲೆಯಾಗಿ ಪೋಣಿಸಿದ ೧೦೦೦ ಹೂವುಗಳು.

೧೬. ಕಟ್ಟೆ ಎಂದರೆ ಮಲ್ಲಿಗೆ ಹೂವುಗಳ ಸಂಗ್ರಹಣಾ ಕೇಂದ್ರ. ಇಲ್ಲಿ ಮಲ್ಲಿಗೆ ದರವನ್ನು ಮುಂದಾಗಿ ಫಲಕದಲ್ಲಿ ಪ್ರಕಟಿಸಲಾಗುತ್ತದೆ. ನಿರ್ಧಿಷ್ಟ ಕಾಲಕ್ಕೆ ಮಲ್ಲಿಗೆ ಸಂಗ್ರಹ ಕೇಂದ್ರವಾದ ಕಟ್ಟೆಯಲ್ಲಿ ಬೆಳೆಗಾರರು ಮಲ್ಲಿಗೆ ಹೂವನ್ನು ಮಾರುತ್ತಾರೆ. ಕಟ್ಟೆಯಿಂದ ಹೂವುಗಳು ರಖಂ ವ್ಯಾಪಾರಿಗಳಿಗೆ ತಲುಪುತ್ತದೆ.

## ಅಧ್ಯಾಯ ೬

# ಮಲ್ಲಿಗೆ ಮಾರಾಟಗಾರರ ಸಮಸ್ಯೆಗಳು

ಅಧ್ಯಾಯ ಐದರ ಕೊನೆಯ ಭಾಗದಲ್ಲಿ ಮಲ್ಲಿಗೆ ಬೆಳೆಗಾರರು ಮಾರುಕಟ್ಟೆಯಲ್ಲಿ ಎದುರಿಸುತ್ತಿರುವ ಸಮಸ್ಯೆಗಳ ಬಗ್ಗೆ ವಿಶ್ಲೇಷಣೆ ನಡೆಸಲಾಗಿದೆ. ಒಂದರ್ಥದಲ್ಲಿ ಅದು ಏಕ ಮುಖ ವಿಶ್ಲೇಷಣೆ. ಮಲ್ಲಿಗೆ ಬೆಳೆಗಾರರು ತಮ್ಮ ಉತ್ಪನ್ನಕ್ಕೆ ಕಡಿಮೆ ಬೆಲೆ ಬಂದಾದ ಮಲ್ಲಿಗೆ ವ್ಯಾಪಾರಿಗಳನ್ನು ಅದಕ್ಕೆ ಕಾರಣರೆಂದು ಬೊಟ್ಟು ಮಾಡಿ ತೋರಿಸುತ್ತಾರೆ. ಆದರೆ ಮಲ್ಲಿಗೆ ವ್ಯಾಪಾರಿಗಳು ಮಲ್ಲಿಗೆ ಮಾರಾಟಕ್ಕೆ ಸಂಬಂಧಿಸಿದ ಸಮಸ್ಯೆಗಳಿಗೆ ವಿಭಿನ್ನ ಆಯಾಮದ ವಿವರಣೆ ನೀಡುತ್ತಾರೆ. ಸತ್ಯವೆನ್ನುವುದು ಅಖಂಡವಲ್ಲ; ಸಾಪೇಕ್ಷವಾದುದು. ಈ ಕಾರಣಕ್ಕಾಗಿ ಮಲ್ಲಿಗೆ ಬೆಳೆಗಾರರ ಅಧ್ಯಯನದ ಬಳಿಕ ಮಲ್ಲಿಗೆ ಮಾರಾಟಗಾರರ ಸಮಸ್ಯೆಗಳನ್ನು ಪರಿಚಯ ಮಾಡಿಕೊಳ್ಳಲು ಮತ್ತು ಅವುಗಳಿಗೆ ಪರಿಹಾರ ಕಂಡುಕೊಳ್ಳಲು ಅವರನ್ನು ಪ್ರತ್ಯೇಕವಾಗಿ ನಿಗದಿತ ಪ್ರಶ್ನಾವಳಿಯ ಸಹಿತ ಸಂದರ್ಶಿಸಲಾಯಿತು.

## ೬.೧ ಮಾರಾಟಗಾರರ ಭೌಗೋಳಿಕತೆ ಮತ್ತು ಸಂಗ್ರಹಣಾ ಸಮಸ್ಯೆ

ಸಂದರ್ಶಿಸಲಾದ ವ್ಯಾಪಾರಿಗಳ ಭೌಗೋಳಿಕತೆಯ ವಿವರವನ್ನು ಕೋಷ್ಟಕ ೬.೧ ತೋರಿಸುತ್ತದೆ.

ಕೋಷ್ಟಕ ೬.೧

**ವ್ಯಾಪಾರಿಗಳ ಭೌಗೋಳಿಕತೆ**

| ಜಿಲ್ಲೆ | ಮಾರಾಟಗಾರರು | ಸಂಖ್ಯೆ | ಶೇಕಡಾ |
|---|---|---|---|
| ಉಡುಪಿ ಜಿಲ್ಲೆ | ಚಿಲ್ಲರೆ | ೩೦ | ೩೫.೩ |
| | ರಖಂ | ೦೨ | ೦೨.೪ |
| ದ.ಕ. ಜಿಲ್ಲೆ | ಚಿಲ್ಲರೆ | ೫೦ | ೫೮.೮ |
| | ರಖಂ | ೦೩ | ೦೩.೫ |
| **ಒಟ್ಟು** | | **೮೫** | ೧೦೦ |

**ಆಧಾರ: ಅಧ್ಯಯನದ ಪ್ರಾಥಮಿಕ ಸಮೀಕ್ಷಾ ಅಂಕಿ ಅಂಶಗಳು ೨೦೦೯-೧೦.**

ಉಡುಪಿ ಜಿಲ್ಲೆಯಲ್ಲಿ ಒಟ್ಟು ೩೦ ಮಂದಿ ಚಿಲ್ಲರೆ ವ್ಯಾಪಾರಿಗಳನ್ನು ಮತ್ತು ಇಬ್ಬರು ರಖಂ ವ್ಯಾಪಾರಿಗಳನ್ನು ಸಂದರ್ಶಿಸಲಾಯಿತು. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೫೦ ಚಿಲ್ಲರೆ ವ್ಯಾಪಾರಿಗಳ ಮತ್ತು ಮೂರು ರಖಂ ವ್ಯಾಪಾರಿಗಳ ಸಂದರ್ಶನ ನಡೆಸಲಾಯಿತು. ಉಡುಪಿ ಜಿಲ್ಲೆಯಲ್ಲಿರುವುದಕ್ಕಿಂತ ಹೆಚ್ಚು ವ್ಯಾಪಾರಿಗಳು ದಕ್ಷಿಣ ಕನ್ನಡ ಜಿಲ್ಲೆಯಲ್ಲಿರುವುದು ಈ ಜಿಲ್ಲೆಗೆ ಹೆಚ್ಚು ಪ್ರಾತಿನಿಧ್ಯ ನೀಡಲು ಕಾರಣ. ತಾಲೂಕು ಕೇಂದ್ರಗಳಲ್ಲಿ ರಖಂ ವ್ಯಾಪಾರಿಗಳು ಕಂಡುಬಾರದ ಕಾರಣ ಉಡುಪಿ ಜಿಲ್ಲಾ ಕೇಂದ್ರದಿಂದ ಇಬ್ಬರು ಮತ್ತು ಮಂಗಳೂರು ನಗರದಿಂದ ಮೂವರು ರಖಂ ವ್ಯಾಪಾರಿಗಳನ್ನು ಸಂದರ್ಶಿಸಲಾಯಿತು. ಮಲ್ಲಿಗೆ ಬೆಳೆಗಾರರ ಹಾಗ ಮಲ್ಲಿಗೆ ಮಾರಾಟಗಾರರು ಕೂಡ ವಿಭಿನ್ನ ಸಮುದಾಯಗಳಿಗೆ ಸೇರಿದವರು. ಮಲ್ಲಿಗೆ ಮಾರಾಟಗಾರರ ಸಮುದಾಯ ಸಂಯೋಜನೆಯನ್ನು ಕೋಷ್ಟಕ ೬.೨ ರಲ್ಲಿ ನೀಡಲಾಗಿದೆ.

ಕೋಷ್ಟಕ ೬.೨

**ಮಲ್ಲಿಗೆ ಮಾರಾಟಗಾರರ ಸಮುದಾಯ ಸಂಯೋಜನೆ**

| ಧರ್ಮ | ಉಡುಪಿ ಜಿಲ್ಲೆ | | ದ.ಕ ಜಿಲ್ಲೆ | |
|---|---|---|---|---|
| | ವಕ್ತೃಗಳ ಸಂಖ್ಯೆ | ಶೇಕಡಾ | ವಕ್ತೃಗಳ ಸಂಖ್ಯೆ | ಶೇಕಡಾ |
| ಹಿಂದೂ | ೧೩ | ೪೦.೬ | ೧೯ | ೩೫.೮ |
| ಮುಸ್ಲಿಂ | ೧೦ | ೩೧.೩ | ೧೬ | ೩೦.೨ |
| ಕ್ರಿಶ್ಚಿಯನ್ | ೮ | ೨೫.೦ | ೧೬ | ೩೦.೨ |
| ಜೈನ್ | ೧ | ೩.೧ | ೨ | ೩.೮ |
| ಒಟ್ಟು | ೩೨ | ೧೦೦ | ೫೩ | ೧೦೦ |

ಆಧಾರ: ಅಧ್ಯಯನದ ಪ್ರಾಥಮಿಕ ಸಮೀಕ್ಷಾ ಅಂಕಿ ಅಂಶಗಳು ೨೦೦೯-೧೦.

ಉಡುಪಿ ಜಿಲ್ಲೆಯಲ್ಲಿ ಹಿಂದೂ ವ್ಯಾಪಾರಿಗಳು ಶೇ.೪೦.೬ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶೇ. ೩೫.೮. ಉಡುಪಿ ಜಿಲ್ಲೆಯ ಮುಸ್ಲಿಂ ವ್ಯಾಪಾರಿಗಳ ಪ್ರಮಾಣ ಶೇ. ೩೧.೩ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಮುಸ್ಲಿಂ ವ್ಯಾಪಾರಿಗಳ ಪ್ರಮಾಣ ಶೇ. ೩೦.೨. ಕ್ರಿಶ್ಚಿಯನ್ ವ್ಯಾಪಾರಿಗಳ ಪ್ರಮಾಣ ಅನುಕ್ರಮವಾಗಿ ಉಡುಪಿ ಜಿಲ್ಲೆಯಲ್ಲಿ ಶೇ. ೨೫ ಮತ್ತು ದಕ್ಷಿಣ ಕನ್ನಡ

ಜಿಲ್ಲೆಯಲ್ಲಿ ಶೇ.೩೦.೨. ಇವೆರಡೂ ಜಿಲ್ಲೆಗಳಲ್ಲಿ ಬೆರಳೆಣಿಕೆಯ ಪ್ರಮಾಣದ ಜೈನ ಸಮುದಾಯದ ಪುಷ್ಪ ವ್ಯಾಪಾರಿಗಳು ಕಂಡು ಬರುತ್ತಾರೆ.[೧]

ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಹಿಂದುಗಳು ಬಹುಸಂಖ್ಯಾತರು. ಆದುದರಿಂದ ಸಹಜವಾಗಿ ಹಿಂದು ವ್ಯಾಪಾರಿಗಳ ಸಂಖ್ಯೆ ಅಧಿಕ. ಈ ಮಾತು ತಾಲೂಕು ಕೇಂದ್ರಗಳ ಸಂದರ್ಭದಲ್ಲಿ ಹೆಚ್ಚು ನಿಖರತೆಯನ್ನು ಪಡೆದುಕೊಳ್ಳುತ್ತದೆ. ಆದರೆ ಜಿಲ್ಲಾ ಕೇಂದ್ರಗಳಲ್ಲಿ ಕ್ರಿಶ್ಚಿಯನ್ ಮತ್ತು ಮುಸ್ಲಿಂ ಸಮುದಾಯದ ವ್ಯಾಪಾರಿಗಳ ಸಂಖ್ಯೆ ಅಧಿಕವಿದೆ. ಮಂಗಳೂರು ಮತ್ತು ಉಡುಪಿ ಕೇಂದ್ರಗಳಲ್ಲಿ ಕ್ರಿಶ್ಚಿಯನ್ ಮಹಿಳಾ ವ್ಯಾಪಾರಿಗಳು ಬಹು ಸಂಖ್ಯೆಯಲ್ಲಿದ್ದಾರೆ. ಇವೆರಡು ಜಿಲ್ಲೆಗಳನ್ನು ಸಮಗ್ರವಾಗಿ ಪರಿಶೀಲಿಸಿದಾಗ ಹಿಂದು ವ್ಯಾಪಾರಿಗಳ ಸಂಖ್ಯೆ ಹೆಚ್ಚಿದ್ದರೂ ಕ್ರಿಶ್ಚಿಯನ್ ಮತ್ತು ಮುಸ್ಲಿಂ ಸಮುದಾಯಗಳ ಒಟ್ಟು ಜನಸಂಖ್ಯೆಯೊಡನೆ ಹೋಲಿಸಿದಾಗ ತುಲನಾತ್ಮಕವಾಗಿ ಹಿಂದೂ ವ್ಯಾಪಾರಿಗಳ ಸಂಖ್ಯೆ ಕಡಿಮೆಯಿರುವುದು ಕಂಡು ಬರುತ್ತದೆ.[೨]

ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳನ್ನು ಚುನಾವಣಾ ಆಯೋಗ ಕೋಮು ಸೂಕ್ಷ್ಮ ಪ್ರದೇಶಗಳೆಂದು ಪರಿಗಣಿಸಿದೆ. ಇದಕ್ಕೆ ಇವೆರಡು ಜಿಲ್ಲೆಗಳ ಹಿಂದು ಮತ್ತು ಮುಸ್ಲಿಂ ಮೂಲಭೂತವಾದಿಗಳು ಆಗಾಗ ಸಂಘರ್ಷ ನಡೆಸುತ್ತಿರುವುದು ಕಾರಣ. ಸಾಮಾನ್ಯವಾಗಿ ಎರಡೂ ಜಿಲ್ಲೆಗಳ ಜನರು ಕ್ರಿಶ್ಚಿಯನರನ್ನು ಶಾಂತಿಪ್ರಿಯರೆಂದು ಭಾವಿಸುತ್ತಾರೆ. ಆದರೆ ಎರಡು ವರ್ಷಗಳ ಹಿಂದೆ ಇವೆರಡೂ ಜಿಲ್ಲೆಗಳಲ್ಲಿ ಪ್ರಾರ್ಥನಾಲಯಗಳ[೩] ಮೇಲೆ ದಾಳಿಗಳಾದುವು. ಅಮಾಯಕರು ತೊಂದರೆಗೊಳಗಾದರು. ಆದರೆ ಕ್ಷೇತ್ರಾಧ್ಯಯನ ಕಾಲದಲ್ಲಿ ಕಂಡು ಬಂದ ಪ್ರಕಾರ ಈ ಕೋಮು ರಾಜಕೀಯದ ಪ್ರಭಾವ ಮಲ್ಲಿಗೆ ಮಾರಾಟಗಾರರ ಮೇಲೆ ಆಗಲಿಲ್ಲ. ಮಂಗಳೂರಿನ ಒಬ್ಬ ಮುಸ್ಲಿಂ ಮಾರಾಟಗಾರ ಹೇಳುವ ಪ್ರಕಾರ ಇಂದಿಗೂ ಆತನ ಗ್ರಾಹಕರಲ್ಲಿ ಬಹುತೇಕರು ಹಿಂದುಗಳು. ಮಾತ್ರವಲ್ಲದೆ ಮಂಗಳೂರಿನ ಒಂದು ಪ್ರಮುಖ ದೇವಾಲಯಕ್ಕೆ ಹದಿನೈದು ವರ್ಷಗಳಿಂದ ಹವ್ಯಾಹಿತರಾಗಿ ಈತನೇ ಪುಷ್ಪಗಳನ್ನು ಸರಬರಾಜು ಮಾಡುತ್ತಿದ್ದಾನೆ.[೪] ಇದು ಇವೆರಡು ಜಿಲ್ಲೆಗಳ ಕೋಮು ರಾಜಕೀಯಕ್ಕೆ ಮಾರಾಟಗಾರರು ಬಲಿಯಾಗಿಲ್ಲ ಎನ್ನುವುದಕ್ಕೆ ಒಂದು ಸಂಕೇತದಂತಿದೆ. ವಿಭಿನ್ನ ಕೋಮಿನವರು ಸೌಹಾರ್ದತೆಯಿಂದ ಪಾಲುದಾರಿಕೆಯಲ್ಲಿ(Partnership) ಪುಷ್ಪ ವ್ಯವಹಾರ ನಡೆಸುತ್ತಿದ್ದಾರೆ.[೫]

ಮಲ್ಲಿಗೆ ಮಾರಾಟಗಾರರು ಬೇರೆ ಬೇರೆ ವಯೋಮಟ್ಟಕ್ಕೆ ಸೇರಿದವರು. ಸಂದರ್ಶಿಸಲಾದ ವ್ಯಾಪಾರಿಗಳ ವಯೋಮಟ್ಟವನ್ನು ಕೋಷ್ಟಕ ೬.೩ ರಲ್ಲಿ ತೋರಿಸಲಾಗಿದೆ.

## ಕೋಷ್ಟಕ ೬.೩

## ವ್ಯಾಪಾರಿಗಳ ವಯೋಮಟ್ಟ

| ವಯೋಶ್ರೇಣಿ | ಉಡುಪಿ ಜಿಲ್ಲೆ | | ದ.ಕ. ಜಿಲ್ಲೆ | |
|---|---|---|---|---|
| | ವಕ್ತೃಗಳ ಸಂಖ್ಯೆ | ಶೇಕಡಾ | ವಕ್ತೃಗಳ ಸಂಖ್ಯೆ | ಶೇಕಡಾ |
| ೨೧ – ೩೦ | ೧೦ | ೩೧.೨೫ | ೧೬ | ೩೦.೨ |
| ೩೧ – ೪೦ | ೧೩ | ೪೦.೬ | ೨೪ | ೪೫.೩ |
| ೪೧ – ೫೦ | ೭ | ೨೧.೯ | ೮ | ೧೫.೧ |
| ೫೧ – ೬೦ | ೨ | ೬.೨೫ | ೫ | ೯.೪ |
| ಒಟ್ಟು | ೩೨ | ೧೦೦ | ೫೩ | ೧೦೦ |

ಆಧಾರ: ಅಧ್ಯಯನದ ಪ್ರಾಥಮಿಕ ಸಮೀಕ್ಷಾ ಅಂಕಿ ಅಂಶಗಳು ೨೦೦೯–೧೦.

ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಸಂದರ್ಶಿಸಲಾದ ಒಟ್ಟು ೮೫ ವ್ಯಾಪಾರಿಗಳಲ್ಲಿ ೨೧ – ೩೦ ರ ವಯೋಮಾನಕ್ಕೆ ಸೇರಿದವರು ೨೬ ಮಂದಿ. ೩೧–೪೦ ವಯೋಮಾನಕ್ಕೆ ಸೇರಿದವರು ೩೭ ಮಂದಿ. ಉಳಿದ ೨೨ ಮಂದಿ ೪೧ ರಿಂದ ೬೦ ರ ವಯೋಮಾನದವರು. ಮಾರುಕಟ್ಟೆಯಲ್ಲಿ ೨೦ – ೪೦ ರ ವಯೋಮಾನದವರೇ ಪ್ರಾಬಲ್ಯ. ಇದಕ್ಕೆ ಕಾರಣವನ್ನು ಅವರ ಶಿಕ್ಷಣ ಮಟ್ಟದಲ್ಲಿ ಕಂಡುಕೊಳ್ಳಲಾಗಿದೆ.

ಕೋಷ್ಟಕ ೬.೪ರ ಪ್ರಕಾರ ಎರಡು ಜಿಲ್ಲೆಗಳಲ್ಲಿ ಪಿ.ಯು.ಸಿ ಶಿಕ್ಷಣ ಪಡೆದ ವ್ಯಾಪಾರಿಗಳ ಪ್ರಮಾಣ ಅತ್ಯಧಿಕವಾಗಿದೆ. ಉಡುಪಿಯ ವ್ಯಾಪಾರಿಗಳು ಶೇ. ೩೭.೫ ಮತ್ತು ದಕ್ಷಿಣ ಕನ್ನಡದ ವ್ಯಾಪಾರಿಗಳಲ್ಲಿ ಶೇ. ೩೦.೨ ಪಿ.ಯು.ಸಿ ಶಿಕ್ಷಣ ಪಡೆದವರು. ೯ –೧೦ ರ ವರೆಗೆ ಶಿಕ್ಷಣ ಪಡೆದವರು ಉಡುಪಿ ಜಿಲ್ಲೆಯಲ್ಲಿ ಶೇ. ೩೪.೪ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶೇ. ೨೪.೫. ಇವೆರಡು ವರ್ಗಕ್ಕೆ ಸೇರಿದವರ ಒಟ್ಟು ಪ್ರಮಾಣ ಉಡುಪಿ ಜಿಲ್ಲೆಯಲ್ಲಿ ಶೇ. ೭೧.೯ ಮತ್ತು ದಕ್ಷಿಣ ಕನ್ನಡ ಜಿಲ್ಲೆ ಶೇ.೫೪.೭. ಈ ಶಿಕ್ಷಣ ಮಟ್ಟದ ಗುಂಪಿಗೆ ಸೇರಿದವರು ಅತ್ಯಧಿಕವಾಗಿರುವುದಕ್ಕೂ ಅವರ ವಯೋಮಟ್ಟಕ್ಕೂ ಸಂಬಂಧವಿದೆ. ಮಲ್ಲಿಗೆ ಬೆಳೆ ಅಥವಾ ಮಾರಾಟದ ಸ್ವಲ್ಪ ಮಟ್ಟಿನ ಪರಿಚಯವಿರುವ ಕುಟುಂಬಗಳಿಗೆ ಸೇರಿದ ಯುವಕರು ಹೈಸ್ಕೂಲು ಅಥವಾ ಪಿ.ಯು. ಶಿಕ್ಷಣದ ಬಳಿಕ ಮಲ್ಲಿಗೆ ಮಾರಾಟ ಕ್ಷೇತ್ರದಲ್ಲಿ ತಮ್ಮನ್ನು ಗುರುತಿಸಿಕೊಳ್ಳುವ ಪ್ರವೃತ್ತಿಯನ್ನು ಎರಡೂ ಜಿಲ್ಲೆಯಲ್ಲಿ ಗಮನಿಸಲಾಗಿದೆ. ಆಶ್ಚರ್ಯಕರ ವಿಷಯವೆಂದರೆ ಮಲ್ಲಿಗೆ

ವ್ಯಾಪಾರಿಗಳಲ್ಲಿ ಅನಕ್ಷರಸ್ಥರು ಯಾರೂ ಕಂಡು ಬಾರದಿರುವುದು ಇದಕ್ಕೆ ಕಾರಣ. ಮಲ್ಲಿಗೆ ವ್ಯಾಪಾರಿಗಳು ಕ್ರಮಬದ್ಧವಾಗಿ ಲೆಕ್ಕಪತ್ರ ಇಟ್ಟುಕೊಳ್ಳಬೇಕಾದ ಅನಿವಾರ್ಯತೆ ಇದೆ. ಎರಡು ಜಿಲ್ಲೆಗಳಲ್ಲಿ ಮಲ್ಲಿಗೆ ವ್ಯಾಪಾರದಲ್ಲಿ ತೊಡಗಿಸಿಕೊಂಡಿರುವ ಏಳು ಮಂದಿ ಪದವೀಧರರನ್ನು ಗುರುತಿಸಲಾಗಿದೆ. ಮಲ್ಲಿಗೆ ವ್ಯಾಪಾರದಲ್ಲಿ ಹೆಚ್ಚು ಲಾಭವಿರುವುದು ಮತ್ತು ಅದಕ್ಕೆ ಹೆಚ್ಚು ಬಂಡವಾಳದ ಅಗತ್ಯವಿಲ್ಲದಿರುವುದು ಅವರನ್ನು ಈ ಕ್ಷೇತ್ರ ಆಕರ್ಷಿಸಲು ಕಾರಣವಾಗಿದೆ. ಮಲ್ಲಿಗೆ ವ್ಯಾಪಾರಿಗಳಲ್ಲಿ ಸ್ನಾತಕೋತ್ತರ ಪದವಿ ಪಡೆದವರು ಕಂಡು ಬಂದಿಲ್ಲ. ಮಲ್ಲಿಗೆ ವ್ಯಾಪಾರಿಗಳ ಕುಟುಂಬದಲ್ಲಿನ ಸ್ನಾತಕೋತ್ತರ ಪದವೀಧರರು ಮಲ್ಲಿಗೆ ವ್ಯಾಪಾರವನ್ನು ಗೌರವಕ್ಕೆ ಕುಂದು ಎಂದು ಭಾವಿಸುವುದರಿಂದ ಈ ಕ್ಷೇತ್ರಕ್ಕೆ ಅವರು ಪಾದಾರ್ಪಣೆ ಮಾಡಿಲ್ಲವೆಂದು ಅವರ ಪರವಾಗಿ ಸಂಬಂಧಿತ ವ್ಯಾಪಾರಿಗಳು ಪ್ರತಿಕ್ರಿಯೆ ನೀಡಿದ್ದಾರೆ.[೬]

ಕೋಷ್ಟಕ ೬.೪

**ಮಾರಾಟಗಾರರ ಶಿಕ್ಷಣ ಮಟ್ಟ**

| ಶಿಕ್ಷಣ ಮಟ್ಟ | ಉಡುಪಿ ಜಿಲ್ಲೆ | | ದಕ್ಷಿಣ ಕನ್ನಡ ಜಿಲ್ಲೆ | |
|---|---|---|---|---|
| | ವಕ್ತೃಗಳ ಸಂಖ್ಯೆ | ಶೇಕಡಾ | ವಕ್ತೃಗಳ ಸಂಖ್ಯೆ | ಶೇಕಡಾ |
| ಅನಕ್ಷರಸ್ಥರು | - | - | - | - |
| ೧ ರಿಂದ ೫ | ೩ | ೯.೪ | ೭ | ೧೩.೨ |
| ೬ ರಿಂದ ೮ | ೪ | ೧೨.೫ | ೧೦ | ೧೮.೯ |
| ೯ ರಿಂದ ೧೦ | ೧೧ | ೩೪.೪ | ೧೩ | ೨೪.೫ |
| ಪಿ.ಯು.ಸಿ | ೧೨ | ೩೭.೫ | ೧೬ | ೩೦.೨ |
| ಪದವಿ | ೨ | ೬.೨ | ೭ | ೧೩.೨ |
| **ಒಟ್ಟು** | ೩೨ | ೧೦೦ | ೫೩ | ೧೦೦ |

ಆಧಾರ: ಅಧ್ಯಯನದ ಪ್ರಾಥಮಿಕ ಸಮೀಕ್ಷಾ ಅಂಕಿ ಅಂಶಗಳು ೨೦೦೯-೧೦.

ಮಲ್ಲಿಗೆ ಮಾರಾಟಗಾರರು ಆ ಕ್ಷೇತ್ರದಲ್ಲಿ ತಮ್ಮನ್ನು ತೊಡಗಿಸಿಕೊಳ್ಳಲು ಕಾರಣವೇನೆಂಬ ಪ್ರಶ್ನೆಹಾಕಿ ಸಂದರ್ಶನ ಕಾಲದಲ್ಲಿ ಉತ್ತರ ಕಂಡುಕೊಳ್ಳಲಾಯಿತು. ಅದನ್ನು ಕೋಷ್ಟಕ ೬.೫ ರಲ್ಲಿ ತೋರಿಸಲಾಗಿದೆ.

ಕೋಷ್ಟಕ ೬.೫

**ಮಲ್ಲಿಗೆ ವ್ಯಾಪಾರದಲ್ಲಿ ತೊಡಗಲು ಕಾರಣ**

| ಕಾರಣ | ಉಡುಪಿ ಜಿಲ್ಲೆ | | ದಕ್ಷಿಣ ಕನ್ನಡ ಜಿಲ್ಲೆ | |
|---|---|---|---|---|
| | ಮಾರಾಟ ವಕ್ತೃಗಳು | ಶೇಕಡಾ | ಮಾರಾಟ ವಕ್ತೃಗಳು | ಶೇಕಡಾ |
| ಜೀವನೋಪಾಯ | ೧೭ | ೫೩.೧ | ೨೯ | ೫೪.೭ |
| ಉಪವೃತ್ತಿ | ೦೩ | ೯.೪ | ೭ | ೧೩.೨ |
| ಕಡಿಮೆ ಬಂಡವಾಳದ ಉದ್ಯಮ | ೦೬ | ೧೮.೮ | ೧೧ | ೨೦.೮ |
| ಕುಟುಂಬ ವೃತ್ತಿ | ೦೪ | ೧೨.೫ | ೦೪ | ೭.೫ |
| ಲಾಭದಾಯಕ | ೦೨ | ೬.೨ | ೦೨ | ೩.೮ |
| **ಎರಡು ಜಿಲ್ಲೆ** | **೩೨** | **೧೦೦** | **೫೩** | **೧೦೦** |

**ಆಧಾರ: ಅಧ್ಯಯನದ ಪ್ರಾಥಮಿಕ ಸಮೀಕ್ಷಾ ಅಂಕಿ ಅಂಶಗಳು ೨೦೦೯–೧೦.**

ಉಡುಪಿ ಜಿಲ್ಲೆಯ ಮಾರಾಟಗಾರರಲ್ಲಿ ಶೇ. ೫೩.೧ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಮಾರಾಟಗಾರರಲ್ಲಿ ಶೇ.೫೪.೭ ಮಂದಿ ಜೀವನೋಪಾಯಕ್ಕಾಗಿ ಮಲ್ಲಿಗೆ ಮಾರಾಟ ಮಾಡುತ್ತಿದ್ದಾರೆ. ಇದೊಂದು ಕಡಿಮೆ ಬಂಡವಾಳ ಆಧಾರಿತ ಉದ್ಯಮವೆಂದು ಈ ಕ್ಷೇತ್ರವನ್ನು ಪ್ರವೇಶಿಸಿದ ವ್ಯಾಪಾರಿಗಳ ಪ್ರಮಾಣ ಉಡುಪಿಯಲ್ಲಿ ಶೇ. ೧೮.೮ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶೇ. ೨೦.೮. ಕುಟುಂಬ ವೃತ್ತಿಯ ಹಿನ್ನಲೆಯಲ್ಲಿ ಈ ಕ್ಷೇತ್ರವನ್ನು ಪ್ರಾದೇಶಿಸಿದವರು ಉಡುಪಿ ಜಿಲ್ಲೆಯಲ್ಲಿ ಶೇ. ೧೨.೫ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶೇ. ೭.೫. ಮಲ್ಲಿಗೆ ಬೆಳೆಯನ್ನು ಉಪವೃತ್ತಿಯಾಗಿ ಸ್ವೀಕರಿಸಿದವರು ಉಡುಪಿ ಜಿಲ್ಲೆಯಲ್ಲಿ ಶೇ. ೯.೪ ಮತ್ತು ದಕ್ಷಿಣ

ಕನ್ನಡ ಜಿಲ್ಲೆಯಲ್ಲಿ ಶೇ.೧೩.೨. ಕೆಲವು ತರಕಾರಿ ಮಾರಾಟಗಾರರು ತರಕಾರಿ ಮಾರಾಟವನ್ನು ಪ್ರಧಾನ ಕಸುಬು ಆಗಿರಿಸಿಕೊಂಡು ಮಲ್ಲಿಗೆ ಮಾರಾಟವನ್ನು ಉಪವೃತ್ತಿಯಾಗಿ ನಡೆಸಿಕೊಂಡಿರುವುದು ಎರಡೂ ಜಿಲ್ಲೆಗಳಲ್ಲಿ ಕಂಡು ಬಂದಿದೆ. ಕೆಲವು ಕಡೆ ಹಣ್ಣಿನ ವ್ಯಾಪಾರಿಗಳು ಕೂಡ ಮಲ್ಲಿಗೆ ಮಾರಾಟವನ್ನು ನಡೆಸುತ್ತಿದ್ದಾರೆ. ಹಣ್ಣು ಮತ್ತು ತರಕಾರಿಗಳು ಮಲ್ಲಿಗೆಯಂತೆ ಅಲ್ಪಾಯುಷಿ ಸರಕುಗಳಾದುದರಿಂದ ಅವುಗಳಿಗೆ ಒಂದೇ ಶೀತಲೀಕೃತ ವ್ಯವಸ್ಥೆಯನ್ನು ಕೈಗೊಳ್ಳುವ ಸಾಧ್ಯವಿರುವುದು ಇದಕ್ಕೆ ಕಾರಣವಾಗಿದೆ.

ಚಿತ್ರ ೬.೧ ಎರಡೂ ಜಿಲ್ಲೆಗಳ ವ್ಯಾಪಾರಿಗಳು ಈ ರಂಗಕ್ಕೆ ಇಳಿಯಲು ಕಾರಣವೇನು ಎಂಬುದನ್ನು ತೋರಿಸುತ್ತದೆ.




**ಚಿತ್ರ ೬.೧ ಮಾರಾಟ ರಂಗಕ್ಕಿಳಿಯಲು ಕಾರಣ**

ಪ್ರತಿಕ್ರಿಯೆ ನೀಡಿದ ವ್ಯಾಪಾರಿಗಳಲ್ಲಿ ಅರ್ಧಾಂಶಕ್ಕಿಂತಲೂ ಅಧಿಕ ಮಂದಿ ಜೀವನೋಪಾಯಕ್ಕಾಗಿ ಈ ರಂಗವನ್ನು ಪ್ರವೇಶಿಸಿದ್ದಾರೆ. ಕಡಿಮೆ ಬಂಡವಾಳ ಮತ್ತು ಲಾಭದಾಯಕತೆ ಕೆಲವು ವ್ಯಾಪಾರಿಗಳನ್ನು ಈ ಕ್ಷೇತ್ರಕ್ಕೆ ಆಕರ್ಷಿಸಿದೆ. ಹಿರಿಯರ ವೃತ್ತಿಯೆಂದು ಕಿರಿಯರು ಕೆಲವರು ಈ ಕ್ಷೇತ್ರವನ್ನು ಆಯ್ಕೆ ಮಾಡಿಕೊಂಡಿದ್ದಾರೆ. ತರಕಾರಿ, ಹಣ್ಣು ಇತ್ಯಾದಿ ಅಲ್ಪಾಯುಷಿ ಸರಕುಗಳ ಮಾರಾಟದೊಡನೆ ಮಲ್ಲಿಗೆ ಮಾರಾಟವನ್ನು ಕೈಗೊಂಡ ಜಾಣರು ಒಂದಷ್ಟು ಮಂದಿ ಇದ್ದಾರೆ. ಇದು ಮಿಶ್ರ ವ್ಯಾಪಾರಕ್ಕೆ (Mixed Trading) ಒಂದು ಉದಾಹರಣೆಯಾಗಿದೆ. ತರಕಾರಿ/ ಹಣ್ಣಿನ ವ್ಯಾಪಾರ ಕೈಕೊಟ್ಟರೆ ಮಲ್ಲಿಗೆ ವ್ಯಾಪಾರದಿಂದ ನಷ್ಟ ಭರ್ತಿಮಾಡಿಕೊಳ್ಳಬಹುದು ಎಂಬ ತರ್ಕ ಮಿಶ್ರ ವ್ಯಾಪಾರಕ್ಕೆ ಕಾರಣವಾಗಿದೆ.

ಸಂದರ್ಶಿಸಲಾದ ವ್ಯಾಪಾರಿಗಳ ಅನುಭವದ ವಿಶ್ಲೇಷಣೆ ಕೆಲವು ಕುತೂಹಲಕಾರಿ ಅಂಶಗಳನ್ನು ಹೊರಗೆಡಹುತ್ತದೆ. ಕೋಷ್ಟಕ ೬.೬ ಸಂದರ್ಶಿಸಲಾದ ವ್ಯಾಪಾರಿಗಳ ಅನುಭವವನ್ನು ತಿಳಿಸುತ್ತದೆ.

## ಕೋಷ್ಟಕ ೬.೬

## ವ್ಯಾಪಾರಿಗಳ ಅನುಭವ

| ಅನುಭವ | ಉಡುಪಿ ಜಿಲ್ಲೆ | ದಕ್ಷಿಣ ಕನ್ನಡ ಜಿಲ್ಲೆ |
|---|---|---|
| ೧ ವರ್ಷಕ್ಕಿಂತ ಕಡಿಮೆ | ೬.೩ | ೫.೩ |
| ೧ ರಿಂದ ೫ ವರ್ಷಗಳು | ೫೬.೨ | ೫೫.೩ |
| ೬ ರಿಂದ ೧೦ ವರ್ಷಗಳು | ೧೮.೭ | ೧೮.೬ |
| ೧೧ ರಿಂದ ೧೫ ವರ್ಷಗಳು | ೯.೩ | ೯.೭ |
| ೧೬ ರಿಂದ ೨೦ ವರ್ಷಗಳು | ೬.೩ | ೭.೪ |
| ೨೦ ರಿಂದ ಅಧಿಕ | ೩.೨ | ೩.೭ |
| ಎರಡು ಜಿಲ್ಲೆಗಳ ಒಟ್ಟು (ಶೇಕಡಾ) | ೧೦೦ | ೧೦೦ |

**ಆಧಾರ: ಅಧ್ಯಯನದ ಪ್ರಾಥಮಿಕ ಸಮೀಕ್ಷಾ ಅಂಕಿ ಅಂಶಗಳು ೨೦೦೯-೧೦.**

ಸಂದರ್ಶಿಸಲಾದ ವ್ಯಾಪಾರಿಗಳಲ್ಲಿ ಬಹುತೇಕರು ಒಂದರಿಂದ ೫ ವರ್ಷದ ಗುಂಪಿಗೆ ಸೇರಿದವರು. ಇವರ ಪ್ರಮಾಣ ಉಡುಪಿ ಜಿಲ್ಲೆಯಲ್ಲಿ ೫೬.೨ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶೇ.೫೫.೩. ಉಡುಪಿ ಜಿಲ್ಲೆಯಲ್ಲಿ ಶೇ.೧೮.೭ ಮಂದಿ ವ್ಯಾಪಾರಿಗಳು ೬ – ೧೦ ವರ್ಷದ ಅನುಭವದ ಗುಂಪಿಗೆ ಸೇರಿದವರು. ಇವರ ಪ್ರಮಾಣ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ೧೮.೬. ಉಡುಪಿ ಜಿಲ್ಲೆಯ ಶೇ. ೬.೩ ಮಂದಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಶೇ. ೭.೪ ಮಂದಿ ವ್ಯಾಪಾರಿಗಳು ೧೬ ರಿಂದ ೨೦ ವರ್ಷಗಳ ಒಳಗಿನ ಅನುಭವದವರು. ೨೦ ವರ್ಷಕ್ಕಿಂತ ಮೇಲಿನ ಅನುಭವದವರ ಪ್ರಮಾಣ ಉಡುಪಿ ಜಿಲ್ಲೆಯಲ್ಲಿ ಶೇ. ೩.೨ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶೇ ೩.೭.

ಚಿತ್ರ ೬.೨ ಎರಡು ಜಿಲ್ಲೆಗಳಲ್ಲಿ ಸಂದರ್ಶನಕ್ಕೆ ಒಳಪಡಿಸಿದ ವ್ಯಾಪಾರಿಗಳ ಮಾರಾಟ ಅನುಭವದ ಅವಧಿಯನ್ನು ತೋರಿಸುತ್ತದೆ.




**ಚಿತ್ರ ೬.೨ ಮಾರಾಟದ ಅನುಭವ**

ಮಾರಾಟಗಾರರಲ್ಲಿ ಬಹುತೇಕರು ೫ ವರ್ಷಕ್ಕಿಂತ ಕಡಿಮೆ ಅನುಭವದವರು. ಹೂ ಮಾರಾಟವು ಅತ್ಯಂತ ಅನಿಶ್ಚಿತವಾದ ಮತ್ತು ಅಸ್ಥಿರವಾದ ವ್ಯಾಪಾರ. ಮಾರಾಟಗಾರರಿಗೆ ಅನೇಕ ವೇಳೆ ಸ್ವಂತ ಮಾರಾಟದ ಅಂಗಡಿಗಳಿರುವುದಿಲ್ಲ. ಬೀದಿ ಬದಿಯಲ್ಲೋ, ಬಸ್ಸು ನಿಲ್ದಾಣದ ಕೊಳಚೆ ಬದಿಯಲ್ಲೋ ಕಟ್ಟಡಗಳ ಸಂಧಿನಲ್ಲೋ ಇವರು ಮಳೆ ಬಿಸಿಲೆನ್ನದೆ ಹೂ ಮಾರಾಟ ಮಾಡಬೇಕಾಗಿ ಬರುತ್ತದೆ. ಇವರಿಗೆ ವಾರದ ರಜಾ ದಿನವೂ ಇರುವುದಿಲ್ಲ. ಪ್ರತಿದಿನದ ಆದಾಯ ಒಂದೇ ತೆರನಾಗಿರುವುದಿಲ್ಲ. ಹಾಗಾಗಿ ಈ ವೃತ್ತಿಯಲ್ಲಿ ದೀರ್ಘ ಕಾಲ ಮುಂದುವರಿಯುವವರ ಸಂಖ್ಯೆ ಬಹಳ ಕಡಿಮೆ. ಇನ್ನೂ ಕೆಲವು ವ್ಯಾಪಾರಿಗಳು ಆರಂಭದ ಮೂರು ನಾಲ್ಕು ವರ್ಷಗಳಲ್ಲಿ ಗಳಿಸಿದ ಬಂಡವಾಳವನ್ನು ಇತರ ಹೆಚ್ಚು ಸುರಕ್ಷಿತ ಉದ್ಯಮದಲ್ಲಿ ಹಾಕಿ ಲಾಭ ಗಳಿಸಲು ಯತ್ನಿಸುತ್ತಾರೆ. ಹಾಗಾಗಿ ಮಲ್ಲಿಗೆ ಮಾರಾಟಗಾರರಲ್ಲಿ ೧೫ ವರ್ಷಗಳಿಗಿಂತ ಹೆಚ್ಚು ಅನುಭವ ಉಳ್ಳವರು ಬಹಳ ಕಡಿಮೆ.

ಮಲ್ಲಿಗೆ ಮಾರಾಟಗಾರರ ದೊಡ್ಡ ಸಮಸ್ಯೆಗಳಲ್ಲಿ ಸಂಗ್ರಹಣಾ ಸಮಸ್ಯೆಯು ಒಂದು. ಅಧ್ಯಯನ ನಡೆಸಲಾದ ವ್ಯಾಪಾರಿಗಳ ಸಂಗ್ರಹಣಾ ವ್ಯವಸ್ಥೆಯು ಕೋಷ್ಟಕ ೬.೭ರಲ್ಲಿ ತೋರಿಸಲಾಗಿದೆ.

## ಕೋಷ್ಟಕ ೬.೭

## ಮಾರಾಟಗಾರರ ಸಂಗ್ರಹಣಾ ಸಮಸ್ಯೆಗಳು

| ಕಾರಣ | ಉಡುಪಿ ಜಿಲ್ಲೆ | | ದ.ಕ ಜಿಲ್ಲೆ | |
|---|---|---|---|---|
| | | ಶೇಕಡಾ | | ಶೇಕಡಾ |
| ಶೀತಲೀಕರಣ ವ್ಯವಸ್ಥೆ ಇರುವವರು | ೧೪ | ೪೩.೭ | ೨೦ | ೩೭.೭ |
| ಶೀತಲೀಕರಣ ವ್ಯವಸ್ಥೆ ಇಲ್ಲದವರು | ೧೮ | ೫೬.೩ | ೩೩ | ೬೨.೩ |
| ಒಟ್ಟು | ೩೨ | ೧೦೦ | ೫೩ | ೧೦೦ |
| ಶೀತಲೀಕರಣಕ್ಕಾಗಿ ಇತರರನ್ನು ಅವಲಂಬಿಸುವವರು | ೧೧ | ೬೧ | ೧೯ | ೫೭.೫ |
| ಶೀತಲೀಕರಣ ವ್ಯವಸ್ಥೆಯನ್ನು ಅವಲಂಬಿಸದವರು | ೭ | ೩೯ | ೧೪ | ೪೨.೫ |
| ಒಟ್ಟು | ೧೮ | ೧೦೦ | ೩೩ | ೧೦೦ |

**ಆಧಾರ: ಅಧ್ಯಯನದ ಪ್ರಾಥಮಿಕ ಸಮೀಕ್ಷಾ ಅಂಕಿ ಅಂಶಗಳು ೨೦೦೯–೧೦.**

ಉಡುಪಿ ಜಿಲ್ಲೆಯ ಮಾರಾಟಗಾರರಲ್ಲಿ ಶೇ. ೪೩.೭ ಮಂದಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಮಾರಾಟಗಾರಲ್ಲಿ ಶೇ. ೩೭.೭ ಮಂದಿ ಮಾತ್ರ ಶೀತಲೀಕರಣದ ವ್ಯವಸ್ಥೆಯನ್ನು ಹೊಂದಿದ್ದಾರೆ. ಉಡುಪಿ ಜಿಲ್ಲೆಯಲ್ಲಿ ಶೇ. ೫೬.೩ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶೇ. ೬೨.೩ ಮಂದಿ ಶೀತಲೀಕರಣ ವ್ಯವಸ್ಥೆಯನ್ನು ಹೊಂದಿಲ್ಲ. ಉಡುಪಿ ಜಿಲ್ಲೆಯಲ್ಲಿ ಶೇ. ೬೧ ಮಂದಿ ವ್ಯಾಪಾರಿಗಳು ಶೀತಲೀಕರಣಕ್ಕಾಗಿ ಇತರರನ್ನು ಅವಲಂಬಿಸಿದ್ದಾರೆ. ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಅಂತವರ ಪ್ರಮಾಣ ಶೇ. ೫೭.೫. ಯಾವುದೇ ಶೀತಲೀಕರಣ ವ್ಯವಸ್ಥೆ ಇಲ್ಲದೆ ಇತರರನ್ನು ಅವಲಂಬಿಸದೆ ಇರುವವರ ಪ್ರಮಾಣ ಉಡುಪಿ ಜಿಲ್ಲೆಯಲ್ಲಿ ಶೇ. ೩೯ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶೇ. ೪೨.೫. ಕೆಲವು ವ್ಯಾಪಾರಿಗಳ ಮನೆಯಲ್ಲಿ ಶೀತಲೀಕರಣ ವ್ಯವಸ್ಥೆ ಇದ್ದರೂ ಪುಷ್ಪಗಳ ಸಂಗೋಪನೆಗಾಗಿ ಅದನ್ನು ಬಳಸಲು ಸಾಧ್ಯವಾಗುತ್ತಿಲ್ಲ.

ಮಾರಾಟ ಕೇಂದ್ರಕ್ಕೂ ಮನೆಗೂ ಇರುವ ದೂರ ಇದಕ್ಕೆ ಬಹು ಮುಖ್ಯವಾದ ಕಾರಣ. ಮಾರಾಟ ಕೇಂದ್ರಗಳಲ್ಲಿ ಭದ್ರವಾದ ಮತ್ತು ವಿಶಾಲವಾದ ಕೊಠಡಿಗಳಿಲ್ಲದಿರುವ ಕಾರಣ ಶೀತಲ ಪೆಟ್ಟಿಗೆಗಳನ್ನು ತಂದು ಮಾರಾಟ ಕೇಂದ್ರಗಳಲ್ಲಿ ಇಡುವ ಹಾಗಿಲ್ಲ. ನಿರ್ದಿಷ್ಟವಾದ ಸೂರು ಕೂಡಾ ಇಲ್ಲದ ಮಾರಾಟ ಕೇಂದ್ರಗಳ ವ್ಯಾಪಾರಿಗಳಿಗೆ ಹೂಗಳನ್ನು ಸಂರಕ್ಷಿಸಲು ಯಾವ ಮಾರ್ಗೋಪಾಯವು ಇಲ್ಲ. ಹಾಗಾಗಿ ಪೂರೈಕೆಯಾದ ಹೂಗಳನ್ನು ಕೆಡದಂತೆ ಸಂರಕ್ಷಿಸುವುದು ಬಹುದೊಡ್ಡ ಸಮಸ್ಯೆಯಾಗಿ ಇವರನ್ನು ಕಾಡುತ್ತದೆ.

## ೬.೨ ಮಾರಾಟಕ್ಕೆ ಸಂಬಂಧಿಸಿದ ಸಮಸ್ಯೆ

ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳಿಗೆ ಮಲ್ಲಿಗೆ ರಾಜಧಾನಿ ಎಂದೆನಿಸಿರುವ ಶಂಕರಪುರದಲ್ಲಿ ಮಲ್ಲಿಗೆ ಮಾರಾಟ ಕಟ್ಟೆಯೊಂದಿದೆ. ಇಲ್ಲಿಂದ ಸ್ಥಳೀಯ ವ್ಯಾಪಾರಿಗಳು ಉಡುಪಿ ಮತ್ತು ಮಂಗಳೂರು ನಗರಗಳಲ್ಲಿ ಮಲ್ಲಿಗೆ ಹೂವಿನ ರಖಂ ವ್ಯಾಪಾರ ನಡೆಸುತ್ತಿರುವವರಿಗೆ ಹೂಗಳನ್ನು ತಲುಪಿಸುತ್ತಾರೆ. ಈ ರಖಂ ಕೇಂದ್ರಗಳಿಂದ ತಾಲೂಕು ಕೇಂದ್ರಗಳ ಮತ್ತು ಇತರ ಪಟ್ಟಣಗಳಲ್ಲಿರುವ ಮಲ್ಲಿಗೆ ಮಾರಾಟಗಾರರು ತಮಗೆ ಬೇಕಾದಷ್ಟು ಮಲ್ಲಿಗೆ ಅಟ್ಟೆಗಳನ್ನು ತರಿಸಿಕೊಳ್ಳುತ್ತಾರೆ. ಬಹುತೇಕವಾಗಿ ದಕ್ಷಿಣ ಕನ್ನಡ ಮತ್ತು ಉಡುಪಿ ಜಿಲ್ಲೆಗಳ ತಾಲೂಕು ಕೇಂದ್ರಗಳಲ್ಲಿ ಬೆಳೆಯುವ ಮಲ್ಲಿಗೆ ಹೂವು ಸ್ಥಳೀಯ ಬೇಡಿಕೆಗಿಂತ ಕಡಿಮೆ ಇರುತ್ತದೆ. ಆದುದರಿಂದ ತಾಲೂಕು ಕೇಂದ್ರಗಳ ವ್ಯಾಪಾರಿಗಳು ಜಿಲ್ಲಾ ಕೇಂದ್ರದ ರಖಂ ವ್ಯಾಪಾರಿಗಳೊಡನೆ ಸಂಪರ್ಕವಿರಿಸಿಕೊಂಡು ದೂರವಾಣಿ ಮೂಲಕ ಹೂಗಳ ಪೂರೈಕೆಗೆ ಆದೇಶ ಕಳುಹಿಸುತ್ತಾರೆ. ರಖಂ ವ್ಯಾಪಾರಿಗಳು ತಾಲೂಕು ಕೇಂದ್ರಗಳಿಗೆ ಹೋಗುವ ನಿಗದಿತ ಬಸ್ಸುಗಳ ಚಾಲಕರ ಮೂಲಕ ಆ ಕೇಂದ್ರಗಳಿಂದ ಬಂದ ಬೇಡಿಕೆಯಷ್ಟು ಹೂಗಳನ್ನು ಕಳುಹಿಸಿಕೊಡುತ್ತಾರೆ. ತಾಲೂಕು ಕೇಂದ್ರದ ಚಿಲ್ಲರೆ ಮಾರಾಟಗಾರರು ಬಸ್ಸು ಚಾಲಕರಿಗೆ ನಿಗದಿತ ಮೊತ್ತದ ಭಕ್ಷೀಸು ನೀಡುತ್ತಾರೆ. ಅದು ಮಲ್ಲಿಗೆ ಹೂವಿನ ಬೆಲೆಯಲ್ಲಿ ಸೇರಿ ಗ್ರಾಹಕರಿಗೆ ವರ್ಗಾಯಿಸಲ್ಪಡುತ್ತದೆ.

ಬೆಳೆಗಾರರರಿಂದ ನೇರವಾಗಿ ಹೂಗಳನ್ನು ಕೊಳ್ಳುವ ಸ್ಥಳೀಯ ಮಾರಾಟಗಾರರು ಶೇ.೧೦೦ ರಷ್ಟು ಲಾಭಾಂಶ ಇರಿಸಿಕೊಂಡು ಬೆಲೆ ನಿಗದಿ ಮಾಡುತ್ತಾರೆ. ಆದರೆ ಚಿಲ್ಲರೆ ವ್ಯಾಪಾರಿಗಳು ರಖಂ ವ್ಯಾಪಾರಿಗಳಿಂದ ಮಲ್ಲಿಗೆ ಹೂ ಕೊಳ್ಳುವಾಗ ಮಲ್ಲಿಗೆ ಸ್ಥಳೀಯ ಬೆಳೆಗಾರರಿಗೆ ಕೊಡುವುದಕ್ಕಿಂತ ಹೆಚ್ಚಿನ ಬೆಲೆಯನ್ನು ಜಿಲ್ಲಾ ಕೇಂದ್ರಗಳಲ್ಲಿರುವ ರಖಂ ವ್ಯಾಪಾರಿಗಳಿಗೆ ಕೊಡಬೇಕಾಗುತ್ತದೆ. ಚಿಲ್ಲರೆ ಮಾರಾಟಗಾರರು ಮಲ್ಲಿಗೆ ಬೆಳೆಗಾರರಿಂದ ಕೊಂಡ ಹೂವನ್ನು ಮಾರುವಾಗ ನಿಗದಿ ಪಡಿಸುವ ಬೆಲೆಗೂ ರಖಂ ವ್ಯಾಪಾರಿಗಳಿಂದ ಕೊಂಡ ಹೂವಿಗೆ ನಿಗದಿ ಪಡಿಸುವ ಬೆಲೆಗೂ ಹೆಚ್ಚು ವ್ಯತ್ಯಾಸಗಳಿರುವುದಿಲ್ಲ. ಆದುದರಿಂದ

ಗ್ರಾಹಕರಿಗೆ ಹೂವಿನ ಮೂಲ ಯಾವುದೇ ಆದರೂ ಪ್ರಯೋಜನವೇನಿರುವುದಿಲ್ಲ. ಆದರೆ ಚಿಲ್ಲರೆ ವ್ಯಾಪಾರಿಗಳಿಗೆ ಸ್ಥಳೀಯ ಹೂವು ಎಂದಾದರೆ ಅಧಿಕ ಲಾಭ ದೊರೆಯುತ್ತದೆ. ಜಿಲ್ಲಾ ಕೇಂದ್ರದಿಂದ ತರಿಸಲಾದ ಹೂವು ಎಂದಾದರೆ ಕಡಿಮೆ ಲಾಭ ದೊರೆಯುತ್ತದೆ. ಈ ವಿಶ್ಲೇಷಣೆಯು ಎರಡು ತೀರ್ಮಾನಗಳಿಗೆ ನಮ್ಮನ್ನು ತಂದು ನಿಲ್ಲಿಸುತ್ತದೆ –

- ಮಾರುಕಟ್ಟೆ ಬೆಲೆಯಲ್ಲಿ ಸ್ಥಿತ್ಯಂತರಗಳಾದರೂ ಅದರ ಪ್ರಯೋಜನ ಬಹುತೇಕವಾಗಿ ಮಲ್ಲಿಗೆ ಬೆಳೆಗಾರರಿಗೆ ದೊರೆಯುವುದಿಲ್ಲ.
- ಮಲ್ಲಿಗೆ ಪೂರೈಕೆಯ ಮೂಲ ಯಾವುದೇ ಆದರೂ ಅದರಿಂದ ಗ್ರಾಹಕರಿಗೆ ಯಾವ ಪ್ರಯೋಜನವು ಇಲ್ಲ.

ಚಿಲ್ಲರೆ ಮಾರಾಟಗಾರರು ಸ್ಥಳೀಯ ಬೆಳೆಗಾರರಿಗೆ ಅವರ ಪೂರೈಕೆಗೆ ತಕ್ಷಣ ಹಣ ಪಾವತಿ ಮಾಡದೆ ಸತಾಯಿಸುವುದುಂಟು. ಇದರಿಂದ ಸ್ಥಳೀಯ ಬೆಳೆಗಾರರು ತೊಂದರೆಗೊಳಗಾದರೂ ಸ್ಥಳೀಯ ಮಾರಾಟಗಾರರಿಗೆ ಹಣಕಾಸು ವ್ಯವಹಾರದಿಂದ ಕೆಲವು ಪ್ರಯೋಜನಗಳನ್ನು ಪಡೆಯಲು ಸಾಧ್ಯವಾಗುತ್ತದೆ. ಸ್ಥಳೀಯ ವ್ಯಾಪಾರಿಗಳು ಬಹುತೇಕವಾಗಿ ರಖಂ ವ್ಯಾಪಾರಿಗಳೊಡನೆ ಸಾಲದ ವ್ಯವಹಾರ ನಡೆಸುವುದಿಲ್ಲ. ಒಂದು ವೇಳೆ ಅನಿವಾರ್ಯವಾಗಿ ಸಾಲದ ವ್ಯವಹಾರವನ್ನು ನಡೆಸಬೇಕಾಗಿ ಬಂದರೆ ಅದರಿಂದ ತೊಂದರೆಗೊಳಗಾಗುವುದು ಸ್ಥಳೀಯ ವ್ಯಾಪಾರಿಗಳು. ರಖಂ ವ್ಯಾಪಾರಿಗಳು ನಗದು ನೀಡಿ ಪುಷ್ಪ ಕೊಳ್ಳುವ ಚಿಲ್ಲರೆ ವ್ಯಾಪಾರಿಗಳಿಗೆ ಬೆಲೆಯಲ್ಲಿ ವಿನಾಯಿತಿಯನ್ನು ತೋರಿಸುತ್ತಾರೆ. ಆದರೆ ಸಾಲ ವ್ಯವಹಾರ ಮಾಡುವ ಚಿಲ್ಲರೆ ವ್ಯಾಪಾರಿಗಳಿಗೆ ಅತ್ಯಧಿಕ ಬೆಲೆಯಲ್ಲಿ ಮಲ್ಲಿಗೆ ಹೂವನ್ನು ಸರಬರಾಜು ಮಾಡುತ್ತಾರೆ. ಇದರಿಂದಾಗಿ ಚಿಲ್ಲರೆ ವ್ಯಾಪಾರಿಗಳಿಗೆ ಸಿಗುವ ಲಾಭದ ಪ್ರಮಾಣ ಬಹಳ ಕಡಿಮೆಯಾಗಿ ಚಿಲ್ಲರೆ ವ್ಯಾಪಾರಿ ಮಾರುಕಟ್ಟೆಯಲ್ಲಿ ನಿರುತ್ತೇಜಕ ವಾತಾವರಣ ನಿರ್ಮಾಣವಾಗುತ್ತದೆ.

ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪಾರಿಗಳು ಇವೆರಡು ಜಿಲ್ಲೆಗಳ ಮಲ್ಲಿಗೆಯನ್ನು ಮಾತ್ರವಲ್ಲದೆ ಹೊರ ಜಿಲ್ಲೆಗಳಿಂದ ಮಲ್ಲಿಗೆ ತರಿಸಿಕೊಂಡು ಮಾರಾಟ ಮಾಡುತ್ತಾರೆ. ಇವೆರಡು ಜಿಲ್ಲೆಗಳಿಗೆ ಕಾಕಡ ಬೆಳೆಗೆ ಪ್ರಸಿದ್ಧವಾದ ಮೈಸೂರು, ಬೆಂಗಳೂರು ಮತ್ತು ತುಮಕೂರು ಜಿಲ್ಲೆಗಳಿಂದ ಕಾಕಡ ಮಲ್ಲಿಗೆ ಪೂರೈಕೆಯಾಗುತ್ತದೆ. ಇದು ಬೇಗ ಹಾಳಾಗದ ಪುಷ್ಪಗಳ ಸಾಲಿಗೆ ಸೇರಿರುವುದರಿಂದ ಮತ್ತು ತುಲನಾತ್ಮಕವಾಗಿ ಸ್ಥಳೀಯ ಮಲ್ಲಿಗೆಗಿಂತ ಕಡಿಮೆ ಬೆಲೆಗೆ ಲಭ್ಯವಾಗುವುದರಿಂದ ಅಂಗಡಿ, ಹೊಟೇಲು, ಗೃಹ ಉದ್ಯಮ ಮಾಲಿಕರು ದೇವರ ಚಿತ್ರಗಳಿಗೆ ಅಲಂಕಾರ ಮಾಡಲು ಕಾಕಡವನ್ನು ಬಳಸುತ್ತಾರೆ. ದೇವತಾಮೂರ್ತಿಗಳನ್ನು ಕೂಡ ಕಾಕಡದಿಂದ ಸಿಂಗರಿಸುವುದುಂಡು. ಹಾಗಾಗಿ ಕೆಲವು

ವಿಶೇಷ ಸಂದರ್ಭಗಳಲ್ಲಿ ಸ್ಥಳೀಯ ಮಲ್ಲಿಗೆಗಿಂತ ಹೆಚ್ಚು ಬೇಡಿಕೆ ಕಾಕಡ ಮಲ್ಲಿಗೆ ಇದೆಯೆಂದು ವ್ಯಾಪಾರಿಗಳು ಸಂದರ್ಶನ ಕಾಲದಲ್ಲಿ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ. ಕಾಕಡ ಮಲ್ಲಿಗೆಯ ಅತಿಯಾದ ಆಗಮನದಿಂದಾಗಿ ಸ್ಥಳೀಯ ಮಲ್ಲಿಗೆಯ ಬೇಡಿಕೆಗೆ ಸ್ವಲ್ಪ ಮಟ್ಟಿನ ತೊಂದರೆಯಾಗಿದೆ. ವ್ಯಾಪಾರಿಗಳು ಮಲ್ಲಿಗೆ ಬೆಳೆಗಾರರಿಗೆ ಕಡಿಮೆ ಬೆಲೆಯನ್ನು ನೀಡಲು ಇದು ಒಂದು ಕಾರಣವಾಗಿದೆ.

ಮಲ್ಲಿಗೆಯ ಪೂರೈಕೆಯು ಋತು ಸಂಬಂಧಿಯಾದುದಾಗಿದೆ. ಮಳೆಗಾಲದ ನಾಲ್ಕು ತಿಂಗಳುಗಳಲ್ಲಿ ಮತ್ತು ಚಳಿಗಾಲದ ನಾಲ್ಕು ತಿಂಗಳುಗಳಲ್ಲಿ ಮಲ್ಲಿಗೆ ಬೆಳೆ ಬೇಸಿಗೆ ಕಾಲದ ನಾಲ್ಕು ತಿಂಗಳುಗಳಿಗಿಂತ ತುಲನಾತ್ಮಕವಾಗಿ ಕಡಿಮೆ. ಮಳೆಗಾಲದಲ್ಲಿ ಶುಭ ಸಮಾರಂಭಗಳು ನಡೆಯುವುದು ತೀರಾ ವಿರಳ. ಆದುದರಿಂದ ಮಲ್ಲಿಗೆ ಪೂರೈಕೆ ಕಡಿಮೆಯಿದ್ದರೂ ಬೆಲೆಯೂ ಸಾಪೇಕ್ಷವಾಗಿ ಕಡಿಮೆಯಿರುತ್ತದೆ. ಚಳಿಗಾಲದಲ್ಲಿ ಶುಭ ಸಮಾರಂಭಗಳ ಸಂಖ್ಯೆ ಮಳೆಗಾಲಕ್ಕಿಂತ ಹೆಚ್ಚು ಆಗ ಮಲ್ಲಿಗೆ ಪೂರೈಕೆಯು ಮಳೆಗಾಲದಕ್ಕಿಂತ ಸ್ವಲ್ಪ ಹೆಚ್ಚು ಇದ್ದರೂ ಬೇಡಿಕೆಯ ನಿಧಾನ ಏರಿಕೆಯಿಂದಾಗಿ ಮಾರುಕಟ್ಟೆ ಬೆಲೆ ಆರ್ಥಿಕವಾಗಿ ಬೆಳೆಗಾರರಿಗೆ ಮಳೆಗಾಲಕ್ಕಿಂತ ಹೆಚ್ಚು ಲಾಭ ದೊರೆಯುತ್ತದೆ. ಬೇಸಿಗೆ ಕಾಲದಲ್ಲಿ ಶುಭ ಸಮಾರಂಭಗಳು ಅಧಿಕ; ಮಲ್ಲಿಗೆ ಬೆಳೆಯೂ ಅಧಿಕ, ಬೇಸಿಗೆಯ ನಾಲ್ಕು ತಿಂಗಳುಗಳಲ್ಲಿ ಬೇಡಿಕೆ ಅಧಿಕವಿರುವ ದಿನಗಳಲ್ಲಿ ಬೆಳೆಗಾರರಿಗೆ ಹೆಚ್ಚು ಲಾಭ ಬರುತ್ತದೆ. ಪೂರೈಕೆ ಅಧಿಕವಿರುವ ದಿವಸಗಳಲ್ಲಿ ಮಾರಾಟಗಾರರ ಅದೃಷ್ಟ ಖುಲಾಯಿಸುತ್ತದೆ.

### ೬.೩ ಬೆಲೆ ನಿರ್ಧಾರದ ಸಮಸ್ಯೆಗಳು

ಮಲ್ಲಿಗೆ ಒಂದು ಕೃಷಿ ಉತ್ಪನ್ನವಾದುದರಿಂದ ಅದರ ಬೆಲೆಯನ್ನು ಬೇಡಿಕೆ ಮತ್ತು ಪೂರೈಕೆಯ ಶಕ್ತಿಗಳು ನಿರ್ಧರಿಸುತ್ತದೆ. ಮಲ್ಲಿಗೆಯ ಪೂರೈಕೆ ಮೂರು ಮೂಲಗಳಿಂದ ಆಗುತ್ತದೆ. ಸ್ಥಳೀಯ ಬೆಳೆಗಾರರಿಂದ, ಜಿಲ್ಲೆಯ ರಖಂ ವ್ಯಾಪಾರಿಗಳಿಂದ ಮತ್ತು ಹೊರ ಜಿಲ್ಲೆಯ ರಖಂ ವ್ಯಾಪಾರಿಗಳಿಂದ. ತಾಲೂಕು ಕೇಂದ್ರಗಳಲ್ಲಿ ಬಹುತೇಕವಾಗಿ ಸ್ಥಳೀಯ ಬೆಳೆಗಾರರಿಂದ ಪೂರೈಕೆಯಾಗುವ ಹೂಗಳನ್ನು ಮಾಡಲಾಗುತ್ತದೆ. ಬೇಡಿಕೆ ಹೆಚ್ಚಿದರೆ ಜಿಲ್ಲಾ ಕೇಂದ್ರಗಳಿಂದ ತರಿಸಿಕೊಳ್ಳಲಾಗುತ್ತದೆ. ಬೇಡಿಕೆ ಹೆಚ್ಚಾದಾಗ ಸಹಜವಾಗಿ ಬೆಲೆ ಹೆಚ್ಚಾಗುತ್ತದೆ ಮತ್ತು ಪೂರೈಕೆ ಹೆಚ್ಚಾದಾಗ ಬೆಲೆ ಕಡಿಮೆಯಾಗುತ್ತದೆ.

ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಮಾರಾಟಕ್ಕೆ ಲಭ್ಯವಾಗುವ ಬಹು ಮುಖ್ಯ ಹೂಗಳೆಂದರೆ ಮಲ್ಲಿಗೆ ಮತ್ತು ಗುಲಾಬಿ. ಜಿಲ್ಲೆಯಿಂದ ಮಲ್ಲಿಗೆ ನಿರ್ಯಾತವಾಗುವ ದಿಕ್ಕುಗಳನ್ನು ಚಿತ್ರ ೬.೩ ತೋರಿಸುತ್ತದೆ.




**ಚಿತ್ರ ೬.೩ ಪುಷ್ಪ ನಿರ್ಯಾತದ ದಿಕ್ಕುಗಳು**

ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲಾ ಕೇಂದ್ರಗಳಿಗೆ ಶಿವಮೊಗ್ಗ, ಮೈಸೂರು, ಬೆಂಗಳೂರು ಮತ್ತು ತುಮಕೂರು ಜಿಲ್ಲೆಗಳಿಂದ ಹೆಚ್ಚಿನ ಪ್ರಮಾಣದ ಪುಷ್ಪಗಳ ಪೂರೈಕೆಯಾಗುತ್ತದೆ. ಮೈಸೂರಿನಿಂದ ಸುಗಂಧರಾಜ ಮತ್ತು ಕಾಕಡ, ಶಿವಮೊಗ್ಗದಿಂದ ಜೀನ್ಯಾ ಸೇವಂತಿಗೆ ಮತ್ತು ಚೆಂಡು ಹೂವು, ಬೆಂಗಳೂರು, ತುಮಕೂರು ಮತ್ತು ಮೈಸೂರಿನಿಂದ ಕಾಕಡ ಪೂರೈಕೆಯಾಗುತ್ತದೆ. ನೇರ ಸಂಪರ್ಕವಿರುವ ಇತರ ಜಿಲ್ಲೆಗಳಿಂದಲೂ ಈ ಜಿಲ್ಲೆಗಳಿಗೆ ಹೂವಿನ ಪೂರೈಕೆಯಾಗುತ್ತದೆ. ಆದರೆ ಇವುಗಳಲ್ಲಿ ಅತ್ಯಧಿಕ ಮೌಲ್ಯದ ಹೂವು ಸ್ಥಳೀಯ ಮಲ್ಲಿಗೆಯೇ.

ಚಿತ್ರ ೬.೪ ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಿಗೆ ಆಯಾತವಾಗುವ ವಿವಿಧ ಹೂಗಳ ದಿಕ್ಕುಗಳನ್ನು ಸೂಚಿಸುತ್ತದೆ.




ಚಿತ್ರ 6.4 ಪುಷ್ಪ ಆಯಾತದ ದಿಕ್ಕುಗಳು

ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ಮಲ್ಲಿಗೆ ಕರ್ನಾಟಕದ ಅನೇಕ ಕಡೆಗೆ ಪೂರೈಕೆಯಾಗುತ್ತದೆ. ಬೆಂಗಳೂರು, ಮೈಸೂರು, ತುಮಕೂರು ಮತ್ತು ಶಿವಮೊಗ್ಗ ಕರಾವಳಿ ಕರ್ನಾಟಕದ ಮಲ್ಲಿಗೆಯನ್ನು ತರಿಸಿಕೊಳ್ಳುವ ಪ್ರಮುಖ ಕೇಂದ್ರಗಳು. ಈ ನಾಲ್ಕು ಕೇಂದ್ರಗಳಲ್ಲಿ ಕರಾವಳಿ ಕರ್ನಾಟಕದ ಜನರು ಸಾಕಷ್ಟು ಸಂಖ್ಯೆಯಲ್ಲಿ ಇರುವುದರಿಂದ ಈ ಕೇಂದ್ರಗಳಿಂದ ಮಲ್ಲಿಗೆಗೆ ತುಂಬಾ ಬೇಡಿಕೆ ಬರುತ್ತಿರುತ್ತದೆ. ಕರ್ನಾಟಕದಿಂದ ಹೊರಗೆ ಗೋವಾ, ಮುಂಬಯಿ ಮತ್ತು ಚೆನ್ನೈಗಳಲ್ಲಿ ಕರಾವಳಿ ಕರ್ನಾಟಕದ ಮಲ್ಲಿಗೆಗೆ ಒಳ್ಳೆಯ ಬೇಡಿಕೆ ಇದೆ. ಕೊಲ್ಲಿ ರಾಷ್ಟ್ರಗಳಲ್ಲಿರುವ ಭಾರತೀಯರು ಕರಾವಳಿ ಜಿಲ್ಲೆಗಳಿಂದ ಮಲ್ಲಿಗೆ ತರಿಸಿಕೊಳ್ಳುತ್ತಾರೆ. ಸ್ವಲ್ಪ ಮಟ್ಟಿಗೆ ಯುರೋಪಿಗೂ ಇವೆರಡೂ ಜಿಲ್ಲೆಗಳಿಂದ ಮಲ್ಲಿಗೆ ರಫ್ತಾಗುತ್ತದೆ. ಹಾಗಾಗಿ ಮಲ್ಲಿಗೆಯು ಸಣ್ಣ ಮಟ್ಟಿಗೆ ವಿದೇಶಿ ವಿನಿಮಯ ಗಳಿಕೆಗೆ ಕಾರಣವಾಗಿದೆ.

ಮಲ್ಲಿಗೆಯ ಸ್ಥಳೀಯ ಗ್ರಾಹಕರಲ್ಲಿ ಖಾಯಂ ಗ್ರಾಹಕರು ಮತ್ತು ಇತರ ಗ್ರಾಹಕರು ಎಂಬ ಎರಡು ವರ್ಗಗಳಿವೆ. ಉಡುಪಿ ಜಿಲ್ಲೆಯ ವ್ಯಾಪಾರಿಗಳು ಶೇ. ೩೭.೫ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ವ್ಯಾಪಾರಿಗಳು ಶೇ ೩೧.೯ ಮಂದಿ ಖಾಯಂ ಗ್ರಾಹಕರನ್ನು ಹೊಂದಿದ್ದಾರೆ. ಈ ಗ್ರಾಹಕರು ವಾಹನ, ಅಂಗಡಿ, ಹೋಟೇಲ್ ಮತ್ತು ಇತರ ಉದ್ಯಮಗಳ ಮಾಲಿಕರು. ಖಾಯಂ ಗ್ರಾಹಕರಲ್ಲಿ ಆರಾಧನಾ ಕೇಂದ್ರಗಳೂ ಸೇರಿವೆ.

ಖಾಯಂ ಗ್ರಾಹಕರಿಗೆ ಮಲ್ಲಿಗೆ ಮಾರಾಟ ಮಾಡಿದರೆ ಅನಿರೀಕ್ಷಿತ (Windfall Profit) ಲಾಭವಿರುವುದಿಲ್ಲ. ಏಕೆಂದರೆ ಅವರಿಗೆ ಒಂದು ಪೂರ್ವ ನಿಗದಿತ ದರವನ್ನು ಆಧಾರವಾಗಿಟ್ಟುಕೊಂಡು ಮಲ್ಲಿಗೆಯನ್ನು ಪೂರೈಕೆ ಮಾಡಬೇಕಾಗುತ್ತದೆ. ಇತರ ಗ್ರಾಹಕರೆಂದರೆ ಮಾರುಕಟ್ಟೆಗೆ ಬರುವ ಬೇರೆ ಅನುಭೋಗಿಗಳು ಹಾಗೂ ಮದುವೆ ಮುಂತಾದ ಶುಭ ಕಾರ್ಯಗಳಿಗೆ ಮಲ್ಲಿಗೆಯನ್ನು ಬಳಸುವ ಮಂದಿಗಳು. ಇವರಿಗೆ ಮಲ್ಲಿಗೆಯ ತುರ್ತು ಅವಶ್ಯಕತೆಯಿರುವುದರಿಂದ ಬೆಲೆಯ ಕುರಿತಾಗಿ ಇವರು ಹೆಚ್ಚು ತಲೆಕೆಡಿಸಿಕೊಳ್ಳುವುದಿಲ್ಲ. ಹಾಗಾಗಿ ಈ ಗ್ರಾಹಕರಿಗೆ ಹೂ ಮಾರಾಟ ಮಾಡಿದರೆ ವ್ಯಾಪಾರಿಗಳಿಗೆ ಲಾಭಾಂಶ ಹೆಚ್ಚಾಗುತ್ತದೆ.

ಸಾಧಾರಣವಾಗಿ ಬೇಡಿಕೆ ಮತ್ತು ಪೂರೈಕೆಗಳಿಂದ ಬೆಲೆ ನಿರ್ಧಾರ ಆಗುವುದಾದರೂ, ಮಲ್ಲಿಗೆ ವ್ಯಾಪಾರಿಗಳು ಬೆಲೆ ನಿರ್ಣಯಿಸುವಾಗ ಕೆಲವು ಅಂಶಗಳನ್ನು ಗಣನೆಗೆ ತೆಗೆದುಕೊಳ್ಳ ಬೇಕಾಗುತ್ತದೆ. ಅವುಗಳಲ್ಲಿ ಬೆಳೆಗಾರರ ಪೂರೈಕೆ ವೆಚ್ಚ, ಸಾಗಾಟ ವೆಚ್ಚ, ಸಂಗ್ರಹಣಾ ವೆಚ್ಚ ಸ್ಥಳ ಬಾಡಿಗೆ ಅಥವಾ ತೆರಿಗೆ ಹಾಗೂ ಲಾಭಾಂಶ ಒಳಗೊಂಡಿರುತ್ತದೆ. ಲಾಭಾಂಶ ಪ್ರಮಾಣ ಹೆಚ್ಚಾದರೆ ಅದರಿಂದ ಬೆಳೆಗಾರರಿಗೆ ಲಾಭವೇನು ಇಲ್ಲ. ಆದರೆ ಮಲ್ಲಿಗೆಯನ್ನು ಹೆಚ್ಚು ದಿನ ಸಂಗ್ರಹಿಸಿಡಲು ಸಾಧ್ಯವಿಲ್ಲ. ಮಾರಾಟಗಾರರು ಅಪಾಯಗಳಿಗೆ ತಮ್ಮನ್ನು ಒಡ್ಡಿಕೊಂಡು ಪುಷ್ಪಗಳಿಗೆ ಬೇಡಿಕೆ ಸಲ್ಲಿಸಬೇಕಾಗುತ್ತದೆ. ಈ ಉದ್ಯಮದಲ್ಲಿ ಅಪಾಯ ಜಾಸ್ತಿ ಇದ್ದರೆ ಲಾಭವೂ ಅಧಿಕ ಹಾಗೆಯೇ ಅನಿಶ್ಚಿತತೆ ಅಧಿಕವಿರುವಲ್ಲಿ ಕೂಡಾ ಲಾಭ ಹೆಚ್ಚಿರುತ್ತದೆ. ಮಲ್ಲಿಗೆಯ ವ್ಯಾಪಾರದಲ್ಲಿನ ಲಾಭವು ಮಲ್ಲಿಗೆ ಮಾರಾಟದ ಅಪಾಯ ಮತ್ತು ಅನಿಶ್ಚಿತತೆಗಳೊಡನೆ ಧನಾತ್ಮಕ ಸಂಬಂಧವನ್ನು ಹೊಂದಿರುತ್ತದೆ.

ಉಡುಪಿ ಜಿಲ್ಲೆಯ ವ್ಯಾಪಾರಿಗಳಲ್ಲಿ ಶೇ. ೫೬.೨೫ ಮಂದಿ ಮಲ್ಲಿಗೆ ಮಾರಾಟದಿಂದ ದಿನವೊಂದಕ್ಕೆ ಸರಾಸರಿ ರೂ ೩೫೦ – ೪೦೦ ರ ವರೆಗೆ ಲಾಭ ಗಳಿಸಲು ಸಾಧ್ಯವಿದೆ ಎಂದು ಪ್ರತಿಕ್ರಿಯಿಸಿದ್ದಾರೆ. ಇವರ ಪ್ರಮಾಣ ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶೇ. ೫೮.೫ ಮಂದಿ. ಮಲ್ಲಿಗೆ ಮಾರಾಟದಿಂದ ದಿನವೊಂದಕ್ಕೆ ಸುಮಾರು ರೂ ೫೦೦ರಷ್ಟು ಲಾಭ ಗಳಿಸಲು ಸಾಧ್ಯವಿದೆ ಎಂದು ಒಪ್ಪಿಕೊಳ್ಳುವವರ ಪ್ರಮಾಣ ಉಡುಪಿ ಜಿಲ್ಲೆಯಲ್ಲಿ ಶೇ. ೩೭.೫ ಮತ್ತು ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಶೇ. ೩೩.೯. ರೂ. ೫೦೦ಕ್ಕಿಂತಲೂ ಹೆಚ್ಚು ಲಾಭ ಗಳಿಸಲು ಸಾಧ್ಯವಿದೆ ಎಂದು

ಉಡುಪಿ ಜಿಲ್ಲೆಯ ಶೇ. ೬.೨೫ ಮಂದಿ ವ್ಯಾಪಾರಿಗಳು ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಶೇ. ೭.೬ ಮಂದಿ ವ್ಯಾಪಾರಿಗಳು ಒಪ್ಪಿದ್ದಾರೆ. ೮೫೦ ವ್ಯಾಪಾರಿಗಳು ದಿನವೊಂದರಲ್ಲಿ ರೂ. ೧೦೦೦ಕ್ಕಿಂತಲೂ ಅಧಿಕ ಆದಾಯ ಬರುತ್ತಿದೆಯೆಂದು ಒಪ್ಪಿಕೊಳ್ಳುತ್ತಾರೆ.

## ೬.೪ ಮಾರಾಟಗಾರರ ಇತರ ಸಮಸ್ಯೆಗಳು

ಮಲ್ಲಿಗೆ ಮಾರಾಟಗಾರರ ಸಮಸ್ಯೆಗಳಲ್ಲಿ ನಗದು ಪಾವತಿ ಸಮಸ್ಯೆ, ಬೆಲೆಯ ಏರಿಳಿತದ ಸಮಸ್ಯೆ ಹಣಕಾಸಿನ ಸಮಸ್ಯೆ ಮತ್ತು ಕಟ್ಟಡ ಬಾಡಿಗೆ ಮತ್ತು ತೆರಿಗೆಯ ಸಮಸ್ಯೆಗಳು ಒಳಗೊಂಡಿದೆ. ಮಲ್ಲಿಗೆ ಮಾರಾಟಗಾರರು ತಮಗೆ ಪೂರೈಕೆಯಾಗುವ ಹೂವುಗಳಿಗೆ ತಕ್ಷಣ ಹಣ ಪಾವತಿ ಮಾಡಬೇಕಾಗುತ್ತದೆ. ಸ್ಥಳೀಯ ಬೆಳೆಗಾರರಿಗೆ ಪಾವತಿಸಲು ಸ್ವಲ್ಪ ಕಾಲಾವಧಿಯನ್ನು ತೆಗೆದುಕೊಂಡರೂ ದೀರ್ಘಕಾಲ ಪಾವತಿಯನ್ನು ಮುಂದೂಡಲು ಸಾಧ್ಯವಾಗುವುದಿಲ್ಲ. ಹಣ ಪಾವತಿ ಮಾಡಬೇಕಾದರೆ ಪುಷ್ಪಗಳ ಮಾರಾಟವಾಗಬೇಕು. ಕೆಲವೊಮ್ಮೆ ಪುಷ್ಪಗಳ ಬೇಡಿಕೆ ಬಹಳ ಕಡಿಮೆ ಇರುತ್ತದೆ. ಅಂತಹ ಸಂದರ್ಭದಲ್ಲಿ ಮಾರುಕಟ್ಟೆ ಬೆಲೆ ಇಳಿದರೂ ಬೆಳೆಗಾರರಿಗೆ ಪೂರ್ವ ಒಪ್ಪಂದದಂತೆ ಬೆಲೆ ಪಾವತಿ ಮಾಡಬೇಕಾಗುತ್ತದೆ. ಇದರಿಂದಾಗಿ ವ್ಯಾಪಾರಿಗಳು ಸಂಕಷ್ಟಕ್ಕೆ ಸಿಲುಕುತ್ತಾರೆ. ಕೆಲವೊಮ್ಮೆ ಅವರು ನಷ್ಟವನ್ನು ಅನುಭವಿಸಬೇಕಾಗುತ್ತದೆ.

ಪುಷ್ಪಗಳ ಬೇಡಿಕೆ ಮತ್ತು ಪೂರೈಕೆಗಳಿಗೆ ನಿಶ್ಚಿತತೆ ಇರುವುದಿಲ್ಲ. ಕೆಲವು ಋತುಗಳಲ್ಲಿ ಪೂರೈಕೆ ಕಡಿಮೆಯಾದರೂ ಬೇಡಿಕೆಯು ಕಡಿಮೆಯಾಗಿ ಲಾಭಾಂಶ ಕಡಿಮೆಯಾಗಿ ಬಿಡುತ್ತದೆ. ಬೇಡಿಕೆ ಹೆಚ್ಚು ಇರುವ ಋತುಗಳಲ್ಲಿ ಪೂರೈಕೆಯು ಹೆಚ್ಚಾದರೆ ಹೆಚ್ಚು ಲಾಭಾಂಶ ಗಳಿಸಲು ಸಾಧ್ಯವಾಗುವುದಿಲ್ಲ. ಹೊರ ಊರುಗಳಿಂದ ಪೂರ್ವ ನಿಶ್ಚಿತ ಪ್ರಮಾಣದಷ್ಟು ಹೂಗಳನ್ನು ತರಿಸಲೇ ಬೇಕಾಗುತ್ತದೆ. ಗುರುತು ಪರಿಚಯವಿರುವ ಸ್ಥಳೀಯ ಬೆಳೆಗಾರರು ಪೂರೈಕೆ ಮಾಡಿದಾಗ ಮಾರುಕಟ್ಟೆ ಬೇಡಿಕೆ ಕಡಿಮೆ ಇದ್ದರೂ ವ್ಯಾಪಾರಿಗಳು ಅದನ್ನು ನಿರಾಕರಿಸುವಂತಿಲ್ಲ. ಹಾಗಾಗಿ ಮಾರುಕಟ್ಟೆಯ ಅನಿಶ್ಚಿತತೆಯ ಹೊಣೆಯನ್ನು ವ್ಯಾಪಾರಿಗಳೇ ಹೊರಬೇಕಾಗುತ್ತದೆ. ಈ ಅನಿಶ್ಚಿತತೆಯನ್ನು ಲಾಭಾಂಶದಲ್ಲೂ ಕಾಣಲು ಸಾಧ್ಯವಿದೆ.

ಚಿಲ್ಲರೆ ಪುಷ್ಪ ವ್ಯಾಪಾರಿಗಳಲ್ಲಿ ಶ್ರೀಮಂತರ ಸಂಖ್ಯೆ ಬಹಳ ಕಡಿಮೆ. ಹೋಬಳಿ ಮತ್ತು ತಾಲೂಕು ಕೇಂದ್ರಗಳಲ್ಲಿ ಮಧ್ಯಮ ವರ್ಗದ ಮತ್ತು ಕೆಳ ಮಧ್ಯಮ ವರ್ಗಕ್ಕೆ ಸೇರಿದ ವ್ಯಾಪಾರಿಗಳದ್ದೇ ಪ್ರಾಬಲ್ಯ. ಪುಷ್ಪ ಪೂರೈಕೆದಾರರಿಗೆ ಹಣವನ್ನು ತಕ್ಷಣ ಪಾವತಿಸಬೇಕಾಗಿ ಬಂದಾಗ ಇವರು ಸಮಸ್ಯೆಗೆ ಸಿಲುಕುತ್ತಾರೆ. ಪುಷ್ಪ ಮಾರಾಟಗಾರರು ವಾಣಿಜ್ಯ ಬ್ಯಾಂಕುಗಳಿಂದ ಕಡಿಮೆ ಬಡ್ಡಿ ದರದ ಕೃಷಿ ಸಾಲವನ್ನು ಪಡೆಯಲು ಅರ್ಹರಾಗಿರುವುದಿಲ್ಲ.

ಖಾಸಗಿ ಹಣ ಸಾಲದಾತರಿಂದ ಸಾಲ ಪಡೆದುಕೊಂಡರೆ ಅಧಿಕ ಬಡ್ಡಿಯನ್ನು ನೀಡಬೇಕಾಗುತ್ತದೆ. ಕೆಲ ಮಧ್ಯಮ ವರ್ಗದ ಪುಷ್ಪ ವ್ಯಾಪಾರಿಗಳಿಗೆ ತಮ್ಮ ನಿರ್ದಿಷ್ಟವಾದ ದೈನಂದಿನ ಆದಾಯದಲ್ಲಿ ಸಂಸಾರದ ಖರ್ಚನ್ನು ಭರಿಸಬೇಕಾಗಿರುವುದರಿಂದ ದೈನಂದಿನ ಹೂ ಖರೀದಿ ಮಾಡಲು ಆರ್ಥಿಕ ಅಡಚಣೆ ಉಂಟಾಗುತ್ತದೆ. ಆದುದರಿಂದ ಶೇ. ೭೨ ಮಾರಾಟಗಾರರು ಹೇಳುವ ಪ್ರಕಾರ ಅವರು ತೀವ್ರವಾದ ಹಣಕಾಸಿನ ಸಮಸ್ಯೆಯಿಂದ ಬಳಲುತ್ತಾರೆ.

ಕೆಲವು ಮಾರಾಟ ಕೇಂದ್ರಗಳಲ್ಲಿ ಸ್ಥಳೀಯ ಆಡಳಿತ ಅಥವಾ ಸ್ಥಳೀಯ ವ್ಯಕ್ತಿಗಳ ಕಟ್ಟಡಗಳಲ್ಲಿ ವ್ಯಾಪಾರಿಗಳು ಪುಷ್ಪ ವ್ಯಾಪಾರ ಮಾಡುತ್ತಾರೆ. ಕಟ್ಟಡ ಅಥವಾ ಸ್ಥಳ ಬಾಡಿಗೆ ಒಂದು ಒಪ್ಪಂದದ ಪ್ರಕಾರ (Contractual Rent) ನಿರ್ಧಾರವಾಗುತ್ತದೆ. ವರ್ಷದಿಂದ ವರ್ಷಕ್ಕೆ ಅದು ಪರಿಷ್ಕರಣಗೊಂಡು ಹೆಚ್ಚಾಗುತ್ತಿರುತ್ತದೆ. ವ್ಯಾಪಾರಿಗಳಿಗೆ ಲಾಭ ಬರಲಿ, ಬಾರದಿರಲಿ, ಅವರು ಒಪ್ಪಂದದನ್ವಯ ನಿರ್ಧಾರವಾದ ಬಾಡಿಗೆಯನ್ನು ನೀಡಬೇಕಾಗುತ್ತದೆ. ಇಂತಹ ಕಟ್ಟಡಗಳಲ್ಲಿ ಪ್ರತ್ಯೇಕ ಕೋಣೆಯ ಸವಲತ್ತು ಇಲ್ಲದಿದ್ದುದರಿಂದ ಅವರು ಶೀತಲ ವ್ಯವಸ್ಥೆಯನ್ನು ಬಳಸುವ ಹಾಗಿಲ್ಲ.

ಬೀದಿ ಬದಿಯ ವ್ಯಾಪಾರಿಗಳು ಕೆಲವು ನಿರ್ದಿಷ್ಟ ಸ್ಥಳಗಳಲ್ಲಿ ಪುಷ್ಪ ಮಾರಾಟ ಮಾಡುತ್ತಾರೆ. ಹೊರ ಊರುಗಳಿಂದ ಬರುವ ವ್ಯಾಪಾರಿಗಳು, ಸ್ಥಳೀಯ ವ್ಯಾಪಾರಿಗಳು, ದಿನವೂ ವ್ಯಾಪಾರ ಮಾಡುವ ಸ್ಥಳೀಯ ವ್ಯಾಪಾರಿಗಳಿಗಿಂತ ಕಡಿಮೆ ದರದಲ್ಲಿ ಹೂವುಗಳನ್ನು ಮಾರಾಟ ಮಾಡಿ ಸಮಸ್ಯೆ ಸೃಷ್ಟಿಸುತ್ತಾರೆ. ಇಂತಹ ಸಮಸ್ಯೆಗಳಿಗೆ ಯಾವ ಪರಿಹಾರವು ಇರುವುದಿಲ್ಲ. ಸ್ಥಳೀಯ ವ್ಯಾಪಾರಿಗಳಲ್ಲಿ ಒಗ್ಗಟ್ಟು ಇಲ್ಲದ ಕಾರಣ ಈ ಸಮಸ್ಯೆ ತುಂಬಾ ತೀವ್ರ ಸ್ವರೂಪದ್ದೇ ಆಗಿದೆ.

ನಿಗದಿತ ಸೂರು ಇಲ್ಲದೆ ಹೂವು ವ್ಯಾಪಾರ ಮಾಡುವ ವ್ಯಾಪಾರಿಗಳು ಮಳೆ, ಬಿಸಿಲು ಮತ್ತು ಧೂಳು ಇತ್ಯಾದಿ ಸಮಸ್ಯೆಗಳಿಂದ ಆಗಾಗ ಅನಾರೋಗ್ಯಕ್ಕೆ ಈಡಾಗುತ್ತಾರೆ. ವ್ಯಾಪಾರಿಗಳಿಗೆ ವಾರದಲ್ಲಿ ಒಂದು ದಿನವೂ ರಜೆಯೆಂಬುದಿಲ್ಲ. ಊರಿಗೆ ಊರೇ ಯಾವುದೋ ಹಬ್ಬ ಅಥವಾ ಉತ್ಸವದ ರಜೆ ಮತ್ತು ಮೋಜನ್ನು ಅನುಭವಿಸುತ್ತಿದ್ದರೆ ವ್ಯಾಪಾರಿಗಳು ಬೆಳಗ್ಗೆ ೬ ರಿಂದ ರಾತ್ರಿ ೮ ರವರೆಗೆ ತಮ್ಮ ಕಾಯಕ ನಡೆಸಬೇಕಾಗಿದೆ. ಸಂಘಟಿತ ಕ್ಷೇತ್ರದಲ್ಲಾದರೆ ಇದು ಎರಡು ಪಾಳಿಗಳ ದುಡಿತ. ಮಲ್ಲಿಗೆ ಮಾರಾಟ ರಂಗವು ಅಸಂಘಟಿತ ಕ್ಷೇತ್ರವಾದುದರಿಂದ ಅವರಿಗೆ ಆರೋಗ್ಯ ಸವಲತ್ತುಗಳಾಗಲೀ, ರಜಾ ಸವಲತ್ತುಗಳಾಗಲೀ ಇರಲು ಸಾಧ್ಯವಿಲ್ಲ. ಖಾಯಂ ಗ್ರಾಹಕರಿಗೆ ಪ್ರತಿ ದಿನ ಹೂವನ್ನು ಮಾರಾಟ ಮಾಡಲೇ ಬೇಕು ಹಾಗಾಗಿ ಒಟ್ಟಿನಲ್ಲಿ ವ್ಯಾಪಾರಿಗಳು ಹೇಳುವ ಪ್ರಕಾರ ಮಲ್ಲಿಗೆ ಮಾರಾಟಗಾರರು ಮಲ್ಲಿಗೆ ಬೆಳೆಗಾರರಿಗಿಂತಲೂ ಹೆಚ್ಚು ಸಮಸ್ಯೆಗಳನ್ನು ಅನುಭವಿಸುತ್ತಿದ್ದಾರೆ.

## ಟಿಪ್ಪಣಿಗಳು

1. ಮೂಡಬಿದಿರೆ, ಕಾರ್ಕಳ, ವೇಣೂರು, ನಾರಾವಿ, ಗುರುವಾಯನಕೆರೆ ಮೊದಲಾದ ಪ್ರದೇಶಗಳಲ್ಲಿ ಜೈನ ಸಮುದಾಯದವರು ಮಲ್ಲಿಗೆ ಬೆಳೆ ಮತ್ತು ಮಾರಾಟದಲ್ಲಿ ಕಂಡು ಬರುತ್ತಾರೆ.

2. ವಿವಿಧ ಧಾರ್ಮಿಕ ಸಮುದಾಯಗಳ ಒಟ್ಟು ಜನಸಂಖ್ಯೆಯಲ್ಲಿ ಮಾರಾಟಗಾರರ ಸಂಖ್ಯೆಯ ಅನುಪಾತವನ್ನು ಆಧರಿಸಿ ಈ ನಿರ್ಧಾರಕ್ಕೆ ಬರಲಾಗಿದೆ.

3. ೧೪ನೇ ಸೆಪ್ಟೆಂಬರ್ ೨೦೦೮ ರಂದು ಮಿಲಾಗ್ರೀಸ್ ಚರ್ಚಿನ ಮೇಲೆ ಧಾಳಿ ನಡೆಯಿತು. ಇದು ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಯ ಹಲವಾರು ಚರ್ಚ್‌ಗಳ ಮೇಲೆ ದಾಳಿ ನಡೆಯಲು ಪ್ರೇರಣೆ ಒದಗಿಸಿತು.

4. ಮಂಗಳೂರು ಮಲ್ಲಿಗೆ ವ್ಯಾಪಾರಿ ಮಹಮ್ಮದ್ ಕೊಟ್ಟ ಮಾಹಿತಿ.

5. ಬಂಟ್ವಾಳ ತಾಲೂಕಿನ ವಿಟ್ಲದ ಮಾರಾಟಗಾರರ ಸಂದರ್ಶನದ ವೇಳೆ ತಿಳಿಸಿದ ವಿಚಾರ.

6. ಸಂದರ್ಶಿಸಲಾದ ಕೆಲವು ಮಾರಾಟಗಾರರ ಸಹೋದರರು ಸ್ನಾತಕೋತ್ತರ ಪದವಿಯನ್ನು ಪಡೆದು ನಿರುದ್ಯೋಗಿಗಳಾಗಿದ್ದರು. ಮಲ್ಲಿಗೆ ಮಾರಾಟ ಕ್ಷೇತ್ರಕ್ಕೆ ಅವರು ಪ್ರವೇಶಿಸದಿರುವುದಕ್ಕೆ ಕಾರಣವೇನೆಂದು ನೇರ ಸಂದರ್ಶನ ಕಾಲದಲ್ಲಿ ಕೇಳಿದ ಪ್ರಶ್ನೆಗೆ ದೊರೆತ ಉತ್ತರ.

# ಅಧ್ಯಾಯ -೭

# ಅಧ್ಯಯನದ ಫಲಿತಗಳು ಮತ್ತು ಸಲಹೆಗಳು

## ೭.೧. ಮಲ್ಲಿಗೆ ಬೆಳೆಗಾರರ ಸಮಸ್ಯೆಗಳ ವಿಶ್ಲೇಷಣೆಯ ಫಲಿತಗಳು.

ಅಧ್ಯಾಯ ೫ರಲ್ಲಿ ಮಲ್ಲಿಗೆ ಬೆಳೆಗಾರರ ಸಮಸ್ಯೆಗಳನ್ನು ಕ್ರಮಬದ್ಧವಾಗಿ ವಿಶ್ಲೇಷಿಸಲಾಗಿದೆ. ಅದರ ಫಲಿತಗಳನ್ನು ಸಂಕ್ಷಿಪ್ತವಾಗಿ ಇಲ್ಲಿ ದಾಖಲಿಸಲಾಗಿದೆ.

- ಮಲ್ಲಿಗೆ ಬೆಳೆಗಾರರ ಸಂಖ್ಯೆ ದ.ಕ. ಜಿಲ್ಲೆಯಲ್ಲಿ ಉಡುಪಿ ಜಿಲ್ಲೆಗಿಂತ ಅಧಿಕ. ಇದಕ್ಕೆ ಬಹುಮುಖ್ಯ ಕಾರಣ ದ.ಕ. ಜಿಲ್ಲೆಯ ವಿಸ್ತೀರ್ಣ ಮತ್ತು ಜನಸಂಖ್ಯೆ ಉಡುಪಿ ಜಿಲ್ಲೆಗಿಂತ ಹೆಚ್ಚು ಇರುವುದು. ಆದರೆ ಇವೆರಡು ಜಿಲ್ಲೆಗಳು ವಿಭಜನೆಗೊಳ್ಳುವುದಕ್ಕೆ ಮೊದಲು ಮಲ್ಲಿಗೆಯ ರಾಜಧಾನಿ ಎಂದು ಕರೆಯಿಸಿಕೊಳ್ಳುತ್ತಿದ್ದ ಶಂಕರಪುರದ ಸ್ಥಾನಮಾನಕ್ಕೆ ವಿಭಜನೆಯ ಬಳಿಕವೂ ಧಕ್ಕೆ ಬಂದಿಲ್ಲ. ಉಡುಪಿ ನಗರ ಮತ್ತು ಮಂಗಳೂರು ನಗರಗಳ ರಖಂ ವ್ಯಾಪಾರಿಗಳಿಗೆ ಈಗಲೂ ಮಲ್ಲಿಗೆ ಪೂರೈಕೆಯಾಗುತ್ತಿರುವುದು ಶಂಕರಪುರದಿಂದ. ಮಲ್ಲಿಗೆ ಬೆಳೆಗಾರರ ಎರಡೂ ಜಿಲ್ಲೆಗಳ ಒಟ್ಟು ಸಂಖ್ಯೆ ತೆಗೆದುಕೊಂಡರೆ ಹಿಂದುಗಳ ಪ್ರಮಾಣ ಅಧಿಕ. ಕ್ರಿಶ್ಚಿಯನ್ನರು ಮತ್ತು ಮುಸ್ಲಿಮರು ಆ ಬಳಿಕದ ಸ್ಥಾನವನ್ನು ಪಡೆಯುತ್ತಾರೆ. ಅಲ್ಪ ಸಂಖ್ಯಾತರಾದ ಜೈನರಲ್ಲಿ ಅನೇಕರು ಮಲ್ಲಿಗೆ ಕೃಷಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ದ.ಕ. ಜಿಲ್ಲೆಗೆ ಹೋಲಿಸಿದರೆ ತುಲನಾತ್ಮಕವಾಗಿ ಮಲ್ಲಿಗೆ ಬೆಳೆಯುವ ಕ್ರಿಶ್ಚಿಯನ್ನರ ಸಂಖ್ಯೆ ಉಡುಪಿಯಲ್ಲಿ ಅಧಿಕ. ಮಲ್ಲಿಗೆ ರಾಜಧಾನಿಯೆನಿಸಿದ ಶಂಕರಪುರ ಉಡುಪಿ ಜಿಲ್ಲೆಯಲ್ಲಿರುವುದು ಇದಕ್ಕೆ ಕಾರಣ. ಸ್ಥೂಲವಾಗಿ ವಿಶ್ಲೇಷಿಸಿದಾಗ ಎಲ್ಲಾ ಜಾತಿಗಳ ಮತ್ತು ಎಲ್ಲಾ ಧರ್ಮಗಳ ಜನರು ಮಲ್ಲಿಗೆ ಬೆಳೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವುದು ಕಂಡುಬರುತ್ತದೆ. ಹಾಗಾಗಿ ಮಲ್ಲಿಗೆ ಕೃಷಿಯನ್ನು ಧರ್ಮ ಸಮನ್ವಯ ಮತ್ತು ಜಾತ್ಯಾತೀತವಾದ ವೃತ್ತಿ ಎಂದು ಕರೆಯಬಹುದು.
- ಮಲ್ಲಿಗೆ ಉದ್ಯಮದಲ್ಲಿ ಸಾಪೇಕ್ಷವಾಗಿ ಪ್ರಮೀಳೆಯರದೇ ಮೇಲುಗೈ. ಉಡುಪಿ ಮತ್ತು ದ.ಕ. ಜಿಲ್ಲೆಗಳಲ್ಲಿ ಮಲ್ಲಿಗೆ ಕೃಷಿಯಲ್ಲಿ ಪುರುಷರಿಗಿಂತ ಮಹಿಳೆಯರು ತಮ್ಮನ್ನು ತೊಡಗಿಸಿಕೊಂಡಿರುವುದು ನಿರೂಪಿತವಾಗಿದೆ. ಇವೆರಡು ಜಿಲ್ಲೆಗಳಲ್ಲಿ ಲಿಂಗಾನುಪಾತವು ಮಹಿಳೆಯರ ಪರವಾಗಿದೆ. ಬೀಡಿ ಮತ್ತು ಗೇರು ಸಂಸ್ಕರಣೆಗಳಲ್ಲಿರುವ ಜಂಜಡ ಮತ್ತು ಸಮಸ್ಯೆಗಳು ಮಲ್ಲಿಗೆ ಕೃಷಿಯಲ್ಲಿ ಇಲ್ಲ. ಗೃಹಕೃತ್ಯದೊಡನೆ ಸುಲಲಿತವಾಗಿ ಮಲ್ಲಿಗೆ ಕೃಷಿಯನ್ನು ನಡೆಸಿಕೊಂಡು ಹೋಗಲು ಸಾಧ್ಯವಿರುವುದರಿಂದ ಮಹಿಳೆಯರು ಬೀಡಿ ಮತ್ತು ಗೇರು ಉದ್ಯಮಗಳಿಗೆ ಪರ್ಯಾಯವೆಂದು ಮಲ್ಲಿಗೆ ಕೃಷಿಯನ್ನು ಭಾವಿಸುತ್ತಾರೆ. ಮಲ್ಲಿಗೆ

ಕೃಷಿಯಲ್ಲಿ ತೊಡಗಿಸಿಕೊಂಡಿರುವವರಲ್ಲಿ ಹೆಚ್ಚಿನವರು ೩೧ರಿಂದ ೬೦ವರ್ಷ ವಯೋಮಿತಿಯವರು. ಇದು ಮಲ್ಲಿಗೆ ಕೃಷಿಯ ಲಾಭದಾಯಕತೆಗೆ ಸಾಕ್ಷಿ. ಈ ವಯೋಮಾನಕ್ಕೆ ಸೇರಿದವರ ಬುದ್ಧಿಮತ್ತೆ ಅಧಿಕವಾಗಿರುವುದರಿಂದ ಇವರಿಗೆ ಮಲ್ಲಿಗೆ ಕೃಷಿಗೆ ಸಂಬಂಧಿಸಿದ ಯಾವುದೇ ಜ್ಞಾನವನ್ನು ಸುಲಭವಾಗಿ ನೀಡಲು ಸಾಧ್ಯವಾಗಿದೆ. ಮಲ್ಲಿಗೆ ಬೆಳೆಗಾರರಲ್ಲಿ ಆರನೇ ತರಗತಿಯಿಂದ ಪಿ.ಯು.ಸಿ ವರೆಗಿನ ಶಿಕ್ಷಣ ಪಡೆದವರು ಅಧಿಕವಾಗಿರುವುದರಿಂದ ಈ ಮಲ್ಲಿಗೆ ಬೆಳೆಗಾರರಿಗೆ ವೈಜ್ಞಾನಿಕ ಶಿಕ್ಷಣ ವನ್ನು ನೀಡಬಹುದು.

- ಅಧ್ಯಯನ ಕಾಲದಲ್ಲಿ ನಗರೀಕರಣ ಪ್ರಕ್ರಿಯೆಗೂ ಮಲ್ಲಿಗೆ ಬೆಳೆವ ಪ್ರದೇಶದ ವಿಸ್ತೀರ್ಣಕ್ಕೂ ನೇರ ಸಂಬಂಧವಿರುವುದನ್ನು ಕಂಡುಕೊಳ್ಳಲಾಗಿದೆ. ನಗರೀಕರಣ ಪ್ರಕ್ರಿಯೆಗೆ ಒಳಗಾದ ಪ್ರದೇಶಗಳ ಸುತ್ತ- ಮುತ್ತಣ ಜನರಲ್ಲಿ ಅನೇಕರು ಮಲ್ಲಿಗೆ ಬೆಳೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ. ಸುಲಭ ಮಾರುಕಟ್ಟೆಯ ಲಭ್ಯತೆ ಮತ್ತು ಮಲ್ಲಿಗೆ ಸಾಗಾಟದ ಸುಲಭಶೀಲತೆ ಇದಕ್ಕೆ ಕಾರಣ. ಆದರೆ ಒಂದು ಎಕರೆಗಿಂತ ಹೆಚ್ಚು ಭೂಮಿ ಹೊಂದಿರುವ ರೈತರಲ್ಲಿ ಬಹುತೇಕರು ತಮ್ಮ ಭೂಮಿಯನ್ನು ಪೂರ್ತಿಯಾಗಿ ಮಲ್ಲಿಗೆ ಬೆಳೆಗೆ ವಿನಿಯೋಗಿಸುತ್ತಿಲ್ಲ. ಮಲ್ಲಿಗೆ ಬೆಳೆಗಾರರ ಒಟ್ಟು ಭೂಮಿಯಲ್ಲಿ ಮಲ್ಲಿಗೆ ಬೆಳೆಯುವ ಪ್ರದೇಶದ ವಿಸ್ತೀರ್ಣ ಶೇ. ೨೦ಕ್ಕಿಂತಲೂ ಕಡಿಮೆ. ವಿಶೇಷವೆಂದರೆ ಮಲ್ಲಿಗೆ ಬೆಳೆಗಾರರಲ್ಲಿ ಬಹುತೇಕರು ಪಿತ್ರಾರ್ಜಿತ ಆಸ್ತಿಯನ್ನು ಮಲ್ಲಿಗೆ ಬೆಳೆಗೆ ಬಳಸುತ್ತಿದ್ದಾರೆ. ಮಲ್ಲಿಗೆ ಬೆಳೆ ಪ್ರದೇಶದಲ್ಲಿ ಶೇ. ೭೫ ಭಾಗಕ್ಕಿಂತಲೂ ಅಧಿಕ ಪಿತ್ರಾರ್ಜಿತ ಭೂಮಿಯಾಗಿದೆ.

- ಮಲ್ಲಿಗೆ ಬೆಳೆಗಾರರಲ್ಲಿ ಬಹುತೇಕರು ಸಣ್ಣ ಮತ್ತು ಅತೀ ಸಣ್ಣ ರೈತರಾಗಿದ್ದು ಜೀವನೋಪಾಯಕ್ಕೆ ಬೇರೆ ಕ್ಷೇತ್ರ ಸಿಗದ ಕಾರಣ ಇದನ್ನು ಆರಿಸಿಕೊಂಡಿದ್ದಾರೆ. ಅವರು ಮಲ್ಲಿಗೆ ಕೃಷಿಗೆ ಕೂಲಿಕಾರರನ್ನು ನೇಮಿಸಿಕೊಳ್ಳುವ ಸ್ಥಿತಿಯಲ್ಲಿ ಇಲ್ಲ. ಅದು ಅನಿವಾರ್ಯವು ಅಲ್ಲ. ಆದರೆ ಹವ್ಯಾಸಕ್ಕಾಗಿ ಅಥವಾ ಉಪವೃತ್ತಿಯಾಗಿ ಮಲ್ಲಿಗೆ ಬೆಳೆಯುವ ಶ್ರೀಮಂತ ಕುಟುಂಬದವರು ಕೂಲಿಕಾರರನ್ನು ಕೆಲಸಕ್ಕೆ ನೇಮಿಸಿಕೊಂಡದ್ದು ಅಧ್ಯಯನ ಕಾಲದಲ್ಲಿ ಸಾಕಷ್ಟು ಕಡೆಗಳಲ್ಲಿ ಗಮನಕ್ಕೆ ಬಂದಿದೆ. ಮಲ್ಲಿಗೆ ಬೆಳೆಗಾರರಲ್ಲಿ ಬಹುತೇಕರು ೫೦ಕ್ಕಿಂತ ಕಡಿಮೆ ಗಿಡಗಳನ್ನು ಬೆಳೆಯುತ್ತಿದ್ದಾರೆ. ಇದಕ್ಕೆ ಭೂಮಿಯ ವಿಸ್ತೀರ್ಣ ಕಡಿಮೆಯಿರುವುದು ಮತ್ತು ನೀರಾವರಿ ಸೌಲಭ್ಯದ ಕೊರತೆಯಿರುವುದು ಕಾರಣವಾಗಿರುತ್ತದೆ. ಮಲ್ಲಿಗೆ ಗಿಡಗಳ ಪ್ರಾಯದ ದೃಷ್ಟಿಯಿಂದ ಅವಲೋಕಿಸುವುದಾದರೆ ೨ರಿಂದ ೬ ವರ್ಷಗಳವರೆಗಿನ ಪ್ರಾಯದ ಗಿಡಗಳನ್ನು ಹೊಂದಿರುವ ರೈತರ ಸಂಖ್ಯೆ ಅತ್ಯಧಿಕವಾಗಿರುವುದು ಕಂಡು ಬರುತ್ತದೆ. ಆರು ವರ್ಷಗಳಿಗಿಂತ ಹೆಚ್ಚು ಪ್ರಾಯದ ಗಿಡಗಳಿಂದ ಬರುವ ಇಳುವರಿ ತುಲನಾತ್ಮಕವಾಗಿ

ಕಡಿಮೆಯಿರುವುದರಿಂದ ಮಲ್ಲಿಗೆ ಬೆಳೆಗಾರರು ಅವುಗಳನ್ನು ಬದಲಿಸಿ ಬೇರೆ ಗಿಡಗಳನ್ನು ನಾಟಿ ಮಾಡುತ್ತಾರೆ. ಆದರೆ ಇಳುವರಿ ಕಡಿಮೆಯಾಗದ ಗಿಡಗಳನ್ನು ಮರು ನಾಟಿ ಮಾಡಲು ರೈತರು ಮುಂದಾಗುವುದಿಲ್ಲ. ಈಗ ಬಳಕೆಯಲ್ಲಿರುವ ತಳಿಗಳು ಅಧಿಕ ಇಳುವರಿಯ ತಳಿಗಳಲ್ಲ. ಹಾಗಾಗಿ ಬೆಳೆಗಾರರ ಆದಾಯ ಬಹಳ ಕಡಿಮೆ ಇದೆ. ಮಲ್ಲಿಗೆ ಗಿಡಗಳನ್ನು ಮಣ್ಣಿನ ಪರೀಕ್ಷೆ ಮಾಡದೆ ಮತ್ತು ಪರಿಸರವನ್ನು ಅಧ್ಯಯನ ಮಾಡದೆ ನಾಟಿ ಮಾಡುವುದರಿಂದ ಉತ್ಪಾದನೆ ಕುಂಠಿತವಾಗಿದೆ. ಮಲ್ಲಿಗೆ ಬೆಳೆಯನ್ನು ವೈಜ್ಞಾನಿಕವಾಗಿ ಕೈಗೊಳ್ಳದಿರುವುದರಿಂದ ನಿರೀಕ್ಷಿತ ಆದಾಯ ಬೆಳೆಗಾರರಿಗೆ ಲಭಿಸಿಲ್ಲ.

- ಉಡುಪಿ ಮತ್ತು ದ.ಕ. ಜಿಲ್ಲೆಯಲ್ಲಿ ಮಲ್ಲಿಗೆ ಕೃಷಿಯು ಒಂದು ವಾಣಿಜ್ಯ ಉದ್ಯಮವಾಗಿ ಪರಿವರ್ತನೆಗೊಂಡಿದೆ. ಸಮೀಕ್ಷೆಗೆ ಒಳಪಡಿಸಿದ ವಕ್ತೃಗಳ ಆದಾಯದಲ್ಲಿ ೨/೩ ಭಾಗ ಮಲ್ಲಿಗೆ ಕೃಷಿಯಿಂದ ಬರುತ್ತದೆ. ಸಂದರ್ಶಿಸಲಾದ ವಕ್ತೃಗಳಲ್ಲಿ ಅನೇಕರು ಮಲ್ಲಿಗೆಯೊಂದಿಗೆ ಗುಲಾಬಿ, ಕನಕಾಂಬರ, ಜಾಜಿ, ಜರ್ಬೇರಾ, ಅಂಥೋರಿಯಂ ಮುಂತಾದವುಗಳನ್ನು ಬೆಳೆಸುತ್ತಾರೆ. ಗುಲಾಬಿ ಮತ್ತು ಮಲ್ಲಿಗೆಯನ್ನು ಹೊರತುಪಡಿಸಿದರೆ ಬೆಳೆಯುವ ಇತರ ಹೂವುಗಳ ಪ್ರಮಾಣ ಬಹಳ ಕಡಿಮೆಯಿದ್ದು ಅದಕ್ಕೆ ಯಾವುದೇ ಆರ್ಥಿಕ ಉದ್ದೇಶಗಳಿಲ್ಲ.

- ಮಲ್ಲಿಗೆ ಬೆಳೆಗಾರರಲ್ಲಿ ಬಹುತೇಕರು ಅದು ಲಾಭದಾಯಕ ಎಂಬ ಕಾರಣಕ್ಕಾಗಿ ಅದಕ್ಕೆ ಅಂಟಿಕೊಂಡಿದ್ದಾರೆ. ಅಂತವರ ಪ್ರಕಾರ ಮಲ್ಲಿಗೆ ಬೆಳೆಯ ವೆಚ್ಚ ಉತ್ಪನ್ನ ಅನುಪಾತವು ೩೦:೭೦ ಆಗಿರುತ್ತದೆ. ಇಷ್ಟೊಂದು ಲಾಭದಾಯಕತೆ ಇರುವುದರಿಂದ ಮಲ್ಲಿಗೆ ಕೃಷಿಗೆ ಪ್ರವೇಶಿಸುವವರ ಸಂಖ್ಯೆ ಹೆಚ್ಚಾಗುತ್ತದೆ. ಮಲ್ಲಿಗೆ ವ್ಯವಸಾಯಕ್ಕೆ ತುಂಬಾ ಬಂಡವಾಳದ ಅಗತ್ಯವೇನಿಲ್ಲ. ಬಹುತೇಕ ಬೆಳೆಗಾರರು ಸ್ವಂತ ಆದಾಯ ಮೂಲಗಳಿಂದ ಮಲ್ಲಿಗೆ ಕೃಷಿ ವೆಚ್ಚವನ್ನು ಭರಿಸುತ್ತಾರೆ. ವಾಣಿಜ್ಯ ಬ್ಯಾಂಕುಗಳು, ಸಹಕಾರಿ ಬ್ಯಾಂಕುಗಳು ಮತ್ತು ಸ್ವ ಸಹಾಯ ಗುಂಪುಗಳು ಸ್ವಲ್ಪ ಮಟ್ಟಿಗೆ ಮಲ್ಲಿಗೆ ಬೆಳೆಗಾರರ ಹಣಕಾಸಿನ ಅವಶ್ಯಕತೆಗಳನ್ನು ಈಡೇರಿಸುತ್ತವೆ. ಮಲ್ಲಿಗೆ ಬೆಳೆಗಾರರ ಅವಶ್ಯಕತೆಗಳು ಬಹಳ ಕಡಿಮೆಯಿರುವುದರಿಂದ ಹಣಕಾಸಿನ ವಿಷಯದಲ್ಲಿ ಅವರು ಗಂಭೀರ ಸಮಸ್ಯೆಯನ್ನು ಎದುರಿಸುತ್ತಿಲ್ಲ.

- ಮಲ್ಲಿಗೆ ಬೆಳೆಗಾರರು ಕೃಷಿಗೆ ಬೇಕಾದ ಮೂಲ ಸರಂಜಾಮುಗಳಿಗೆ ಸಂಬಂಧಿಸಿದಂತೆ ಕೆಲವು ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ. ಇವುಗಳಲ್ಲಿ ಬಹಳ ಮುಖ್ಯವಾದದ್ದು ನೀರಾವರಿಗೆ ಸಂಬಂಧಿಸಿದ ಸಮಸ್ಯೆ. ಬಹುತೇಕ ಮಲ್ಲಿಗೆ ಬೆಳೆಗಾರರು ತಮ್ಮ ಬಾವಿಗಳಿಂದ ನೀರೆತ್ತಿ ಮಲ್ಲಿಗೆ ಗಿಡಗಳಿಗೆ ಉಣಿಸಬೇಕಾಗಿದೆ. ಬೇಸಿಗೆಯಲ್ಲಿ

ಬಹುತೇಕ ಬಾವಿಗಳು ಬತ್ತಿ ಹೋಗುತ್ತವೆ. ಅಂತಹ ಕಾಲದಲ್ಲಿ ಮಲ್ಲಿಗೆ ಗಿಡಗಳಿಗೆ ನೀರಿಲ್ಲದೆ ಇಳುವರಿ ಕಡಿಮೆಯಾಗುತ್ತದೆ. ನಳ್ಳಿ ನೀರಿನ ಪೂರೈಕೆಯಿರುವಲ್ಲಿ ಬಹುತೇಕ ಬೆಳೆಗಾರರು ನಳ್ಳಿ ನೀರನ್ನು ಮಲ್ಲಿಗೆ ಬೆಳೆಗೆ ಬಳಸುತ್ತಿರುತ್ತಾರೆ. ಇದು ಕುಡಿಯುವ ನೀರಿನ ಸಮಸ್ಯೆಯನ್ನು ತೀವ್ರಗೊಳಿಸುತ್ತದೆ. ಮಲ್ಲಿಗೆ ಗಿಡಗಳಿಗೆ ಹಾಕುವ ಗೊಬ್ಬರಗಳಲ್ಲಿ ಸುಡುಮಣ್ಣು ಮತ್ತು ಬೂದಿಯದ್ದು ಪ್ರಧಾನ ಪಾಲು. ವಾಸ್ತವವಾಗಿ ಮಲ್ಲಿಗೆ ಗಿಡಗಳಿಗೆ ಬೇಕಾಗಿರುವ ಪ್ರಮುಖ ಗೊಬ್ಬರ ನೆಲಗಡಲೆ ಹಿಂಡಿ ಮತ್ತು ಹಟ್ಟಿ ಗಂಜಳ. ನೆಲಗಡಲೆ ಹಿಂಡಿ ಪರಿಸರಸಹ್ಯ ಆದರೆ ಬಹಳ ದುಬಾರಿ. ಬಡ ಮಲ್ಲಿಗೆ ಬೆಳೆಗಾರರು ಜಾನುವಾರುಗಳನ್ನು ಸಾಕುವ ಆರ್ಥಿಕ ಬಲ ಹೊಂದಿಲ್ಲ. ಈ ಸಮಸ್ಯೆಗಳು ಅವರನ್ನು ರಾಸಾಯನಿಕ ಗೊಬ್ಬರದೆಡೆಗೆ ಆಕರ್ಷಿಸಿದೆ. ರಾಸಾಯನಿಕ ಗೊಬ್ಬರದಿಂದಾಗಿ ತಾತ್ಕಾಲಿಕವಾಗಿ ಇಳುವರಿ ಅಧಿಕವಾದರೂ, ಕಾಲಕ್ರಮೇಣ ಮಣ್ಣು ತನ್ನ ಮೂಲ ಸತ್ವವನ್ನು ಕಳೆದುಕೊಂಡು ಇಳುವರಿ ಇಳಿಮುಖವಾಗುತ್ತದೆ. ಮಲ್ಲಿಗೆಯಲ್ಲಿ ಯಾವ ಗೊಬ್ಬರ ಮತ್ತು ಕೀಟನಾಶಕ ಬಳಸಬೇಕೆಂಬ ಗೊಂದಲ ರೈತರಲ್ಲಿದೆ. ಇದು ಉತ್ಪಾದನೆಯ ಮೇಲೆ ಪ್ರಭಾವ ಬೀರುತ್ತದೆ. ನಗರೀಕರಣಗೊಂಡ ಪ್ರದೇಶಗಳ ಮತ್ತು ಸುತ್ತಮುತ್ತಣ ಪ್ರದೇಶಗಳ ಮಲ್ಲಿಗೆ ಬೆಳೆಗೆ ವಾಯುಮಾಲಿನ್ಯ ಮತ್ತು ಜಲಮಾಲಿನ್ಯದಿಂದಾಗಿ ಕೆಲವು ರೋಗಗಳು ತಗಲಿಕೊಂಡಿವೆ. ಇವುಗಳಲ್ಲಿ ಎಲೆ ಮತ್ತು ಮೊಗ್ಗು ಮುದುಡುವ ರೋಗಗಳು ಬಹಳ ಮುಖ್ಯವಾದವುಗಳು. ರೋಗಗಳಿಗೆ ಕೀಟನಾಶಕ ಸಿಂಪಡಿಸಬೇಕಾಗಿ ಬರುತ್ತದೆ. ಇದರಿಂದಾಗಿ ಮಲ್ಲಿಗೆಯ ಉತ್ಪಾದನಾ ವೆಚ್ಚ ಅಧಿಕವಾಗುತ್ತದೆ.

- ಮಲ್ಲಿಗೆ ಬೆಳೆಗಾರರು ತಮ್ಮ ಬೆಳೆಯ ಬಹುಪಾಲನ್ನು ಮಾರಾಟಗಾರರಿಗೆ ಮಾರಾಟ ಮಾಡುತ್ತಿದ್ದಾರೆ. ಆದರೆ ಮಾರಾಟಗಾರರು ಬೆಳೆಗಾರರಿಗೆ ತಕ್ಷಣ ಹಣ ಪಾವತಿ ಮಾಡುವುದಿಲ್ಲ. ಬೆಳೆಗಾರರೇ ಮಾರಾಟಗಾರರಾಗಿರುವಲ್ಲಿ ಮತ್ತು ಬೆಳೆಗಾರರು ಗ್ರಾಹಕರಿಗೆ ನೇರವಾಗಿ ಮಲ್ಲಿಗೆ ಮಾರಾಟ ಮಾಡುವ ಪ್ರಕರಣಗಳಲ್ಲಿ ಬೆಳೆಗಾರರ ಲಾಭಾಂಶ ಅಧಿಕ. ಆದರೆ ಅಂತಹ ಬೆಳೆಗಾರರ ಸಂಖ್ಯೆ ಬಹಳ ಕಡಿಮೆ. ಹಾಗಾಗಿ ಬಹುತೇಕ ಮಲ್ಲಿಗೆ ಬೆಳೆಗಾರರು ಎಷ್ಟು ಲಾಭವನ್ನು ಪಡೆಯಬೇಕೋ ಅಷ್ಟನ್ನು ಪಡೆಯುತ್ತಿಲ್ಲ. ಮಲ್ಲಿಗೆಯ ಬೆಲೆ ಸ್ಥಿರವಾಗಿ ಇಲ್ಲದಿರುವುದು ಬೆಳೆಗಾರರಿಗೆ ಅತ್ಯಂತ ಆತಂಕವುಂಟುಮಾಡುವ ವಿಷಯವಾಗಿದೆ. ಮಲ್ಲಿಗೆಯ ಬೆಲೆಯು ಬೇಡಿಕೆ ಮತ್ತು ಪೂರೈಕೆಯಿಂದ ನಿರ್ಧಾರವಾಗುತ್ತದೆ. ಮಲ್ಲಿಗೆಯ ಬೇಡಿಕೆಯು ಬೆಲೆಯೊಡನೆ ಅನುಲೋಮ ಸಂಬಂಧವನ್ನು ಹೊಂದಿದೆ. ಬೇಡಿಕೆ ಹೆಚ್ಚಾಗುವಾಗ ಬೆಲೆ ಹೆಚ್ಚಾಗುತ್ತದೆ. ಬೇಡಿಕೆ ಕಡಿಮೆಯಾದರೆ, ಪೂರೈಕೆಯಲ್ಲಿ ಯಾವುದೇ ವ್ಯತ್ಯಾಸ ಇಲ್ಲದಿದ್ದರೆ ಬೆಲೆ ಕುಸಿಯುತ್ತದೆ. ಹೀಗೆ ಮಲ್ಲಿಗೆ ಬೆಲೆಯು ಪೂರೈಕೆಯೊಡನೆ ವಿಲೋಮ ಸಂಬಂಧವನ್ನು ಹೊಂದಿದೆ. ಮಲ್ಲಿಗೆಯು ಒಂದು ಕೃಷಿ ಉತ್ಪನ್ನವಾಗಿದ್ದು ನೈಸರ್ಗಿಕ ಅಂಶಗಳು ಅದರ ಮೇಲೆ ಪ್ರಭಾವ ಬೀರುವುದರಿಂದ ಬೇಡಿಕೆ ಹೆಚ್ಚಾದ ತಕ್ಷಣ ಪೂರೈಕೆಯನ್ನು ಹೆಚ್ಚಿಸಲು ಮಾಡಲು ಸಾಧ್ಯವಿಲ್ಲ. ಹಾಗೇಯೆ ಬೇಡಿಕೆ ಕಡಿಮೆಯಾದಾಗ

ಪೂರೈಕೆಯನ್ನು ಕಡಿಮೆ ಹೆಚ್ಚಿಸಲು ಸಾಧ್ಯವಾಗುವುದಿಲ್ಲ. ಹಾಗಾಗಿ ಮಲ್ಲಿಗೆಯ ಬೆಲೆಯಲ್ಲಿ ಸ್ಥಿತ್ಯಂತರಗಳು ಸಂಭವಿಸುತ್ತಲೇ ಇರುತ್ತವೆ. ಇದರಿಂದ ಅತ್ಯಂತ ಹೆಚ್ಚು ತೊಂದರೆಗೊಳಗಾಗುವುದು ಮಲ್ಲಿಗೆ ಬೆಳೆಗಾರರು.

- ಮಲ್ಲಿಗೆ ಬೆಳೆಗಾರರನ್ನು ಕಾಡುವ ಇತರ ಸಮಸ್ಯೆಗಳಲ್ಲಿ ಕೂಡುವಳಿಗಳ ಬೆಲೆಯೇರಿಕೆ ಮತ್ತು ಶೀತಲೀಕರಣ ವ್ಯವಸ್ಥೆಯ ಅಲಭ್ಯತೆ ಬಹಳ ಮುಖ್ಯವಾದುದು. ಕೂಡುವಳಿಗಳ ಬೆಲೆಯೇರಿಕೆಯಿಂದ ಮಲ್ಲಿಗೆ ಬೆಲೆ ಹೆಚ್ಚಾಗುತ್ತದೆ ಮತ್ತು ಅದು ಬೇಡಿಕೆಯ ಮೇಲೆ ವ್ಯತಿರಿಕ್ತವಾದ ಪರಿಣಾಮವನ್ನು ಉಂಟುಮಾಡುತ್ತದೆ. ಶೀತಲೀಕರಣ ವ್ಯವಸ್ಥೆಯ ಕೊರತೆಯಿಂದಾಗಿ ಮಲ್ಲಿಗೆಯ ಬಾಳಿಕೆ ಕುಂಠಿತವಾಗಿದೆ. ಇದು ಮಲ್ಲಿಗೆಯನ್ನು ಬಹಳ ಬೇಗನೆ ಮಾರಾಟ ಮಾಡಬೇಕಾದ ತುರ್ತನ್ನು ನಿರ್ಮಿಸಿದೆ. ಇದರಿಂದಾಗಿ ಮಲ್ಲಿಗೆ ಬೆಳೆಗಾರರು ಅನೇಕ ಸಂದರ್ಭಗಳಲ್ಲಿ ಲಾಭದಾಯಕವಲ್ಲದ ಸನ್ನಿವೇಷಗಳಲ್ಲಿ ಹೂ ಮಾರಾಟ ಮಾಡಬೇಕಾಗಿ ಬರುತ್ತದೆ.

- ಭಾರತದ ಬಹುತೇಕ ರೈತರಂತೆ ಮಲ್ಲಿಗೆ ಬೆಳೆಗಾರರು ಹೊಸ ಸಾಹಸಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುವುದಿಲ್ಲ. ಉದ್ಯಮ ಸಾಹಸ ಮತ್ತು ಆವಿಷ್ಕಾರ ಬಹುತೇಕರಲ್ಲಿ ಕಂಡುಬಾರದ ಗುಣಗಳು. ಇವೆರಡೂ ಜಿಲ್ಲೆಗಳ ಮಲ್ಲಿಗೆ ಬೆಳೆಗಾರರು ಆಧುನಿಕ ಪುಷ್ಪೋದ್ಯಮದ ಬಗ್ಗೆ ಒಲವು ತೋರಿಸುತ್ತಿಲ್ಲ. ಬಹುತೇಕರಿಗೆ ಅದರ ಅರಿವೇ ಇಲ್ಲ. ಅರಿವು ಇರುವವರಲ್ಲಿ ಹೆಚ್ಚಿನವರು ಬಂಡವಾಳ ಮತ್ತು ಧೈರ್ಯದ ಕೊರತೆಯಿಂದ ಆಧುನಿಕ ಪುಷ್ಪೋದ್ಯಮವನ್ನು ಕೈಗೊಳ್ಳಲು ಮುಂದಾಗುತ್ತಿಲ್ಲ. ಇದರಿಂದಾಗಿ ಅವರು ಆದಾಯವನ್ನು ಹೆಚ್ಚಿಸಿ ಜೀವನ ಮಟ್ಟವನ್ನು ಎತ್ತರಕ್ಕೇರಿಸುವ ಅವಕಾಶವನ್ನು ಕಳೆದುಕೊಂಡಿದ್ದಾರೆ.

## ೭.೨ ಬೆಳೆಗಾರರ ಸಮಸ್ಯಾ ಪರಿಹಾರಕ್ಕೆ ಸಲಹೆಗಳು.

ಮಲ್ಲಿಗೆ ಬೆಳೆಗಾರರಲ್ಲಿ ಬಹುತೇಕರು ಆರರಿಂದ ಪದವಿಪೂರ್ವ ವರೆಗಿನ ಶಿಕ್ಷಣ ಪಡೆದವರು. ಅವರಿಗೆ ವೈಜ್ಞಾನಿಕವಾಗಿ ಕೃಷಿ ಮಾಡಲು ಸಾಧ್ಯವಾಗದೇ ಇರುವ ಕಾರಣದಿಂದ ಅವರ ಪ್ರತಿಫಲ ನಿರೀಕ್ಷಿತ ಮಟ್ಟದಲ್ಲಿ ಇಲ್ಲ. ಮಲ್ಲಿಗೆ ಗಿಡಗಳ ಸುತ್ತಮುತ್ತ ಬೇರೆ ಗಿಡಮರಗಳಿರಕೂಡದು. ಬಿಸಿಲು ಬಹಳ ಚೆನ್ನಾಗಿ ಬೀಳುವಂತಿರಬೇಕು. ಗಿಡ ಸವರುವಾಗ ತುಂಬಾ ಎಚ್ಚರ ವಹಿಸಬೇಕು. ಅಗತ್ಯಕ್ಕಿಂತ ಹೆಚ್ಚು ನೀರನ್ನಾಗಲಿ, ಗೊಬ್ಬರವನ್ನಾಗಲಿ ಕೊಡಕೂಡದು. ಗಿಡಗಳ ನಡುವಿನ ಅಂತರ ನಿರ್ದಿಷ್ಟ ಪ್ರಮಾಣದಲ್ಲಿರಬೇಕು. ಇವುಗಳಿಗೆ

ಸಂಬಂಧಿಸಿದಂತೆ ವೈಜ್ಞಾನಿಕ ಶಿಕ್ಷಣ ನೀಡಿದರೆ ಬೆಳೆಗಾರರ ಮಲ್ಲಿಗೆ ಇಳುವರಿ ಅಧಿಕವಾಗಿ ಲಾಭದ ಪ್ರಮಾಣ ಹೆಚ್ಚಾಗುತ್ತದೆ.

ಮಲ್ಲಿಗೆ ಕೃಷಿಯಲ್ಲಿ ತೊಡಗಿಕೊಂಡಿರುವ ಮಹಿಳೆಯರು ಅಧಿಕ ಸಂಖ್ಯೆಯಲ್ಲಿರುವುದನ್ನು ಈ ಅಧ್ಯಯನವು ಗುರುತಿಸಿದೆ. ಇದನ್ನು ಗಮನಿಸಿದರೆ ಮಲ್ಲಿಗೆ ಬೆಳೆ ಮತ್ತು ಮಾರಾಟವನ್ನು ಸ್ತ್ರೀ ಶಕ್ತಿ ಗುಂಪುಗಳು ಕೈಗೆತ್ತಿಕೊಳ್ಳುವುದು ಸೂಕ್ತವೆಂದು ಕಾಣುತ್ತದೆ. ಇದು ಮಹಿಳಾ ಸಬಲೀಕರಣಕ್ಕೆ (Women Empowerment) ಕಾರಣವಾಗಲಿದೆ. ಪರಿಣಾಮವಾಗಿ ಮಹಿಳಾ ಸಬಲೀಕರಣ ಸೂಚಿಯಲ್ಲಿ(Women Empowerment Index) ಭಾರತದ ಸ್ಥಾನ ಮೇಲಕ್ಕೇರುವ ಸಾಧ್ಯತೆಯಿದೆ.

ಮಲ್ಲಿಗೆಯು ಒಂದು ಲಾಭದಾಯಕ ಉದ್ಯಮವಾದರೂ ಮಲ್ಲಿಗೆ ಬೆಳೆಗಾರರಲ್ಲಿ ಬಹುತೇಕರು ತಮ್ಮ ಸಮಸ್ತ ಭೂಮಿಯಲ್ಲಿ ಅದನ್ನು ಬೆಳೆಯುತ್ತಿಲ್ಲ. ವಾಸ್ತವವಾಗಿ ಒಟ್ಟು ಕೃಷಿ ಭೂಮಿಯಲ್ಲಿ ಬಹಳ ಕಡಿಮೆ ಪ್ರದೇಶದಲ್ಲಿ ಮಲ್ಲಿಗೆಯನ್ನ ಬೆಳೆಯಲಾಗುತ್ತದೆ. ಮಲ್ಲಿಗೆ ಬೆಳೆಯ ವಿಸ್ತರಣೆಗೆ ಸಾಕಷ್ಟು ಅವಕಾಶಗಳಿವೆ. ಕೃಷಿ ಯೋಗ್ಯವಾದ ಆದರೆ ಕೃಷಿ ಮಾಡದ ಸರಕಾರಿ ಬಂಜರು ಭೂಮಿಯ ಮಣ್ಣನ್ನು ಪರೀಕ್ಷೆಗೆ ಒಳಪಡಿಸಿ ಮಲ್ಲಿಗೆ ಬೆಳೆಗೆ ಸೂಕ್ತವೆಂದು ಕಂಡರೆ ಅದನ್ನು ಸಮೀಪದ ಭೂ ರಹಿತರಿಗೆ ಹಂಚಿ ಮಲ್ಲಿಗೆ ಬೆಳೆಯುವಂತೆ ಪ್ರೋತ್ಸಾಹಿಸಲು ಸಾಧ್ಯವಿದೆ.

ಮಲ್ಲಿಗೆ ಬೆಳೆಗಾರರು ನೀರಾವರಿ ಮತ್ತು ಬೆಳೆ ಕೀಟಗಳ ಸಮಸ್ಯೆಯಲ್ಲಿ ಸಿಲುಕಿದ್ದಾರೆ. ವೈಜ್ಞಾನಿಕವಾದ ಹನಿ ನೀರಾವರಿ (Drip Irrigation) ವ್ಯವಸ್ಥೆಯಿಂದ ನೀರಾವರಿ ಸಮಸ್ಯೆಯನ್ನು ಪರಿಹರಿಸಲು ಸಾಧ್ಯವಿದೆ. ಕೀಟಗಳನ್ನು ಕೀಟನಾಶಕಗಳ ಬಳಕೆಯಿಂದ ನಾಶಪಡಿಸುವ ಬದಲು ಪರಾನ್ನ ಜೀವಿಗಳ ಶೋಧನೆಯಿಂದ ಈ ಸಮಸ್ಯೆಗೆ ಪರಿಹಾರ ಕಂಡುಕೊಳ್ಳಬೇಕು. ಇದರಿಂದ ಪರಿಸರ ಮಾಲಿನ್ಯವಾಗುವುದು ತಪ್ಪುತ್ತದೆ ಮತ್ತು ಜೀವ ವೈವಿಧ್ಯತೆಗೆ ಧಕ್ಕೆ ಬರುವುದಿಲ್ಲ.

ಬಹುತೇಕ ಮಲ್ಲಿಗೆ ಬೆಳೆಗಾರರು ಹಟ್ಟಿ ಗೊಬ್ಬರ ಮತ್ತು ಹಟ್ಟಿ ಗಂಜಳವನ್ನು ಬಳಸುತ್ತಿಲ್ಲ. ಇದಕ್ಕೆ ಅವರು ಜಾನುವಾರುಗಳನ್ನು ಸಾಕದಿರುವುದು ಕಾರಣ. ಮಾರುಕಟ್ಟೆಯಲ್ಲಿ ಲಭ್ಯವಿರುವ ಇತರ ಗೊಬ್ಬರಗಳ ಬೆಲೆ ಅಧಿಕ. ಇದರ ಪರಿಣಾಮವಾಗಿ ಉತ್ಪಾದನಾ ವೆಚ್ಚ ಹೆಚ್ಚಾಗಿ ಬೆಳೆಗಾರರು ತೊಂದರೆಗೆ ಒಳಗಾಗಿದ್ದಾರೆ. ಇಂತಹ ಸಂದರ್ಭದಲ್ಲಿ ವಾಣಿಜ್ಯ ಬ್ಯಾಂಕುಗಳು ಮತ್ತು ಸಹಕಾರಿ ಬ್ಯಾಂಕುಗಳು ರೈತರ ಸಹಾಯಕ್ಕೆ ಬರಬೇಕಾಗಿದೆ. ಬಹಳ ಕಡಿಮೆ ಬಡ್ಡಿ ದರದಲ್ಲಿ ಹಟ್ಟಿ ನಿರ್ಮಿಸಲು ಮತ್ತು ದನಗಳನ್ನು ಸಾಕಲು ಬ್ಯಾಂಕುಗಳು ಸಾಲ ನೀಡಿದರೆ ಹೈನುಗಾರಿಕೆಯೊಡನೆ ಪುಷ್ಪೋದ್ಯಮವನ್ನು ಜಂಟಿಯಾಗಿ ಕೈಗೊಳ್ಳಲು ಸಾಧ್ಯವಾಗುತ್ತದೆ.

ಮಲ್ಲಿಗೆ ಮಾರುಕಟ್ಟೆಯು ಸುಸಜ್ಜಿತವಾಗಿಲ್ಲ. ಅದು ಗ್ರಾಮೀಣ ಬೆಳೆಗಾರರಿಂದ ಬಹಳ ದೂರದಲ್ಲಿದೆ. ಶೀತಲೀಕರಣದ ವ್ಯವಸ್ಥೆಯಿಲ್ಲದ ಬೆಳೆಗಾರರು ಸಾಗಾಟ ಸಂದರ್ಭದಲ್ಲಿ ನಷ್ಟ ಅನುಭವಿಸಬೇಕಾಗುತ್ತದೆ. ಇದನ್ನು ಸರಿಪಡಿಸಲು ಮಲ್ಲಿಗೆ ಬೆಳೆಗಾರರಿಗೆ ಕಡಿಮೆ ದರದಲ್ಲಿ ಸಾಲ ನೀಡಿ ಶೀತಲ ಪೆಟ್ಟಿಗೆಗಳನ್ನು ಕೊಳ್ಳಲು ಪ್ರೋತ್ಸಾಹ ಒದಗಿಸಬೇಕು. ಅದಕ್ಕಾಗಿ ಸರಕಾರ ಸಹಾಯಧನವನ್ನು ನೀಡಬೇಕಿದೆ.

ಮಲ್ಲಿಗೆ ಬೆಳೆಗಾರರು ಗ್ರಾಹಕರಿಗೆ ನೇರವಾಗಿ ಮಲ್ಲಿಗೆ ಮಾರಾಟ ಮಾಡುವ ಅಥವಾ ತಾವೇ ಸ್ವತಃ ಮಾರಾಟಗಾರರಾಗುವ ಪ್ರಕರಣಗಳು ಬಹಳ ಕಡಿಮೆ. ಬೆಳೆಗಾರರ ಲಾಭಾಂಶವನ್ನು ಹೆಚ್ಚಿಸಬೇಕಾದರೆ ಅವರಿಗೆ ಗ್ರಾಹಕರೊಡನೆ ನೇರ ಸಂಪರ್ಕವಿರಬೇಕು. ಅದು ಬಹುತೇಕವಾಗಿ ಅಸಾಧ್ಯವಾಗಿರುವುದರಿಂದ ಮಲ್ಲಿಗೆ ಬೆಳೆಗಾರರು ಸಹಕಾರಿ ಸಂಘವೊಂದನ್ನು ಸ್ಥಾಪಿಸಬೇಕು. ಅದರ ಶಾಖೆಗಳು ಎಲ್ಲಾ ತಾಲೂಕು ಕೇಂದ್ರಗಳಲ್ಲಿ ಇರಬೇಕು. ಬೆಳೆಗಾರರೇ ಅದರ ಸದಸ್ಯರಾಗಿರುವುದರಿಂದ ನಿರ್ವಹಣಾ ವೆಚ್ಚ ಕಳೆದು ಉಳಿದ ಲಾಭ ಸದಸ್ಯರಿಗೆ ಲಭ್ಯವಾಗುತ್ತದೆ. ಬೆಳೆಗಾರರಿಗೆ ಸಂಬಂಧಿಸಿದ ಇತರ ಸಮಸ್ಯೆಗಳನ್ನು ಪರಿಹರಿಸಲು ಎರಡೂ ಜಿಲ್ಲೆಗಳ ಮಲ್ಲಿಗೆ ಬೆಳೆಗಾರರು ಮಲ್ಲಿಗೆ ಬೆಳೆಗಾರರ ಒಕ್ಕೂಟವೊಂದನ್ನು ರಚಿಸಿಕೊಳ್ಳಬೇಕಿದೆ. ಇದು ಮಲ್ಲಿಗೆ ಬೆಳೆಗಾರರ ಪರವಾಗಿ ಸರಕಾರದೊಡನೆ ಸಂಪರ್ಕವಿರಿಸಿಕೊಂಡು ಇತರ ಕೃಷಿಕರಿಗೆ ಸಿಗುವ ಸವಲತ್ತುಗಳು ಮಲ್ಲಿಗೆ ಬೆಳೆಗಾರರಿಗೂ ಸಿಗುವಂತೆ ಮಾಡಬೇಕು. ಒಕ್ಕೂಟ ರಚನೆಯಿಂದ ಮಲ್ಲಿಗೆ ಬೆಳೆಗಾರರ ಚೌಕಾಶಿ ಸಾಮರ್ಥ್ಯ ವೃದ್ಧಿಯಾಗಿ ಅವರು ಶೋಷಣೆಗೆ ಒಳಗಾಗುವುದು ತಪ್ಪುತ್ತದೆ. ಅಲ್ಲದೆ ಮಲ್ಲಿಗೆ ಬೆಳೆಗಾರರನ್ನು ಆಧುನಿಕ ಪುಷ್ಪೋದ್ಯಮದತ್ತ ಆಕರ್ಷಿಸಲು ಒಕ್ಕೂಟಕ್ಕೆ ಸಾಧ್ಯವಾಗುತ್ತದೆ.

ಅಧ್ಯಯನ ಕಾಲದಲ್ಲಿ ದೊರೆತ ಒಂದು ಉದಾಹರಣೆಯನ್ನು ಇಲ್ಲಿ ಉಲ್ಲೇಖಿಸುವುದು ಸೂಕ್ತವೆನಿಸುವುದು. ಮಂಗಳೂರು ತಾಲೂಕಿನ ಮುಡಿಪು ಚರ್ಚಿನ ಫಾದರ್ ಮುಕ್ತಿಧರ ಜೋಸೆಫ್‌ರವರು ಮಲ್ಲಿಗೆ ಬೆಳೆಯಲ್ಲಿ ಒಂದು ಅನುಕರಣೀಯ ಮಾದರಿಯನ್ನು ಹಾಕಿ ಕೊಟ್ಟಿದ್ದಾರೆ. ಈ ಚರ್ಚಿನಲ್ಲಿ ಅವರ ಉಸ್ತುವಾರಿಯಲ್ಲಿ ಸುಮಾರು ೧ ಎಕರೆಯಷ್ಟು ಪ್ರದೇಶದಲ್ಲಿ ಮಲ್ಲಿಗೆ ಕೃಷಿ ಮಾಡುತ್ತಿದೆ. ಮಲ್ಲಿಗೆ ಗಿಡಗಳನ್ನು ನೋಡಿಕೊಳ್ಳಲು ದಿನಕೂಲಿ ನೌಕರರಿದ್ದಾರೆ . ಅಸುಪಾಸಿನ ಭೂರಹಿತ ಮಹಿಳೆಯರು ಬೆಳಗ್ಗೆ ಆರು ಗಂಟೆಗೆ ಚರ್ಚಿಗೆ ಬಂದು ಮಲ್ಲಿಗೆ ಹೂವುಗಳನ್ನು ಮಾಲೆ ಮಾಡಿ ಅಟ್ಟಿ ಮಾಡಿಡುತ್ತಾರೆ. ಈ ಮಹಿಳೆಯರು ಹತ್ತು ಗಂಟೆಗೆ ಚರ್ಚಿನಿಂದ ವಾಪಾಸಾಗುತ್ತಾರೆ. ಸರಾಸರಿ ನಾಲ್ಕು ಗಂಟೆಗಳ ದುಡಿಮೆಗೆ ಅವರು ದಿನವೊಂದಕ್ಕೆ ರೂ. ೫೦ರಿಂದ ೧೦೦ರವರೆಗೆ ಗಳಿಸುತ್ತಿದ್ದಾರೆ. ಮಾರಾಟಕ್ಕೆ ಸಿದ್ಧಗೊಂಡ ಮಲ್ಲಿಗೆ ಹೂಗಳ ಮಲ್ಲಿಗೆ ಹೂವು ಅಟ್ಟಿಗಳನ್ನು ಬಸ್ಸಿನ ಮೂಲಕ

ಸ್ಥಳೀಯ ಮಾರುಕಟ್ಟೆಗೆ ಕಳುಹಿಸಿಕೊಡುತ್ತಾರೆ. ಇವುಗಳ ಲೆಕ್ಕ ಪತ್ರಗಳನ್ನು ನೋಡಲು ಒಬ್ಬಳು ಕಾರಕೂನಳಿದ್ದಾಳೆ. ಇಷ್ಟೆಲ್ಲಾ ಖರ್ಚುಗಳನ್ನು ನಿಭಾಯಿಸಿದ ಬಳಿಕವೂ ಚರ್ಚ್‌ಗೆ ಸುಮಾರು ೯೦,೦೦೦ ರೂಪಾಯಿ ಉಳಿತಾಯವಾಗಿದ್ದುದು ಅಧ್ಯಯನ ಕಾಲದಲ್ಲಿ ತಿಳಿದು ಬಂದಿರುತ್ತದೆ. ಇಂತಹ ಹಲವಾರು ಚರ್ಚುಗಳು ಪುಷ್ಪ ಬೆಳೆಯನ್ನು ಪ್ರಾಯೋಗಿಕವಾಗಿ ತಿಳಿಸುತ್ತರುವ ಹಲವಾರು ಚರ್ಚ್‌ಗಳು ದ.ಕ. ಮತ್ತು ಉಡುಪಿ ಜಿಲ್ಲೆಗಳಲ್ಲಿವೆ. ಈ ದೃಷ್ಟಾಂತವನ್ನು ಮಲ್ಲಿಗೆ ಬೆಳೆಗಾರರ ಸಹಕಾರಿ ಸಂಘ ರಚಿಸಲು ತಾರ್ಕಿಕ ವಿಚಾರವಾಗಿ ಬಳಸಬಹುದಾಗಿದೆ.

## ೭.೩. ಮಾರಾಟಗಾರರ ಅಧ್ಯಯನದ ಫಲಿತಗಳು.

- ಮಲ್ಲಿಗೆ ಮಾರಾಟಗಾರರಲ್ಲಿ ರಖಂ ವ್ಯಾಪಾರಿಗಳು ಹಾಗೂ ಚಿಲ್ಲರೆ ವ್ಯಾಪಾರಿಗಳು ಇರುತ್ತಾರೆ. ಜಿಲ್ಲಾ ಕೇಂದ್ರಗಳಲ್ಲಿ ಮಾತ್ರ ರಖಂ ವ್ಯಾಪಾರಿಗಳು ಕಾಣಿಸುತ್ತಾರೆ. ತಾಲೂಕು ಕೇಂದ್ರಗಳಲ್ಲಿ ರಖಂ ವ್ಯಾಪಾರಿಗಳಿಲ್ಲ. ಇದರಿಂದಾಗಿ ತಾಲೂಕು ಕೇಂದ್ರಗಳ ಅಸುಪಾಸಿನ ಮಲ್ಲಿಗೆ ಬೆಳೆಗಾರರು ಚಿಲ್ಲರೆ ವ್ಯಾಪಾರಿಗಳಿಗೆ ಅವರು ನಿಗದಿಪಡಿಸಿದ ಬೆಲೆಗೆ ತಮ್ಮ ಉತ್ಪನ್ನವನ್ನು ಮಾರಾಟ ಮಾಡಬೇಕಾಗುತ್ತದೆ. ಬಹುತೇಕ ಸಂದರ್ಭಗಳಲ್ಲಿ ಚಿಲ್ಲರೆ ವ್ಯಾಪಾರಿಗಳು ಬೆಳೆಗಾರರ ಉತ್ಪನ್ನಗಳಿಗೆ ಅವರ ಉತ್ಪನ್ನದ ಪ್ರತಿಫಲವನ್ನು ತಕ್ಷಣ ನೀಡುವುದಿಲ್ಲ. ಮಲ್ಲಿಗೆ ಮಾರಾಟಗಾರರಲ್ಲಿ ರಖಂ ವ್ಯಾಪಾರಿಗಳು ಹಾಗೂ ಚಿಲ್ಲರೆ ವ್ಯಾಪಾರಿಗಳು ಇರುತ್ತಾರೆ. ಜಿಲ್ಲಾ ಕೇಂದ್ರಗಳಲ್ಲಿ ಮಾತ್ರ ರಖಂ ವ್ಯಾಪಾರಿಗಳು ಕಾಣಿಸುತ್ತಾರೆ. ತಾಲೂಕು ಕೇಂದ್ರಗಳಲ್ಲಿ ರಖಂ ವ್ಯಾಪಾರಿಗಳಿಲ್ಲ. ಇದರಿಂದಾಗಿ ತಾಲೂಕು ಕೇಂದ್ರಗಳ ಆಸುಪಾಸಿನ ಮಲ್ಲಿಗೆ ಬೆಳೆಗಾರರು ಚಿಲ್ಲರೆ ವ್ಯಾಪಾರಿಗಳಿಗೆ ಅವರು ನಿಗದಿಪಡಿಸಿದ ಬೆಲೆಗೆ ತಮ್ಮ ಉತ್ಪನ್ನವನ್ನು ಮಾರಾಟ ಮಾಡಬೇಕಾಗುತ್ತದೆ. ಬಹುತೇಕ ಸಂದರ್ಭಗಳಲ್ಲಿ ಚಿಲ್ಲರೆ ವ್ಯಾಪಾರಿಗಳು ಬೆಳೆಗಾರರ ಉತ್ಪನ್ನಗಳಿಗೆ ಅವರ ಉತ್ಪನ್ನದ ಪ್ರತಿಫಲವನ್ನು ತಕ್ಷಣ ನೀಡುವುದಿಲ್ಲ. ಮಲ್ಲಿಗೆ ಮಾರಾಟ ವ್ಯವಸ್ಥೆಯು ವ್ಯಾಪಾರಿಗಳ ಹಿತಾಸಕ್ತಿಗೆ ಪೂರಕವಾಗಿ ರೂಪುಗೊಂಡಿದೆ. ಅದು ಬೆಳೆಗಾರರ ಹಿತಾಸಕ್ತಿಗೆ ಮಾರಕವಾಗಿದೆ. ಸಾಂಪ್ರದಾಯಿಕ ಅರ್ಥಶಾಸ್ತ್ರಜ್ಞರಾದ ರಿಕಾರ್ಡೋ ಮತ್ತು ಮಾಲ್ತಸ್ ಗುರುತಿಸಿದ ಹಿತಾಸಕ್ತಿಗಳ ಸಂಘರ್ಷ (Conflict of Interests) ಮಲ್ಲಿಗೆ ಮಾರುಕಟ್ಟೆಯಲ್ಲಿ ಕಂಡುಬರುತ್ತದೆ.
- ಸ್ಥಳೀಯ ಪೂರೈಕೆ ಕಡಿಮೆಯಾದಾಗ ಚಿಲ್ಲರೆ ವ್ಯಾಪಾರಿಗಳು ಜಿಲ್ಲಾ ಕೇಂದ್ರದ ರಖಂ ವ್ಯಾಪಾರಿಗಳಿಂದ ಮಲ್ಲಿಗೆ ಅಟ್ಟಿಗಳನ್ನು ತರಿಸಿಕೊಳ್ಳುತ್ತಾರೆ. ನಗದು ಪಾವತಿ ಮಾಡುವ ಚಿಲ್ಲರೆ ವ್ಯಾಪಾರಿಗಳಿಗೆ ವಿನಾಯಿತಿ ದರದಲ್ಲಿ ರಖಂ ವ್ಯಾಪಾರಿಗಳು ಮಲ್ಲಿಗೆ ಅಟ್ಟಿಗಳನ್ನು

ಪೂರೈಕೆ ಮಾಡುತ್ತಾರೆ. ಸಾಲದ ವ್ಯವಹಾರ ನಡೆಸುವ ಚಿಲ್ಲರೆ ವ್ಯಾಪಾರಿಗಳು ಹೆಚ್ಚು ಬೆಲೆ ನೀಡಬೇಕಾಗಿ ಬರುತ್ತದೆ. ರಖಂ ವ್ಯಾಪಾರಿಗಳು ಕಡಿಮೆ ಬೆಲೆಯಲ್ಲಿ ಚಿಲ್ಲರೆ ವ್ಯಾಪಾರಿಗಳಿಗೆ ಹೂ ಪೂರೈಕೆ ಮಾಡಿದರೂ ಅದರ ಪ್ರಯೋಜನ ಗ್ರಾಹಕರಿಗೆ ಲಭ್ಯವಾಗುವುದಿಲ್ಲ. ಇದಕ್ಕೆ ಚಿಲ್ಲರೆ ವ್ಯಾಪಾರಿಗಳು ಸಾದಾರಣವಾಗಿ ಒಂದು ನಿಗದಿತ ದರದಲ್ಲಿ ಹೂ ಮಾರಾಟ ಮಾಡುವುದು ಕಾರಣವಾಗಿರುತ್ತದೆ.

- ಮಲ್ಲಿಗೆ ಮಾರುಕಟ್ಟೆಯು ಮಾರಾಟಗಾರರ ಹಿತಾಸಕ್ತಿಯನ್ನು ಮಾತ್ರ ಕಾಪಾಡುವಂತೆ ಕಂಡುಬರುತ್ತದೆ. ಅದು ಮಲ್ಲಿಗೆ ಬೆಳೆಗಾರರ ಮತ್ತು ಗ್ರಾಹಕರ ಹಿತಾಸಕ್ತಿಗಳಿಗೆ ಯಾವುದೇ ಮಹತ್ವವನ್ನು ನೀಡಿಲ್ಲವೆನ್ನುವುದು ಅಧ್ಯಯನ ಕಾಲದಲ್ಲಿ ಗಮನಕ್ಕೆ ಬಂದಿರುತ್ತದೆ.

- ಇವೆರಡು ಜಿಲ್ಲೆಗಳಲ್ಲಿ ಸ್ಥಳೀಯ ಮಲ್ಲಿಗೆಗಿಂತ ಕಾಕಡ ಮಲ್ಲಿಗೆಗೆ ಉದ್ಯಮಿಗಳಿಂದ ಹೆಚ್ಚು ಬೇಡಿಕೆಯಿದೆ. ಕಾಕಡದ ಬಾಳಿಕೆ ಮತ್ತು ನಿರ್ವಹಣೆಯ ಅನುಕೂಲತೆಗಳು ಮತ್ತು ಬೆಲೆ ಕಾಕಡದ ಹೆಚ್ಚು ಬೇಡಿಕೆಗೆ ಕಾರಣವಾಗಿದೆ. ಕಾಕಡದ ಜನಪ್ರಿಯತೆ ಮಲ್ಲಿಗೆ ಬೆಳೆಗಾರರಿಗೆ ನಿರುತ್ತೇಜಕ ಅಂಶವಾಗಿ ಕಾರ್ಯ ನಿರ್ವಹಿಸುತ್ತದೆ. ವ್ಯಾಪಾರಿಗಳು ಸ್ಥಳೀಯ ಮಲ್ಲಿಗೆಗೆ ಬೇಡಿಕೆಯಿಲ್ಲವೆಂದು ಬೆಳೆಗಾರರನ್ನು ನಂಬಿಸಿ ಅವರಿಗೆ ಕಡಿಮೆ ಬೆಲೆ ನೀಡಿ ಶೋಷಣೆ ಮಾಡುತ್ತಾರೆ.
- ಮಲ್ಲಿಗೆಯ ಪೂರೈಕೆಯು ಋತು ಸಂಬಂಧಿಯಾಗಿದೆ. ಮಳೆಗಾಲ ಮತ್ತು ಚಳಿಗಾಲದಲ್ಲಿ ಹೂ ಕಡಿಮೆ. ಬೇಸಿಗೆಯ ನಾಲ್ಕು ತಿಂಗಳಗಳು ಅಧಿಕ ಹೂವು ಲಭಿಸುತ್ತದೆ. ಮಳೆಗಾಲ ಮತ್ತು ಚಳಿಗಾಲ ಕಡಿಮೆ ಹೂಗಳಾದರು ಅಧಿಕ ಬೆಲೆ ದೊರೆಯುವುದರಿಂದ ಉತ್ತಮ ಆದಾಯ ದೊರಕುತ್ತದೆ. ಬೇಸಗೆಯಲ್ಲಿ ಕಡಿಮೆ ಬೆಲೆಯಾದರೂ ಅಧಿಕ ಉತ್ಪನ್ನ ದೊರಯುವುದರಿಂದ ಆದಾಯಕ್ಕೆ ಹೊಡೆತ ಉಂಟಾಗುವುದಿಲ್ಲ. ಈ ರೀತಿಯ ನೈಸರ್ಗಿಕ ವ್ಯವಸ್ಥೆಯು ಮಲ್ಲಿಗೆ ಬೆಳೆಗಾರರ ಆದಾಯವನ್ನು ಸಮತೋಲನದಲ್ಲಿಡುತ್ತದೆ.
- ವ್ಯಾಪಾರಿಗಳ ಸಾಮಾಜಿಕ ವಿಚಾರಗಳನ್ನು ಗಮನಿಸಿದಾಗ ವ್ಯಾಪಾರಿ ಸಮುದಾಯದಲ್ಲಿ ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳಲ್ಲಿ ಸಾಪೇಕ್ಷವಾಗಿ ಮುಸ್ಲಿಂ ಮತ್ತು ಕ್ರೈಸ್ತ ವ್ಯಾಪಾರಿಗಳು ಅಧಿಕ ಸಂಖ್ಯೆಯಲ್ಲಿದ್ದಾರೆ. ವಿಭಿನ್ನ ಸಮುದಾಯದ ಜನರು ಪರಸ್ಪರ ಅನ್ಯೋನ್ಯತೆಯಿಂದ ಪುಷ್ಪ ವ್ಯವಹಾರಗಳಲ್ಲಿ ತೊಡಗಿದ್ದಾರೆ. ಸಹೋದರತೆಯ ಬಾಂಧವ್ಯದಲ್ಲಿ ಅನೇಕ ಕಡೆ ವಿಭಿನ್ನ ಸಮಾಜದವರು ಒಂದಾಗಿ ಪಾಲುದಾರಿಕೆಯಲ್ಲಿ ಪುಷ್ಪ ವ್ಯವಹಾರ ನಡೆಸುತ್ತಿದ್ದಾರೆ. ಪುಷ್ಪ ಮಾರಾಟ ಮಾಡುವವರಲ್ಲಿ ೨೦-೪೦ ರ ವಯೋಮಾನದವರದೇ ಪ್ರಾಬಲ್ಯ. ಎರಡೂ ಜಿಲ್ಲೆಗಳಲ್ಲಿ ಪಿ.ಯು.ಸಿ ಶಿಕ್ಷಣ ಪಡೆದ

ವ್ಯಾಪಾರಿಗಳ ಸಂಖ್ಯೆ ಅಧಿಕವಾಗಿದೆ. ಅನಕ್ಷರಸ್ಥ ವ್ಯಾಪಾರಿಗಳು ಮತ್ತು ಸ್ನಾತಕೋತ್ತರ ಪದವೀಧರರು ಮಾರಾಟ ಕ್ಷೇತ್ರದಲ್ಲಿ ಕಂಡುಬಂದಿರುವುದಿಲ್ಲ.

- ಮಲ್ಲಿಗೆ ಉದ್ಯಮದಲ್ಲಿ ತೊಡಗಲು ಕಾರಣವೇನೆಂದು ಕೇಳಿದಾಗ ಪುಷ್ಪ ಮಾರಾಟವನ್ನು ಹೆಚ್ಚಿನ ಮಂದಿ ಜೀವನೋಪಾಯವೆಂದು ಹೇಳಿರುತ್ತಾರೆ. ಕೆಲವರಿಗೆ ಇದು ಉಪವೃತ್ತಿಯಾಗಿದೆ. ಕೆಲವರು ಸಣ್ಣ ಉದ್ಯಮದ ಪ್ರಯೋಜನೆಗಳಿಂದ ಆಕರ್ಷಿತರಾಗಿ ಈ ಕ್ಷೇತ್ರದಲ್ಲಿದ್ದಾರೆ. ಕೆಲವು ವ್ಯಾಪಾರಿಗಳು ಕುಟುಂಬ ವೃತ್ತಿಯಾಗಿ ಈ ಕೆಲಸದಲ್ಲಿ ಮುಂದುವರಿಯುತ್ತಿದ್ದಾರೆ. ಕೆಲವರಿಗೆ ಇದು ಮೇಲಿನ ಎಲ್ಲಾ ಅಂಶಗಳಿಂದ ಲಾಬದಾಯಕವೆಂದು ಮನವರಿಕೆಯಾಗಿರುತ್ತದೆ. ತರಕಾರಿ, ಹಣ್ಣು ಮತ್ತಿತರ ಕೃಷಿ ವಸ್ತುಗಳೊಂದಿಗೆ ಹೂವನ್ನು ಮಿಶ್ರ ವ್ಯಾಪಾರವಾಗಿ ಬಳಸುತ್ತಿದ್ದಾರೆ ಮತ್ತು ಇದರಿಂದಾಗಿ ಇಂತಹ ಮಾರಾಟಗಾರರಿಗೆ ಶೀತಲೀಕರಣದ ವೆಚ್ಚ ಪ್ರಯೋಜನವಿದೆ. ಮಾರಾಟಗಾರರ ಅನುಭವದ ಅಂಶಗಳನ್ನು ಗಮನಿಸಿದಾಗ ೫ ವರ್ಷಗಳ ಅನುಭವವಿರುವವರು ಅತ್ಯಧಿಕ ಮಂದಿ. ಎರಡನೆಯ ಸ್ಥಾನದಲ್ಲಿ ೬ ರಿಂದ ೧೦ ವರ್ಷದವರು ಕಾಣಿಸಿಕೊಳ್ಳುತ್ತಾರೆ. ಸುದೀರ್ಘ ಅನುಭವದವರ ಸಂಖ್ಯೆ ಬಹಳ ಕಡಿಮೆ. ಮಾರಾಟಗಾರರು ಸುವ್ಯವಸ್ಥೆಯ ಮಾರಾಟ ಕೇಂದ್ರದಲ್ಲಿ ಮಾರಾಟ ಮಾಡುತ್ತಿರದ ಕಾರಣ ಮತ್ತು ಈ ವೃತ್ತಿಯು ಬಹಳ ಕಷ್ಟ ನಷ್ಟಗಳಿಗೆ ಎಡೆ ಮಾಡಿಕೊಡುವುದರಿಂದ ಅಧಿಕ ಲಾಭ ಇದ್ದರೂ, ಅಪಾಯಗಳೂ ಅಧಿಕಯಿರುವುದರಿಂದ ಇತರ ಉದ್ಯಮಗಳಲ್ಲಿ ಅಥವಾ ವೃತ್ತಿಗಳಲ್ಲಿ ವೃತ್ತಿಪಲ್ಲಟ ಮಾಡುತ್ತಿರುವುದು ಅಧ್ಯಯನದಿಂದ ತಿಳಿದುಬರುತ್ತದೆ.

## ೭.೪ ಮಲ್ಲಿಗೆ ಮಾರಾಟಗಾರರ ಸಮಸ್ಯಾ ಪರಿಹಾರಕ್ಕೆ ಸಲಹೆಗಳು.

ಮಲ್ಲಿಗೆ ಮಾರಾಟಗಾರರ ಸಮಸ್ಯೆಗಳು ಪ್ರಧಾನವಾದವುಗಳು ಶೀತಲ ಗೃಹದ ಕೊರತೆ, ಮಾರಾಟ ಕೇಂದ್ರಗಳಲ್ಲಿ ಸವಲತ್ತುಗಳ ಕೊರತೆ, ಬೀದಿ ಬದಿಯ ಮಾರಾಟ ನಿಷೇದ, ಸಾಮಯಿಕ ಹಣಕಾಸಿನ ಅಲಭ್ಯತೆ, ವಿಶ್ರಾಂತಿಯ ಕೊರತೆ ಮತ್ತು ಅನಾರೋಗ್ಯ ಪ್ರಮುಖವಾದವುಗಳು. ಈ ಸಮಸ್ಯೆಗಳಿಗೆ ಕೆಳಗಿನ ಸಲಹೆಗಳನ್ನು ಸೂಚಿಸಲಾಗಿದೆ.

ಮಾರಾಟಗಾರರಿಗೆ ಸುವ್ಯವಸ್ಥಿತ ಮಾರಾಟ ಕೇಂದ್ರದ ನಿರ್ಮಾಣವನ್ನು ಸ್ಥಳೀಯ ಆಡಳಿತವು ಒದಗಿಸಿಕೊಡಬೇಕು. ಅದಕ್ಕೆ ನ್ಯಾಯಬದ್ಧವಾದ ಬಾಡಿಗೆಯನ್ನು ಪಡೆಯಬೇಕು. ಅಂತಹ ಮಾರಾಟ ಕೇಂದ್ರಗಳಲ್ಲಿ ಪುಷ್ಪ ಶೀತಲೀಕರಣ ಸೌಲಭ್ಯವನ್ನು ಒದಗಿಸಬೇಕು. ಅದರ ವೆಚ್ಚವನ್ನು ಮಾರಾಟಗಾರರಿಂದಲೇ ಭರಿಸಬೇಕು.

ಬೀದಿ ಬದಿಯ ವ್ಯಾಪಾರ ಮಾರಾಟಗಾರರ ಆರೋಗ್ಯದ ಮೇಲೆ ಪ್ರತಿಕೂಲಕರ ಪರಿಣಾಮವನ್ನು ಬೀರುತ್ತದೆ. ಅದಕ್ಕಾಗಿ ಪ್ರತಿ ತಾಲೂಕು ಕೇಂದ್ರಗಳಲ್ಲಿ ಮತ್ತು ಮಾರಾಟ

ಕೇಂದ್ರಗಳಲ್ಲಿ ಸುಸಜ್ಜಿತ ಪುಷ್ಪ ಮಾರುಕಟ್ಟೆಗಳ ನಿರ್ಮಾಣವಾಗಬೇಕು. ಇದರ ನಿರ್ವಹಣಾ ವೆಚ್ಚವನ್ನು ಮಾರಾಟಗಾರರು ಭರಿಸುವಂತಾಗಬೇಕು.

ಪುಷ್ಪ ಮಾರಾಟಗಾರರಿಗೆ ಸಾಮಯಿಕ ಹಣಕಾಸನ್ನೊದಗಿಸುವ ವ್ಯವಸ್ಥೆ ಈಗ ಇಲ್ಲ. ಮಾರಾಟಗಾರರೆಲ್ಲರೂ ಕೃಷಿಕರಲ್ಲದಿರುವುದು ಇದಕ್ಕೆ ಕಾರಣ. ಕೃಷಿಕರೇ ಮಾರಾಟಗಾರರಾದರೆ ಬ್ಯಾಂಕುಗಳು ಕೃಷಿ ಸಾಲವನ್ನು ಕಡಿಮೆ ಬಡ್ಡಿಯಲ್ಲಿ ನೀಡುತ್ತವೆ. ಕೃಷಿಕರು ಮಾರಾಟಗಾರರಲ್ಲದಿರುವ ಪ್ರಕರಣಗಳಲ್ಲಿ ಕಡಿಮೆ ಬಡ್ಡಿ ದರದಲ್ಲಿ ಬ್ಯಾಂಕುಗಳು ಮಾರಾಟಗಾರರಿಗೆ ಸಾಲ ಒದಗಿಸಲು ಮುಂದಾಗಬೇಕು. ಇದಕ್ಕೆ ಸಂಬಂಧಿಸಿದ ವಿಧಿವಿಧಾನಗಳನ್ನು ಬ್ಯಾಂಕಿನ ಆಡಳಿತ ವರ್ಗ ರೂಪಿಸಬೇಕು.

ಉಡುಪಿ ಮತ್ತು ದ.ಕ. ಜಿಲ್ಲೆಗಳ ಮಲ್ಲಿಗೆ ಮಾರಾಟಗಾರರು ತಮ್ಮದೇ ಆದ ಒಂದು ಒಕ್ಕೂಟವನ್ನು ರಚಿಸಿಕೊಳ್ಳಬೇಕು. ಅದರಲ್ಲಿ ಬೆಳೆಗಾರ ಮಾರಾಟಗಾರರಿಗೆ ಹೆಚ್ಚಿನ ಸ್ಥಾನವನ್ನು ಮೀಸಲಿಡಬೇಕು. ಇದು ಬೆಳೆಗಾರರೇ ಮಾರಾಟಗಾರರಾಗುವಂತೆ ಉತ್ತೇಜಿಸುತ್ತದೆ. ಅಲ್ಲದೆ ಬೆಳೆಗಾರರು ಮತ್ತು ಮಾರಾಟಗಾರರ ಪ್ರತಿನಿಧಿಯಾಗಿ ಸರಕಾರದೊಡನೆ ಸುಲಭವಾಗಿ ವ್ಯವಹರಿಸಲು ಇದು ಸಾಮರ್ಥ್ಯವನ್ನು ಪಡೆದುಕೊಳ್ಳುತ್ತದೆ.

ರಾಜ್ಯ ಮಟ್ಟದಲ್ಲಿ ಮಲ್ಲಿಗೆ ಕೃಷಿಯ ಅಭಿವೃದ್ಧಿಗಾಗಿ ಮಲ್ಲಿಗೆ ಮಂಡಳಿಯೊಂದನ್ನು ರೂಪಿಸಬೇಕು. ಇದರಲ್ಲಿ ರಾಜಕಾರಣಿಗಳಿಗೆ ಯಾವುದೇ ಪ್ರಾತಿನಿಧ್ಯವಿರಕೂಡದು. ಇದರ ೭೦ ಶೇಕಡಾ ಪ್ರಾತಿನಿಧ್ಯ ಬೆಳೆಗಾರರಿಗೆ ಇರಬೇಕು. ೨೦% ಪ್ರಾತಿನಿಧ್ಯ ಮಾರಾಟಗಾರರಿಗೆ ಇರಬೇಕು. ಮತ್ತು ಶೇಕಡಾ ೧೦ ಪ್ರಾತಿನಿಧ್ಯ ಕೃಷಿ ತಜ್ಞರಿಗಿರಬೇಕು. ಆಗ ಮಲ್ಲಿಗೆ ಕೃಷಿ ಸರ್ವತೋಮುಖ ಅಭಿವೃದ್ಧಿ ಹೊಂದಲು ಸಾಧ್ಯವಿದೆ.

## ೪.೫ ಪ್ರಸಕ್ತ ಅಧ್ಯಯನದ ಫಲಿತಗಳ ಭಿನ್ನತೆ

ಪ್ರಸಕ್ತ ಅಧ್ಯಯನದ ಫಲಿತಗಳನ್ನು ಈಗಾಗಲೇ ನಡೆದ ಅಧ್ಯಯನದ ಫಲಿತಗಳೊಡನೆ ತುಲನೆ ಮಾಡಲಾಗಿದೆ. ಈ ಅಧ್ಯಯನದ ಪ್ರತ್ಯೇಕತೆಗಳನ್ನು ಕೆಳಗಿನ ಅಂಶಗಳಲ್ಲಿ ಪ್ರಸ್ತುತ ಪಡಿಸಬಹುದು:

❖ ಈ ಅಧ್ಯಯನವು ಒಂದು ಸಮಗ್ರ ಅಧ್ಯಯನವಾಗಿದ್ದು ಉತ್ಪಾದನೆ ಮತ್ತು ಮಾರಾಟ ಎರಡನ್ನೂ ಪರಿಗಣನೆಗೆ ತೆಗೆದುಕೊಂಡಿದೆ. ಈವರೆಗಿನ ಅಧ್ಯಯನಗಳು ಉತ್ಪಾದನೆ ಮತ್ತು ವೆಚ್ಚಕ್ಕೆ ಮಾತ್ರ ಮಹತ್ವ ನೀಡಿವೆ. ಪ್ರಸಕ್ತ ಅಧ್ಯಯನವು ಮಲ್ಲಿಗೆ ಬೆಳೆಗಾರರಿಗೆ ಮತ್ತು ಮಾರಾಟಗಾರರಿಗೆ ಪ್ರತ್ಯ ಪ್ರತ್ಯೇಕ ಪ್ರಶ್ನಾವಳಿಗಳನ್ನು ರಚಿಸಿ, ಆಯ್ದ ವಕ್ತೃಗಳನ್ನು ನೇರವಾಗಿ ಸಂದರ್ಶಿಸಿ ಉತ್ತರಗಳನ್ನು ಪಡೆದು ವಿಶ್ಲೇಷಣೆ ನಡೆಸಿದೆ. ಈವರೆಗಿನ ಎಲ್ಲಾ ಅಧ್ಯಯನಗಳು ಆಂಶಿಕ ಅಧ್ಯಯನಗಳಾಗಿದ್ದರೆ ಇದು ಸಮಗ್ರ ಅಧ್ಯಯನವಾಗಿದೆ.

❖ ಈ ಅಧ್ಯಯನವು ಇದುವರೆಗಿನ ಅಧ್ಯಯನಗಳಿಗಿಂತ ವ್ಯಾಪ್ತಿಯಲ್ಲಿ ವಿಶಾಲವಾಗಿದೆ. ಸ್ಥಳೀಯ ಸಮಸ್ಯೆಗಳನ್ನು ಮೂಲ ದತ್ತಾಂಶಗಳ ಆಧಾರದಲ್ಲಿ ವಿಶ್ಲೇಷಣೆ ನಡೆಸುವ ಮುನ್ನ ದೇಶೀಯ ಪುಷ್ಪ ಉತ್ಪಾದನೆಯ ಮಾಹಿತಿಗಳನ್ನು ಸಂಗ್ರಹಿಸಿ ವಿಶ್ಲೇಷಿಸಲಾಗಿದೆ. ನಮ್ಮದು ಒಂದು ತೆರೆದ ಆರ್ಥಿಕತೆ (Open Economy)ಯಾದುದರಿಂದ ದೇಶದ ಪುಷ್ಪ ಆಮದು ಮತ್ತು ರಫ್ತಿನ ಸಂಯೋಜನೆ ಮತ್ತು ದಿಕ್ಕುಗಳನ್ನು ಈ ಅಧ್ಯಯನದಲ್ಲಿ ವಿಶ್ಲೇಷಿಸಲಾಗಿದೆ. ಅಂತಾರಾಷ್ಟ್ರೀಯ ಸಹಯೋಗದ ಮಹತ್ವವನ್ನು ಎತ್ತಿ ತೋರಿಸಲಾಗಿದೆ. ಹಾಗಾಗಿ ಈ ಅಧ್ಯಯನವು ಉಳಿದೆಲ್ಲಾ ಅಧ್ಯಯನಗಳಿಗಿಂತ ಭಿನ್ನವಾಗಿದೆ.

❖ ಇದೊಂದು ತುಲನಾತ್ಮಕ ಅಧ್ಯಯನವಾಗಿರುತ್ತದೆ. ಎರಡು ರೀತಿಯ ತುಲನಾತ್ಮಕತೆಗಳನ್ನು ಈ ಅಧ್ಯಯನ ಸಾಧಿಸಿದೆ. ಮೊದಲನೆಯ ತುಲನಾತ್ಮಕತೆ ಸಾಂಪ್ರದಾಯಿಕ ಮತ್ತು ಆಧುನಿಕ ಪುಷ್ಪಗಳ ಬೆಳೆಗೆ ಸಂಬಂಧಿಸಿದುದು. ಸಾಂಪ್ರದಾಯಿಕ ಪುಷ್ಪ ಬೆಳೆ ಸೋತಲ್ಲಿ ಆಧುನಿಕ ಪುಷ್ಪ ಬೆಳೆಯ ಮೂಲಕ ಸೋಲನ್ನು ಗೆಲುವನ್ನಾಗಿ ಪರಿವರ್ತಿಸಲು ಸಾಧ್ಯವಿದೆಯೆಂಬುದನ್ನು ಈ ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ. ಇದು ಎರಡು ಜಿಲ್ಲೆಗಳ ಪುಷ್ಪ ಕೃಷಿಯ ತುಲನಾತ್ಮಕ ಅಧ್ಯಯನವಾಗಿದೆ. ಉಡುಪಿ ಜಿಲ್ಲೆಯು ಮಲ್ಲಿಗೆ ಬೆಳೆಯಲ್ಲಿ ದ.ಕ. ಜಿಲ್ಲೆಗಿಂತ ಮುಂದುವರಿದಿರುವುದನ್ನು ಈ ಅಧ್ಯಯನದ ಮೂಲಕ ಕಂಡುಕೊಳ್ಳಲಾಗಿದೆ. ಇದಕ್ಕೆ ಮಲ್ಲಿಗೆ ರಾಜಧಾನಿ ಎಂದು ಪರಿಗಣಿತವಾಗಿರುವ ಶಂಕರಪುರದ ಮಲ್ಲಿಗೆ ಬೆಳೆಯ ಸುದೀರ್ಘ ಇತಿಹಾಸ ಬಹುಮುಖ್ಯ ಕಾರಣವಾಗಿದೆ. ಅಮೇರಿಕ ಸೀನಿದರೆ ವಿಶ್ವದ ಇತರ ರಾಷ್ಟ್ರಗಳಿಗೆ ಶೀತ ಜ್ವರ ತಗಲುತ್ತದೆ ಎಂಬ ಮಾತು ಮಹಾ ಆರ್ಥಿಕ ಮುಗ್ಗಟ್ಟಿನ (೧೯೨೯-೩೩) ಬಳಿಕ ಪ್ರಚಲಿತದಲ್ಲಿದೆ. ಮಲ್ಲಿಗೆ ಬೆಳೆಯಲ್ಲಿ ಶಂಕರಪುರದಲ್ಲಿ ಏನಾದರೂ ಬದಲಾವಣೆ ಕಂಡುಬಂದರೆ ಅದರ ಪರಿಣಾಮ ಎರಡೂ ಜಿಲ್ಲೆಗಳ ಮೇಲೆ ಆಗುವುದನ್ನು ಅಧ್ಯಯನ ಕಾಲದಲ್ಲಿ ಗುರುತಿಸಲಾಗಿದೆ.

❖ ಸಾಂಪ್ರದಾಯಿಕ ಅರ್ಥಶಾಸ್ತ್ರದಲ್ಲಿ ಆಡಂ ಸ್ಮಿತ್ ಪ್ರತಿಪಾದಿಸಿದ ಅದೃಶ್ಯ ಹಸ್ತ ಪರಿಕಲ್ಪನೆ ಮಲ್ಲಿಗೆ ಕೃಷಿಗೆ ಅನ್ವಯವಾಗುವುದನ್ನು ಕ್ಷೇತ್ರಾಧ್ಯಯನದ ಕಾಲದಲ್ಲಿ ಕಂಡುಕೊಳ್ಳಲಾಗಿದೆ. ಹಿತಕರ ಋತುಮಾನ ಇದ್ದ ಕಾಲದಲ್ಲಿ ಪುಷ್ಪ ಉತ್ಪಾದನೆ ಅಧಿಕವಾಗುತ್ತದೆ. ಆಗ ಬೆಲೆ ಸ್ವಲ್ಪ ಕಡಿಮೆಯಾದರೂ ಉತ್ಪಾದನೆ ಅಧಿಕ ಇರುವುದರಿಂದ ಬೆಳೆಗಾರರಿಗೆ ಸಾಕಷ್ಟು ವರಮಾನ ಲಭ್ಯವಾಗುತ್ತದೆ. ಅಹಿತಕರ ಋತುಮಾನದ ಸಂದರ್ಭದಲ್ಲಿ ಬೆಳೆ ಕಡಿಮೆಯಾಗುತ್ತದೆ. ಆದರೆ ಬೆಲೆ ಅಧಿಕವಿರುವುದರಿಂದ ಉತ್ಪಾದಕರಿಗೆ ನಷ್ಟ ಉಂಟಾಗುವುದಿಲ್ಲ. ಮಲ್ಲಿಗೆಯ ಬೇಡಿಕೆ ಬಹುತೇಕವಾಗಿ ಒಂದೇ ರೀತಿಯಿರುತ್ತದೆ. ಆದರೆ ಪೂರೈಕೆ ಋತುಮಾನದ ಸ್ವರೂಪವನ್ನು ಅವಲಂಬಿಸಿ ಬದಲಾಗುತ್ತಿರುತ್ತದೆ. ಬೇಡಿಕೆ ಮತ್ತು ಪೂರೈಕೆಗಳು ಬಾಹ್ಯ ಹಸ್ತಕ್ಷೇಪವಿಲ್ಲದೆ ಸ್ವತಂತ್ರವಾಗಿ ಕಾರ್ಯ ನಿರ್ವಹಿಸಿ ಉತ್ಪಾದಕರಿಗೆ ಲಾಭವನ್ನು ತಂದುಕೊಡುತ್ತದೆ. ಆಡಂ ಸ್ಮಿತ್ ಈ ರೀತಿಯ ಅದೃಶ್ಯ ಹಸ್ತದ ಕಾರ್ಯ ನಿರ್ವಹಣೆಯನ್ನು ನೈಸರ್ಗಿಕವಾದ (Naturalism) ಎಂದೂ ಅದರ ಅಂತಿಮ ಫಲಿತಾಂಶವನ್ನು ಆಶಾವಾದ (Optimism)ಎಂದೂ ಕರೆದಿದ್ದಾನೆ. ಇದು ಮಲ್ಲಿಗೆ ಕೃಷಿಗೆ

ಸಂಬಂಧಿಸಿದಂತೆ ದ.ಕ. ಮತ್ತು ಉಡುಪಿ ಜಿಲ್ಲೆಗಳಲ್ಲಿ ವಾಸ್ತವವಾಗಿರುವುದನ್ನು ಅಧ್ಯಯನ ಕಾಲದಲ್ಲಿ ಕಂಡುಕೊಳ್ಳಲಾಗಿದೆ. ಇದರಿಂದಾಗಿ ಪ್ರಸಕ್ತ ಅಧ್ಯಯನವು ಭಿನ್ನತೆಯನ್ನು ಸಾಧಿಸಿದಂತಾಗಿದೆ.

❖ ದ.ಕ. ಮತ್ತು ಉಡುಪಿ ಜಿಲ್ಲೆಗಳಲ್ಲಿ ಮಲ್ಲಿಗೆಗೆ ತೀವ್ರ ಪ್ರತಿಸ್ಪರ್ಧೆಯನ್ನು ಒಡ್ಡುತ್ತಿರುವುದು ಹೊರಗಿನಿಂದ ಬರುವ ಕಾಕಡ ಪುಷ್ಪ. ಇದು ಗುಣಮಟ್ಟದಲ್ಲಿ ಮಲ್ಲಿಗೆಯ ಸಮೀಪಕ್ಕೂ ಬರಲಾರದು. ಆದರೆ ಅದರ ಬೆಲೆ ಮಲ್ಲಿಗೆಗಿಂತ ಕಡಿಮೆಯಿರುವುದರಿಂದ ಮತ್ತು ಅದರ ಜೀವಿತಾವಧಿ ಮಲ್ಲಿಗೆಗಿಂತ ಹೆಚ್ಚು ಇರುವುದರಿಂದ ಅದು ಮಲ್ಲಿಗೆಗೆ ತೀವ್ರತರನಾದ ಸ್ಪರ್ದೆಯನ್ನು ಒಡ್ಡುತ್ತಿದೆ. ಕರಾವಳಿ ಜಿಲ್ಲೆಗಳ ಮಲ್ಲಿಗೆ ಬೆಳೆಗಾರರು ಕಾಕಡವನ್ನು ಬೆಳೆಯುವ ಗಂಭೀರ ಪ್ರಯತ್ನಗಳನ್ನು ಮಾಡಿಲ್ಲ. ಕೆಲವು ಬೆಳೆಗಾರರು ಕಾಕಡವನ್ನು ಬೆಳೆಯಲು ಯತ್ನಿಸಿದ್ದಾರಾದರೂ ಅದರ ಉತ್ಪತ್ತಿ ಬಹಳ ಕಡಿಮೆ ಇರುವುದರಿಂದ ಬೆಳೆಯನ್ನು ಮುಂದುವರಿಸುವ ಉತ್ಸಾಹ ತೋರಿಸುತ್ತಿಲ್ಲ. ಈ ಬೆಲೆ ಕರಾವಳಿ ಜಿಲ್ಲೆಯ ಮಣ್ಣಿಗೆ ಒಗ್ಗುವುದಿಲ್ಲವೆಂಬ ವಾಸ್ತವವನ್ನು ಅಧ್ಯಯನ ಕಾಲದಲ್ಲಿ ಕಂಡುಕೊಳ್ಳಲಾಗಿದೆ. ಕರಾವಳಿ ಜಿಲ್ಲೆಗಳ ಮಣ್ಣಿಗೆ ಕಾಕಡ ಬೆಳೆಗೆ ಅಗತ್ಯವಿರುವ ಫಲದಾಯಕತೆಯನ್ನು ನೈಸರ್ಗಿಕವಾಗಿ ನೀಡಿ ಈ ಜಿಲ್ಲೆಗಳಲ್ಲಿ ಕಾಕಡ ಬೆಲೆಯನ್ನು ಹೆಚ್ಚಿಸುವ ಪ್ರಯತ್ನಗಳಾಗಬೇಕೆಂಬುದನ್ನು ಈ ಅಧ್ಯಯನವು ಸೂಚಿಸುತ್ತದೆ. ಈ ನಿಟ್ಟಿನಲ್ಲಿ ಪ್ರಸಕ್ತ ಅಧ್ಯಯನವು ಇತರ ಅಧ್ಯಯನಗಳಿಗಿಂತ ಪ್ರತ್ಯೇಕತೆಯನ್ನು ಸಾಧಿಸಿದೆ.

❖ ಕರಾವಳಿ ಜಿಲ್ಲೆಗಳಲ್ಲಿ ಹೈನುಗಾರಿಕೆ ಪುಷ್ಪ ಕೃಷಿಗೆ ಪೂರಕವಾಗಿರುವುದನ್ನು ಪ್ರಸಕ್ತ ಅಧ್ಯಯನವು ಕಂಡುಕೊಂಡಿದೆ. ತುಂಡು ಭೂಮಿಯ ರೈತರು ಪಶು ಸಾಕಣೆಯೊಂದಿಗೆ ಮಲ್ಲಿಗೆಯನ್ನು ಒಂದು ಲಾಭದಾಯಕ ಉಪವೃತ್ತಿಯನ್ನಾಗಿ ಮಾಡಿಕೊಂಡಿರುವುದು ಕ್ಷೇತ್ರಾಧ್ಯಯನ ಕಾಲದಲ್ಲಿ ಅನೇಕ ಕಡೆಗಳಲ್ಲಿ ಕಂಡುಬಂದಿದೆ. ಪಶುಗಳ ವಿಸರ್ಜನೆ ಅಥವಾ ಗಂಜಳ ಮಲ್ಲಿಗೆ ಗಿಡಗಳಿಗೆ ಸ್ವಾಭಾವಿಕವಾದ ಪೋಷಕಾಂಶಗಳಾಗಿವೆ. ಮಲ್ಲಿಗೆ ಬೆಳೆಗಾರರು ಬಹುತೇಕವಾಗಿ ನೈಸರ್ಗಿಕ ಗೊಬ್ಬರಕ್ಕೆ ಆದ್ಯತೆ ನೀಡಿರುತ್ತಾರೆ. ಈ ನಿಟ್ಟಿನಲ್ಲಿ ಹೈನೋದ್ಯಮವನ್ನು ಕೈಗೊಳ್ಳುವ ಎಲ್ಲಾ ಕುಟುಂಬಗಳು ಅಥವಾ ಸಂಘಟನೆಗಳು ಮಲ್ಲಿಗೆಯನ್ನು ಬೆಳೆಯುವ ಅವಕಾಶ ಹೊಂದಿರುವುದನ್ನು ಈ ಅಧ್ಯಯನ ಗುರುತಿಸುತ್ತದೆ. ಇದು ಇತರ ಅಧ್ಯಯನಗಳಿಗಿಂತ ಪ್ರಸಕ್ತ ಅಧ್ಯಯನಕ್ಕೆ ಭಿನ್ನತೆಯನ್ನು ತಂದುಕೊಟ್ಟಿದೆ.

❖ ಪ್ರಸಕ್ತ ಅಧ್ಯಯನವು ಮಲ್ಲಿಗೆ ಬೆಳೆ ಮತ್ತು ಮಾರಾಟಕ್ಕೆ ಮಾತ್ರವಲ್ಲದೆ ಸಾಗಾಟ ಸಂಸ್ಕರಣೆ ಮತ್ತು ಶೇಖರಣೆಯ ಸಮಸ್ಯೆಗಳನ್ನು ವಿಶ್ಲೇಷಿಸುತ್ತದೆ. ವಿಳಂಬಿತ ಪಾವತಿಯಿಂದ ಮಲ್ಲಿಗೆ ಬೆಳೆಗಾರರಿಗಾಗುವ ಸಂಕಷ್ಟಗಳನ್ನು ದಾಖಲಿಸುತ್ತದೆ. ಈ ವಿಶ್ಲೇಷಣೆ ಇತರ ಅಧ್ಯಯನಗಳಲ್ಲಿ ಕಂಡುಬರುವುದಿಲ್ಲ.

❖ ಜಾಗತೀಕರಣದಿಂದಾಗಿ ನಗರೀಕರಣ ಪ್ರಕ್ರಿಯೆ ವೇಗವಾಗಿ ಸಾಗುತ್ತಿದೆ. ಕೃಷಿ ಭೂಮಿ ವಾಣಿಜ್ಯ ಉದ್ದೇಶಗಳಿಗೆ ಬಳಕೆಯಾಗಿ ಕೃಷಿ ಆದಾಯ ಗಳಿಕೆಯ ಅವಕಾಶಗಳು ಕುಂಠಿತವಾಗುತ್ತಿವೆ. ಮಲ್ಲಿಗೆಯನ್ನು ತುಂಡು ಭೂಮಿಯಲ್ಲೂ ಬೆಳೆಯಲು

ಸಾಧ್ಯವಿರುವುದರಿಂದ ನಗರೀಕರಣ ಪ್ರಕ್ರಿಯೆಯ ಲಾಭವನ್ನು ಉತ್ಪಾದಕರು ಬಳಸಿಕೊಳ್ಳಲು ಸಾಧ್ಯವಿದೆ ಎಂಬುದನ್ನು ಈ ಅಧ್ಯಯನ ಕಾಲದಲ್ಲಿ ಕಂಡುಕೊಳ್ಳಲಾಗಿದೆ. ಅಲ್ಲದೆ ನಗರೀಕರಣ ಪ್ರಕ್ರಿಯೆಯಿಂದ ಮಲ್ಲಿಗೆಗೆ ಮಾರುಕಟ್ಟೆ ಸೌಲಭ್ಯ ತೀರ ಹತ್ತಿರದಲ್ಲಿ ಲಭ್ಯವಾದಂತಾಗಿದೆ. ಈ ಅಂಶವನ್ನು ಪ್ರಸಕ್ತ ಅಧ್ಯಯನವು ಗುರುತಿಸಿದೆ. ಇದರಿಂದಾಗಿ ಪ್ರಸಕ್ತ ಅಧ್ಯಯನವು ಉಳಿದೆಲ್ಲಾ ಅಧ್ಯಯನಗಳಿಗಿಂತ ಭಿನ್ನವಾಗಿದೆ.

❖ ಕರಾವಳಿ ಜಿಲ್ಲೆಗಳಲ್ಲಿ ಸ್ವಸಹಾಯ ಸಂಘಗಳು ಮತ್ತು ಗ್ರಾಮೀಣ ಯೋಜನೆಗಳು ತುಂಬಾ ಕ್ರೀಯಾಶೀಲವಾಗಿವೆ. ನಿರ್ದಿಷ್ಟವಾಗಿ ಹೇಳುವುದಾದರೆ ಶ್ರೀ ಕ್ಷೇತ್ರ ಧರ್ಮಸ್ಥಳ ಗ್ರಾಮೀಣಾಭಿವೃದ್ಧಿ ಯೋಜನೆಯ ಅಡಿಯಲ್ಲಿ ಫಲಾನುಭವಿಗಳಿಗೆ ತೆಂಗು ಮತ್ತು ಕಂಗಿನ ಗಿಡಗಳನ್ನು ವಿತರಿಸುವಾಗ ಕನಿಷ್ಠ ಹತ್ತು ಮಲ್ಲಿಗೆ ಗಿಡಗಳನ್ನು ಉಚಿತವಾಗಿ ನೀಡಲಾಗುತ್ತದೆ. ಇದರಿಂದಾಗಿ ತುಂಡು ಭೂಮಿಯ ರೈತರು ಮಲ್ಲಿಗೆಯನ್ನು ಬೆಳೆಯುವಂತಾಗಿದೆ. ಹಾಗೆ ಬೆಳೆದಾಗ ರೈತರಿಗೆ ಮಲ್ಲಿಗೆಯ ಆದಾಯ ಒಂದು ಆಯಾಚಿತ ಗಳಿಕೆಯಾಗುತ್ತದೆ. ಈ ವಿದ್ಯಮಾನವು ಎಲ್ಲಾ ಸ್ವಸಹಾಯ ಯೋಜನೆಗಳಿಗೆ ಒಂದು ಮಾದರಿ (Model) ಎಂದು ಪ್ರಸಕ್ತ ಅಧ್ಯಯನವು ಪರಿಗಣಿಸುತ್ತದೆ. ಈ ನಿಟ್ಟಿನಲ್ಲಿ ಈ ಅಧ್ಯಯನವು ವೈಶಿಷ್ಟ್ಯತೆಯನ್ನು ಸಾಧಿಸಿದೆ.

❖ ಕರಾವಳಿ ಜಿಲ್ಲೆಗಳು ಇತ್ತೀಚಿನ ವರ್ಷಗಳಲ್ಲಿ ಕೋಮು ಸೂಕ್ಷ್ಮತೆಯ ಪ್ರದೇಶಗಳಾಗಿವೆ. ಮತ್ಸ್ಯೋದ್ಯಮ ಮತ್ತು ಪುಷ್ಪೋದ್ಯಮ ಕೋಮು ಸಾಮರಸ್ಯವನ್ನು ಸಾಧಿಸುವ ಆರ್ಥಿಕ ಚಟುವಟಿಕೆಗಳಾಗಿವೆ. ಈ ಎರಡು ಉದ್ಯಮಗಳಲ್ಲಿ ಉತ್ಪಾದಕರು ವಿಭಿನ್ನ ಧರ್ಮಗಳಿಗೆ ಸೇರಿದವರಾಗಿರುತ್ತಾರೆ. ಅವರು ರಚಿಸಿಕೊಂಡಿರುವ ಸಹಕಾರಿ ಸಂಘಗಳು ಮತ್ತು ಒಕ್ಕೂಟಗಳು ಅವರ ನಡುವೆ ಸಾಮರಸ್ಯವನ್ನು ಸಾಧಿಸುತ್ತವೆ. ಮತ್ಸ್ಯ ಮತ್ತು ಪುಷ್ಪ ಮಾರಾಟದಲ್ಲಿ ಮುಸಲ್ಮಾನರದು ಬಹುಮತ. ಉತ್ಪಾದಕರು ಮತ್ತು ಮಾರಾಟಗಾರರು ಸದಾ ಸಂಪರ್ಕದಲ್ಲಿ ಇರಬೇಕಾದ ಅಗತ್ಯ ಇರುವುದರಿಂದ ಅವರ ನಡುವೆ ಸಂಘರ್ಷಗಳು ನಡೆಯುವುದು ತೀರಾ ಕಡಿಮೆ. ಪುಷ್ಪೋದ್ಯಮ ಕೋಮು ಸಾಮರಸ್ಯದಲ್ಲಿ ತನ್ನದೇ ಆದ ವಿಶಿಷ್ಟ ಪಾತ್ರವನ್ನು ವಹಿಸುತ್ತಿರುವುದು ಅಧ್ಯಯನ ಕಾಲದಲ್ಲಿ ಕಂಡು ಬಂದಿದೆ. ಈ ಅಂಶವನ್ನು ಈವರೆಗಿನ ಯಾವುದೇ ಅಧ್ಯಯನವು ಗಮನಿಸಿಲ್ಲ. ಹಾಗಾಗಿ ಪ್ರಸಕ್ತ ಅಧ್ಯಯನ ಎಲ್ಲಾ ದೃಷ್ಟಿಗಳಿಂದ ಹಿಂದಿನ ಅಧ್ಯಯನಗಳಿಗಿಂತ ಪ್ರತ್ಯೇಕತೆಯನ್ನು ಸಾಧಿಸಿದೆ ಮತ್ತು ಉತ್ಕೃಷ್ಟವಾಗಿದೆ.

# ಅಧ್ಯಾಯ -೮

# ಉಪಸಂಹಾರ

## ೮.೧ ಅಧ್ಯಯನದ ಸಾರ ಸಂಗ್ರಹ

ಜಾಗತೀಕರಣ ಪ್ರಕ್ರಿಯೆಯಲ್ಲಿ ತೃತೀಯ ಮತ್ತು ಆನುಷಂಗಿಕ ವಲಯಗಳು ಪ್ರಾಶಸ್ತ್ಯ ಪಡೆದರೆ ಮೂಲ ರಂಗವು ಅವಗಣನೆಗೆ ಈಡಾಗುತ್ತದೆ. ಭಾರತವೂ ಸೇರಿದಂತೆ ವಿಶ್ವದ ಪ್ರವರ್ಧಮಾನ ಕೃಷಿ ಪ್ರಧಾನ ರಾಷ್ಟ್ರಗಳು ಈ ಸಮಸ್ಯೆಯನ್ನು ಎದುರಿಸುತ್ತವೆ. ಮೂಲ ರಂಗದಲ್ಲಿ ಕೃಷಿಯೆ ಪ್ರಧಾನ. ಅದುವೇ ಅವಗಣನೆಗೆ ಒಳಗಾದರೆ ಆರ್ಥಿಕತೆಯ ಬೆನ್ನೆಲುಬು ಮುರಿದು ಹೋಗುತ್ತದೆ. ಕೃಷಿಯು ಅನಾರ್ಥಿಕವೆನಿಸುತ್ತದೆ. ಆಗ ರೈತರು ಆಹಾರ ಬೆಳೆಗಳ ಬದಲು ವಾಣಿಜ್ಯ ಬೆಳೆಗಳನ್ನು ಬೆಳೆಯಲು ಆರಂಭಿಸುತ್ತಾರೆ. ಪರಿಣಾಮವಾಗಿ ಆಹಾರ ಬೆಳೆಗಳ ಪೂರೈಕೆ ಕಡಿಮೆಯಾಗಿ ಅವುಗಳ ಬೆಲೆ ಏರುತ್ತದೆ. ಭಾರತದಲ್ಲಿ ಅಕ್ಕಿಯ ಬೆಲೆ ಗಣನೀಯವಾಗಿ ಏರುತ್ತಿರುವುದು ಇದೇ ಕಾರಣದಿಂದ. ಆಹಾರ ಮತ್ತು ಕೃಷಿ ಸಂಸ್ಥೆಯ (FAO) ಕೃಷಿ ವಿಜ್ಞಾನಿಗಳ ಭವಿಷ್ಯದ ಪ್ರಕಾರ ಕ್ರಿ.ಶ. ೨೦೨೦ ರಲ್ಲಿ ವಿಶ್ವದಾದ್ಯಂತ ಆಹಾರ ಧಾನ್ಯಗಳ ವಿಪರೀತ ಕೊರತೆ ಕಾಣಿಸಿಕೊಂಡು ತೃತೀಯ ಜಗತ್ತಿನ ಬಡವರು ಆಹಾರ ಧಾನ್ಯಗಳನ್ನು ಕೊಳ್ಳಲಾಗದೆ, ಹಸಿವಿನಿಂದ ಸಾಯುವ ಪರಿಸ್ಥಿತಿ ನಿರ್ಮಾಣವಾಗಲಿದೆ. ಈ ದುರ್ಭರ ಪರಿಸ್ಥಿತಿ ಉಂಟಾಗದಿರಬೇಕಾದರೆ ರೈತರು ಆಹಾರ ಧಾನ್ಯಗಳ ಬೆಳೆಗೆ ಮತ್ತೆ ಮರಳಬೇಕಾಗುತ್ತದೆ. ಬಡತನದಿಂದ ಬಳಲುವ ಜನರು ತಮ್ಮ ಆದಾಯ ಹೆಚ್ಚಾಗುವ ಚಟುವಟಿಕೆಗಳಲ್ಲಿ ತಮ್ಮನ್ನು ತೊಡಗಿಸಬೇಕಾಗುತ್ತದೆ.

ಭಾರತದ ಒಟ್ಟು ಜನಸಂಖ್ಯೆಯಲ್ಲಿ ಸುಮಾರು ಶೇ. ೬೭.೫ ಮಂದಿ ಈಗಲೂ ಕೃಷಿ ಕ್ಷೇತ್ರದಲ್ಲಿ ಬದುಕನ್ನು ಕಂಡುಕೊಂಡಿದ್ದಾರೆ. ಆದರೆ ಭಾರತವು ಬಡತನ ಮತ್ತು ನಿರುದ್ಯೋಗದಂತಹ ಸಮಸ್ಯೆಗಳಿಂದ ತಲ್ಲಣಕ್ಕೊಳಗಾಗಿದೆ. ದೇಶದ ನಿರುದ್ಯೋಗಿಗಳ ಸಂಖ್ಯೆ ೩೭ ದಶಲಕ್ಷ ಮತ್ತು ಬಡತನದ ರೇಖೆಯ ಕೆಳಗಿರುವವರ ಪ್ರಮಾಣ ೨೬.೫. ಗ್ರಾಮೀಣ ಬಡತನವು ಬಹು ದೊಡ್ಡ ಸಮಸ್ಯೆಯಾಗಲು ಕೃಷಿ ವಲಯವು ಅನುತ್ಪಾದಕವಾಗಿರುವುದು ಮತ್ತು ಭೂ ವಿತರಣೆಯಲ್ಲಿ ತೀವ್ರತರವಾದ ಅಸಮಾನತೆಯಿರುವುದು ಬಹಳ ಮುಖ್ಯ ಕಾರಣವಾಗಿದೆ.

ಭಾರತದಲ್ಲಿ ಕಾಲು ಎಕರೆಗಿಂತಲೂ ಕಡಿಮೆ ಭೂಮಿ ಹೊಂದಿರುವ ಬಡವರು ಮತ್ತು ಕೆಳ ಮಧ್ಯಮ ವರ್ಗೀಯರು ದೇಶದ ಒಟ್ಟು ಜನಸಂಖ್ಯೆಯಲ್ಲಿ ಅರ್ಧಾಂಶಕ್ಕಿಂತಲೂ

ಹೆಚ್ಚಿದ್ದಾರೆ. ತುಂಡು ಭೂಮಿಯಲ್ಲಿ ಅವರು ಆಹಾರ ಬೆಳೆಗಳನ್ನು ಬೆಳೆಯುವಂತಿಲ್ಲ. ಬೆಲೆ ಏರಿಕೆಯಿಂದಾಗಿ ಅಕ್ಕಿ, ರಾಗಿ, ಗೋಧಿ ಮತ್ತು ಜೋಳಗಳಂತಹ ಅವಶ್ಯಕ ಆಹಾರ ಧಾನ್ಯಗಳು ಅವರ ಪಾಲಿಗೆ ಆಡಂಬರ ವಸ್ತುಗಳಂತಾಗಿವೆ. ಇಂತಹ ದುರ್ಭರ ಪರಿಸ್ಥಿತಿಯಲ್ಲಿ ಅವರು ತಮ್ಮ ಆದಾಯವನ್ನು ಎತ್ತರಿಸಿ, ಬದುಕುವ ಹಾದಿಯನ್ನು ಕಂಡುಕೊಳ್ಳುವುದು ಅನಿವಾರ್ಯವಾಗುತ್ತದೆ. ಅಂಥವರ ಮಬ್ಬು ಕವಿದ ಬದುಕಿಗೆ ಮಲ್ಲಿಗೆ ಕೃಷಿ ಒಂದು ಆಶಾಕಿರಣವಾಗಿ ಕಾಣಿಸಿದರೆ ಅದರಲ್ಲಿ ಆಶ್ಚರ್ಯವೇನಿಲ್ಲ.

ಸುಮಾರು ಎರಡು ಶತಮಾನಗಳಿಗಿಂತಲೂ ಅಧಿಕ ಕಾಲ ವಸಾತುಶಾಹಿ ಗುಲಾಮಗಿರಿಯಲ್ಲಿ ಬೆಳೆದ ಭಾರತೀಯರು ದಾಸ್ಯ ಮನೋವೃತ್ತಿಗೆ ಶರಣಾಗಿ ಆರ್ಥಿಕ ಅಭಿವೃದ್ಧಿಗಾಗಿ ತುಡಿಯುವುದು ತೀರಾ ಕಡಿಮೆ. ಬ್ರಿಟಿಷರು ಈ ದೇಶವನ್ನು ಆಳದಿರುತ್ತಿದ್ದರೂ ಪರಿಸ್ಥಿತಿ ಭಿನ್ನವಾಗಿರುತ್ತಿರಲಿಲ್ಲ. ಸಹಸ್ರಮಾನಗಳ ಸಾಂಸ್ಕೃತಿಕ ಗುಲಾಮಗಿರಿ ಉಂಟುಮಾಡಿದ ಶ್ರೇಣೀಕೃತ ಜಾತಿ ವ್ಯವಸ್ಥೆ ಭಾರತೀಯರಲ್ಲಿ ಆವಿಷ್ಕಾರದ ಮನೋವೃತ್ತಿಯನ್ನು ಮತ್ತು ಮುನ್ನುಗ್ಗುವ ಎದೆಗಾರಿಕೆಯನ್ನು ಇಲ್ಲದಾಗಿಸಿ ಬಿಟ್ಟಿದೆ. ಭಾರತದ ಕೃಷಿ ವಲಯದಲ್ಲಂತೂ ಬರಿಯ ಮೂಢ ನಂಬಿಕೆ, ಅಂಧ ಶ್ರದ್ಧೆ ಮತ್ತು ಅನುಕರಣೆ ಪ್ರವೃತ್ತಿ ತುಂಬಿ ಹೋಗಿ ಕೃಷಿಯನ್ನು ಒಂದು ಲಾಭದಾಯಕ ಉದ್ಯಮವನ್ನಾಗಿ ಮಾಡಲು ರೈತರಿಂದ ಸಾಧ್ಯವಾಗಿಲ್ಲ. ಗ್ರಾಮೀಣ ಭಾರತೀಯರ ಭೂರಾಹಿತ್ಯತೆ ಅವರನ್ನು ಬಡತನ ರೇಖೆಯ ಕೆಳಗೇ ಇರಗೊಟ್ಟಿದೆ. ನಗರೀಕರಣಗೊಂಡ ಪ್ರದೇಶಗಳ ಭೂ ರಹಿತರ ಬದುಕು ಕೂಡ ದುರ್ಭರವಾಗಿದೆ. ಭಾರತ ೨೦೨೦ ರಲ್ಲಿ ವಿಶ್ವದ ಮೂರನೆಯ ಅತೀ ಬಲಾಢ್ಯ ಆರ್ಥಿಕ ವ್ಯವಸ್ಥೆಯನ್ನು ಹೊಂದಲಿದೆಯೆಂಬ ಆಶಾವಾದದ ಮುನ್ನೋಟವನ್ನು ಅರ್ಥತಜ್ಞರು ನೀಡಿದ್ದಾರೆ. ತೃತೀಯ ಮತ್ತು ಆನುಷಂಗಿಕ ವಲಯಗಳ ಪ್ರಗತಿಯಿಂದ ಇದು ಸಾಧ್ಯವಾಗಲೂಬಹುದು. ಆದರೆ ಜಾಗತೀಕರಣವೆಂಬ ಪರಿಕಲ್ಪನೆಯಲ್ಲಿ ಕೃಷಿಗೆ ಮಹತ್ವವಿಲ್ಲದ ಕಾರಣ, ರೈತರಿಗೆ ನೀಡುವ ಸಬ್ಸಿಡಿಗಳನ್ನು ನಿಲ್ಲಿಸಬೇಕೆಂಬುದು ವಿಶ್ವ ವ್ಯಾಪಾರ ಒಕ್ಕೂಟದ (WHO) ಒಂದು ಒಪ್ಪಂದವಾಗಿರುವ ಕಾರಣ, ಭಾರತದ ಕೃಷಿ ರಂಗವು ಕಡೆಗಣಿಸಲ್ಪಟ್ಟಿರುತ್ತದೆ. ಕೃಷಿಕರು ಬಾಹ್ಯ ನೆರವಿಲ್ಲದೆ ತಮ್ಮನ್ನು ಬದುಕಿಸಿಕೊಂಡು ಭಾರತದ ಆರ್ಥಿಕತೆಯನ್ನು ಬಲಗೊಳಿಸಬೇಕಾಗಿದೆ. ಕೃಷಿಕರೆಂದು ತಮ್ಮನ್ನು ಕರೆದುಕೊಳ್ಳುವ, ಆದರೆ ಕಾಲು ಎಕರೆಗಿಂತಲೂ ಕಡಿಮೆ ಭೂಮಿಯನ್ನು ಹೊಂದಿರುವ ಬಡಪಾಯಿ ಭಾರತೀಯರು ತೀಕ್ಷ್ಣ ಬೇಸಾಯದಿಂದ ಆದಾಯ ಹೆಚ್ಚಿಸಲು ಸಾಧ್ಯವಾಗುವುದಿಲ್ಲ. ಆದರೆ ಮಲ್ಲಿಗೆ ಬೆಳೆದು ತಮ್ಮ ಆದಾಯವನ್ನು ಹೆಚ್ಚಿಸಲು ಸಾಧ್ಯವಿದೆಯೆಂದು ಪ್ರಸಕ್ತ ಅಧ್ಯಯನವು ತೋರಿಸಿಕೊಟ್ಟಿದೆ. ಅತೀ ಕಡಿಮೆ ಪ್ರಮಾಣದ ಭೂಮಿಯನ್ನು ಹೊಂದಿದವರೂ ಕೂಡ ಮಲ್ಲಿಗೆ ಬೆಳೆಯಿಂದ ತಮ್ಮ ಬದುಕನ್ನು ಸಹ್ಯವನ್ನಾಗಿ ಮಾಡಿಕೊಳ್ಳಲು ಸಾಧ್ಯವಿದೆಯೆನ್ನುವುದು ಕ್ಷೇತ್ರಾಧ್ಯಯನದ

ಕಾಲದಲ್ಲಿ ಕಂಡುಕೊಳ್ಳಲಾಗಿದೆ. ಆದುದರಿಂದ ಗ್ರಾಮೀಣ ಬಡ ಭಾರತೀಯರನ್ನು ಬಡತನದ ರೇಖೆಯ ಕೆಳಗಿನಿಂದ ಮೇಲೆತ್ತುವಲ್ಲಿ ಮಲ್ಲಿಗೆ ಕೃಷಿಗೆ ಮಹತ್ತರ ಪಾತ್ರವಿದೆಯೆನ್ನುವ ತೀರ್ಮಾನಕ್ಕೆ ಧಾರಾಳವಾಗಿ ಬರಬಹುದು.

ಕ್ರಿ.ಶ. ೧೯೪೭ ರಲ್ಲಿ ಭಾರತವು ಸ್ವಾತಂತ್ರ್ಯ ಗಳಿಸಿದಾಗ ದೇಶ ಆಯ್ದುಕೊಳ್ಳಬೇಕಾದದ್ದು ಕೃಷಿಯನ್ನೋ ಅಥವಾ ಕೈಗಾರಿಕೆಯನ್ನೋ ಎಂಬ ಪ್ರಶ್ನೆ ಪ್ರಥಮ ಪ್ರಧಾನಮಂತ್ರಿ ಜವಾಹರಲಾಲ ನೆಹರೂ ಅವರನ್ನು ತೀವ್ರವಾಗಿ ಕಾಡಿತ್ತು. ಭಾರತ ಸಾಂಪ್ರದಾಯಿಕ ಕೃಷಿಕರಿಂದಲೇ ತುಂಬಿರುವ ಬಡ ರಾಷ್ಟ್ರವೆಂದು ಪರಿಗಣಿತವಾಗಿದ್ದುದರಿಂದ ಅನಿವಾರ್ಯವಾಗಿ ಮೊದಲ ಪಂಚವಾರ್ಷಿಕ ಯೋಜನೆಯಲ್ಲಿ ಕೃಷಿಗೆ ಮಹತ್ವ ದೊರೆಯಿತು. ಆದರೆ ಸಮಾಜವಾದೀ ತತ್ವಗಳ ಅಳವಡಿಕೆಯಿಂದ ವಿಶ್ವದ ಬಲಾಢ್ಯ ದೇಶಗಳಲ್ಲಿ ಒಂದಾಗಿ ಅದಾಗಲೇ ಹೊರ ಹೊಮ್ಮಿದ್ದ ಸೋವಿಯತ್ ರಶಿಯಾದ ಅಭಿವೃದ್ಧಿಯ ಹಿಂದಿನ ಗುಟ್ಟನ್ನು ಅರಿಯಲು ನೆಹರೂರವರು ಪಿ. ಸಿ. ಮಹಲನೋಬಿಸ್ ಎಂಬ ಸಂಖ್ಯಾ ಶಾಸ್ತ್ರಜ್ಞರನ್ನು ರಶಿಯಾಕ್ಕೆ ಕಳುಹಿಸಿಕೊಟ್ಟರು. ಅದರ ಫಲವಾಗಿ ಭಾರತದಲ್ಲಿ ಬೃಹತ್ ನೀರಾವರಿ ಯೋಜನೆಗಳು ಮತ್ತು ಬೃಹತ್ ಕೈಗಾರಿಕೆಗಳು ತಲೆ ಎತ್ತಿದವು. ಕೃಷಿಯನ್ನು ಲಾಭದಾಯಕ ಉದ್ಯಮವನ್ನಾಗಿಸಲು ಹಸಿರು ಕ್ರಾಂತಿ ಬಂತು. ಭೂ ಹಿಡುವಳಿಗಳನ್ನು ಒಗ್ಗೂಡಿಸಿ ಸಹಕಾರಿ ಬೇಸಾಯ ನಡೆಸುವ ಪ್ರಯೋಗಗಳಾದವು. ಅದಕ್ಕೂ ಮುನ್ನ ಆಚಾರ್ಯ ವಿನೋಬಾ ಭಾವೆಯವರು ಭೂದಾನ ಚಳುವಳಿಯ ಮೂಲಕ ಭೂ ರಹಿತರಿಗೆ ಶ್ರೀಮಂತರ ಮಿಗುತೆ ಭೂಮಿಯನ್ನು ಹಂಚುವ ಪ್ರಯತ್ನ ಮಾಡಿದರು. ಯಾವುದೂ ಬಡವರ ಪ್ರಯೋಜನಕ್ಕೆ ಬರಲಿಲ್ಲ. ಹಸಿರು ಕ್ರಾಂತಿಯಿಂದ ದೊಡ್ಡ ಜಮೀನುದಾರರುಗಳಿಗೆ ಪ್ರಯೋಜನವಾದುದನ್ನು ಬಿಟ್ಟರೆ ಅತೀ ಸಣ್ಣ ರೈತರ ಬಾಳು ಹಸನಾಗಲಿಲ್ಲ. ಬೃಹತ್ ಉತ್ಪಾದನೆ ಎಂಬ ಆಕರ್ಷಣೀಯ ಪದದ ಮುಂದೆ ಸಣ್ಣ ಪ್ರಮಾಣದ ಕೃಷಿ ಮತ್ತು ಸಣ್ಣ ಪ್ರಮಾಣದ ಉತ್ಪಾದನೆ ಎಂಬ ಪದ ಪುಂಜಗಳಿಗೆ ಪ್ರಕಾಶಿಸಲು ಸಾಧ್ಯವಾಗಲಿಲ್ಲ. ಪಿತ್ರಾರ್ಜಿತ ಆಸ್ತಿಯ ಹಕ್ಕಿನಿಂದಾಗಿ ಸಣ್ಣ ರೈತರು ಅತೀ ಸಣ್ಣ ರೈತರಾದರೆ; ಅತೀ ಸಣ್ಣ ರೈತರು ಕಾಲು ಎಕರೆಗಿಂತಲೂ ಕಡಿಮೆ ಭೂಮಿ ಹೊಂದುವಂತಾಯಿತು. ಅಷ್ಟು ಸಣ್ಣ ಭೂಮಿಯಲ್ಲಿ ಏನನ್ನು ಬೆಳೆದರೂ ಬದುಕು ಸಾಗಿಸಲು ಸಾಧ್ಯವಾಗದ ಶೋಚನೀಯ ಪರಿಸ್ಥಿತಿ ಉಂಟಾಯಿತು. ಆದರೆ ಮಲ್ಲಿಗೆ ಕೃಷಿಯ ಯಶಸ್ಸು ಅತಿ ಸಣ್ಣ ಭೂಮಿ ಹೊಂದಿದವರ ಬಾಳನ್ನು ಬೆಳಗಲು ಸಾಧ್ಯ ಎಂಬುದನ್ನು ತೋರಿಸಿಕೊಟ್ಟಿರುವುದರಿಂದ ಮಲ್ಲಿಗೆ ಕೃಷಿಯತ್ತ ರೈತರು ಸಹಜವಾಗಿ ಆಕರ್ಷಿತರಾಗುತ್ತಿದ್ದಾರೆ.

ಈ ಅಧ್ಯಯನಕ್ಕೆ ಮೂರು ಪೂರ್ವ ಕಲ್ಪನೆಗಳು ಆಧಾರವಾಗಿರುವುದು ಪ್ರಥಮ ಅಧ್ಯಾಯದಲ್ಲಿ ಉಲ್ಲೇಖಿಸಲಾಗಿದೆ: ಆರ್ಥಿಕ ಅನಿವಾರ್ಯತೆ ಮಲ್ಲಿಗೆ ಪುಷ್ಪೋದ್ಯಮವನ್ನು

ಲಾಭದಾಯಕವನ್ನಾಗಿಸಿದೆ ಎಂಬ ಮೊದಲನೆಯ ಪೂರ್ವ ಕಲ್ಪನೆಯನ್ನು ಸಮರ್ಥಿಸುವ ದತ್ತಾಂಶಗಳು ಸಾಕಷ್ಟು ಲಭ್ಯವಾಗಿದ್ದು, ಅವನ್ನು ಐದನೆಯ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಭೂ ಹಿಡುವಳಿಗಳ ಗಾತ್ರ ಕುಗ್ಗುತ್ತಾ ಹೋಗಿ ಯಾವುದೇ ಬೆಳೆಯು ಲಾಭಕರವಲ್ಲದ ಅಥವಾ ಆಹಾರ ಬೆಳೆಗಳನ್ನು ಬೆಳೆಯಲಾಗದ ಸ್ಥಿತಿಯಲ್ಲಿ ಬಡವರು ಮಲ್ಲಿಗೆ ಕೃಷಿ ಕೈಗೊಂಡು ತಮ್ಮ ಜೀವನ ಮಟ್ಟವನ್ನು ಎತ್ತರಿಸುತ್ತಿದ್ದಾರೆ. ಇದಕ್ಕೆ ಕ್ಷೇತ್ರಾಧ್ಯಯನದ ಫಲಿತಗಳು ಸಾಕ್ಷಿಯಾಗಿದೆ.

ಮಲ್ಲಿಗೆ ಕೃಷಿಯು ಹಿಡುವಳಿಗಳನ್ನು ಆರ್ಥಿಕವನ್ನಾಗಿಸುತ್ತದೆ ಎಂಬ ಎರಡನೆಯ ಪೂರ್ವ ಕಲ್ಪನೆಯೂ ಕೂಡ ಸಮರ್ಥಿಸಲ್ಪಟ್ಟಿದೆ. ಹತ್ತು ಸೆಂಟ್ಸ್ ಸ್ಥಳದಲ್ಲಿ ಮಲ್ಲಿಗೆ ಗಿಡ ನೆಟ್ಟು ವರ್ಷದಲ್ಲಿ ಒಂದು ಲಕ್ಷ ರೂಪಾಯಿಗಳಿಗಿಂತ ಹೆಚ್ಚು ಆದಾಯ ಗಳಿಸುವ ವಕ್ತೃಗಳು ಸಾಕಷ್ಟು ಮಂದಿ ಕ್ಷೇತ್ರಾಧ್ಯಯನ ಕಾಲದಲ್ಲಿ ದೊರೆತಿದ್ದಾರೆ. ಹಿಡುವಳಿಗಳ ಗಾತ್ರವು ಪಿತ್ರಾರ್ಜಿತ ಆಸ್ತಿಯ ಹಕ್ಕಿನಿಂದಾಗಿ ಸಣ್ಣದಾಗುತ್ತಾ ಹೋಗುತ್ತಿರುವಾಗ ಇತರ ಬೆಳೆಗಳಿಂದ ಅನಿವಾರ್ಯವಾಗಿ ಮಲ್ಲಿಗೆ ಕೃಷಿಯತ್ತ ಹೊರಳಿಕೊಂಡ ಉಡುಪಿ ಮತ್ತು ದಕ್ಷಿಣ ಕನ್ನಡ ಜಿಲ್ಲೆಗಳ ಅನೇಕ ರೈತರು ತಮ್ಮ ಅನಾರ್ಥಿಕ ಹಿಡುವಳಿಗಳು ಮಲ್ಲಿಗೆ ಕೃಷಿಯಿಂದಾಗಿ ಆರ್ಥಿಕ ಹಿಡುವಳಿಗಳಾದುದನ್ನು ಸಂದರ್ಶನ ಕಾಲದಲ್ಲಿ ಒಪ್ಪಿಕೊಂಡಿದ್ದಾರೆ. ಇವರ ಅನುಭವಗಳು ಮಲ್ಲಿಗೆ ಬೆಳೆಗೆ ಪೂರಕವಾದ ಮಣ್ಣು ಮತ್ತು ಹವಾಮಾನವನ್ನು ಹೊಂದಿರುವ, ಆದರೆ ಇನ್ನೂ ಮಲ್ಲಿಗೆ ಬೆಳೆಯದೆ ಅನಾರ್ಥಿಕ ಹಿಡುವಳಿಗಳಿಂದ (Non-Economic Holding) ಸಂಕಷ್ಟಕ್ಕೀಡಾಗುವ ರೈತರಿಗೆ ಭರವಸೆಯ ಹೊಸ ಬೆಳಕನ್ನು ಮೂಡಿಸುತ್ತದೆ.

ಮಲ್ಲಿಗೆ ಕೃಷಿಯು ಬೀಡಿ, ಗೇರು ಮತ್ತು ಹೆಂಚುಗಳಿಗೆ ಬದಲಿ ಉದ್ಯಮವಾಗಿದೆ ಎನ್ನುವುದು ಮೂರನೆಯ ಪೂರ್ವಕಲ್ಪನೆಯಾಗಿದೆ. ಹೆಂಚಿನ ಉದ್ಯಮ ದ.ಕ. ಜಿಲ್ಲೆಯಲ್ಲಿ ಅವಸಾನದ ಅಂಚಿನಲ್ಲಿದೆ. ತಾರಸಿ ಮನೆಗಳು ಹೆಚ್ಚು ಹೆಚ್ಚು ತಲೆ ಎತ್ತುತ್ತಿವೆ. ಆದುದರಿಂದ ಹೆಚ್ಚಿನ ಉದ್ದಿಮೆಯಲ್ಲಿ ಉದ್ಯೋಗಾವಕಾಶಗಳು ಕಡಿಮೆಯಾಗಿವೆ. ಗೇರು ಉದ್ದಿಮೆ ಎರಡೂ ಜಿಲ್ಲೆಗಳ ಲಾಭದಾಯಕ ಸ್ಥಿತಿಯಲ್ಲಿದೆ. ಆದರೆ ಅವು ಹೊಸ ಉದ್ಯೋಗಗಳನ್ನು ಸೃಷ್ಟಿಸುತ್ತಿಲ್ಲ. ಬೀಡಿ ಉದ್ದಿಮೆಯು ಮೊದಲಿನ ಆಕರ್ಷಣೆಯನ್ನು ಉಳಿಸಿಕೊಂಡಿಲ್ಲ. ಬೀಡಿ ಸೇದುವವರು ಸಿಗರೇಟು ಸೇದಲು ಆರಂಭಿಸಿರುವುದು ಮತ್ತು ಬೀಡಿ ನಿರ್ಯಾತ ಕಡಿಮೆಯಾಗಿರುವುದು ಇದಕ್ಕೆ ಕಾರಣಗಳು. ಬೀಡಿ ಕಟ್ಟುವವರು ಕ್ಷಯ, ಅರ್ಬುದ ಮುಂತಾದ ಕಾಯಿಲೆಗಳಿಗೆ ತುತ್ತಾಗುತ್ತಿರುವುದರಿಂದ ಬೀಡಿ ಕಟ್ಟುವವರು ಬೇರೆ ಕ್ಷೇತ್ರಗಳಲ್ಲಿ ಬದುಕು ಕಂಡುಕೊಳ್ಳಲು ಯತ್ನಿಸುತ್ತಿದ್ದಾರೆ. ಮಲ್ಲಿಗೆ ಕೃಷಿಯನ್ನು ಗೃಹಕೃತ್ಯಗಳಿಗೆ ತೊಂದರೆಯಾಗದಂತೆ ನಡೆಸಲು ಸಾಧ್ಯವಾಗುತ್ತಿರುವುದು; ಮಲ್ಲಿಗೆ ಕೃಷಿಯಿಂದ ಆರೋಗ್ಯಕ್ಕೆ ಯಾವುದೇ ಹಾನಿಯಾಗದಿರುವುದು ಮತ್ತು ಮಲ್ಲಿಗೆ ಬೆಳೆಯ ಪೂರ್ಣ ಆದಾಯ ಬೆಳೆಗಾರರಿಗೆ ದಕ್ಕುವುದು ಮಲ್ಲಿಗೆ ಕೃಷಿಯನ್ನು ಲಾಭದಾಯಕ ಬದಲಿ ಉದ್ಯಮವನ್ನಾಗಿಸಿದೆ.

ಮಲ್ಲಿಗೆ ಉತ್ಪಾದನೆ ಮತ್ತು ಮಾರಾಟಕ್ಕೆ ಸಂಬಂಧಿಸಿದ ಸಮಸ್ತ ಸಮಸ್ಯೆಗಳನ್ನು ಕಂಡು ಹಿಡಿಯುವುದು ಮತ್ತು ಅವುಗಳಿಗೆ ಸೂಕ್ತ ಪರಿಹಾರಗಳನ್ನು ಸೂಚಿಸುವುದು ಪ್ರಸಕ್ತ ಅಧ್ಯಯನದ ಪ್ರಮುಖ ಉದ್ದೇಶವಾಗಿರುತ್ತದೆ. ಅದನ್ನು ಏಳನೆಯ ಅಧ್ಯಾಯದಲ್ಲಿ ಮಾಡಲಾಗಿದೆ. ಪ್ರಸಕ್ತ ಅಧ್ಯಯನದ ಸಾರವನ್ನು ಹೀಗೆ ಸಂಚಯಿಸಬಹುದು.

- ಮಲ್ಲಿಗೆ ಬೆಳೆಗಾರರಿಗೆ ವೈಜ್ಞಾನಿಕ ಶಿಕ್ಷಣ ಮತ್ತು ಸಮರ್ಪಕ ತರಬೇತಿ ಇಲ್ಲದ ಕಾರಣ ಅವರು ನಿರೀಕ್ಷಿತ ಇಳುವರಿ ಪಡೆಯುತ್ತಿಲ್ಲ. ಪರಿಣಾಮವಾಗಿ ಅವರು ನಿಜವಾಗಿ ಪಡೆಯಬೇಕಿರುವುದಕ್ಕಿಂತ ಕಡಿಮೆ ಆದಾಯ ಪಡೆಯುತ್ತಿದ್ದಾರೆ. ಈ ಸಮಸ್ಯೆಯನ್ನು ಪರಿಹರಿಸಿ ಅವರ ಜೀವನ ಮಟ್ಟವನ್ನು ಎತ್ತರಿಸಬೇಕಾದರೆ ಮಲ್ಲಿಗೆ ಬೆಳೆಗಾರರಿಗೆ ವೈಜ್ಞಾನಿಕ ಶಿಕ್ಷಣ ಮತ್ತು ತರಬೇತಿಯನ್ನು ನೀಡಬೇಕು.

- ಮಲ್ಲಿಗೆ ಬೆಳೆಗೆ ಸರಿಯಾದ ನೀರಾವರಿ ವ್ಯವಸ್ಥೆ ರೂಪುಗೊಂಡಿಲ್ಲ. ಬಹುತೇಕ ಬೆಳೆಗಾರರು ಬಾವಿ ನೀರನ್ನು ಅವಲಂಬಿಸಿದ್ದಾರೆ. ಅನೇಕರು ನಳ್ಳಿ ನೀರನ್ನು ಬಳಸುತ್ತಿದ್ದಾರೆ. ಬಾವಿಗಳು ಬೇಸಿಗೆಯಲ್ಲಿ ಬತ್ತಿ ಹೋಗುತ್ತವೆ. ಸಾಕಷ್ಟು ನಳ್ಳಿ ನೀರನ್ನು ಬೇಸಿಗೆಯಲ್ಲಿ ಒದಗಿಸಲು ಸ್ಥಳೀಯ ಆಡಳಿತದಿಂದ ಸಾಧ್ಯವಾಗುತ್ತಿಲ್ಲ. ಅಲ್ಲದೆ, ನಳ್ಳಿ ನೀರನ್ನು ಕುಡಿಯುವ ಮತ್ತು ಗೃಹ ಬಳಕೆಯ ಉದ್ದೇಶಗಳಿಗಾಗಿ ಪೂರೈಕೆ ಮಾಡಲಾಗುತ್ತದೆಯೇ ಹೊರತು ಕೃಷಿ ಬಳಕೆಗಾಗಿ ಅಲ್ಲ. ನಳ್ಳಿ ನೀರು ಪೋಲಾಗುವುದನ್ನು ಹನಿ ನೀರಾವರಿ ವ್ಯವಸ್ಥೆಯಿಂದ ತಡೆಗಟ್ಟಬಹುದು. ಈ ಬಗ್ಗೆ ಸ್ಥಳೀಯ ಆಡಳಿತವು ಕ್ರಮ ಕೈಗೊಳ್ಳಬೇಕಾಗಿದೆ.

- ಮಲ್ಲಿಗೆ ಬೆಳೆಗಾರರು ಕೂಲಿಕಾರರನ್ನು ನೇಮಿಸಿದರೆ ಅವರ ಆದಾಯ ಕುಂಠಿತವಾಗುತ್ತದೆ. ವಸ್ತುಶಃ ಮಲ್ಲಿಗೆ ಕೃಷಿಯು ಒಂದು ಪುಟ್ಟ ಉದ್ದಿಮೆಯಾಗಿರುವುದರಿಂದ (Tiny Business) ಅದರಲ್ಲಿ ಕೂಲಿಕಾರರನ್ನು ನೇಮಿಸಬೇಕಾದ ಅಗತ್ಯವಿರುವುದಿಲ್ಲ. ಶ್ರಮ ವಿಭಜನೆಯ ಆಧಾರದಲ್ಲಿ ಕುಟುಂಬವೊಂದು ಸುಲಲಿತವಾಗಿ ನಡೆಸಿಕೊಂಡು ಹೋಗಬಹುದಾದ ಉದ್ದಿಮೆಯಿದು. 'ಸಣ್ಣದು ಸುಂದರವಾದುದು' ಎಂದು ಜರ್ಮನ್ ಅರ್ಥಶಾಸ್ತ್ರಜ್ಞ ಶುಮಾಕರನ ಹೇಳಿರುವುದು ಮಲ್ಲಿಗೆ ಕೃಷಿಯನ್ನೇ ಉದ್ದೇಶಿಸಿ ಇರಬಹುದು ಎಂಬ ಭಾವ ಮೂಡುವ ಹಾಗೆ ಇದು ಹಿಡುವಳಿದಾರರಿಂದ ಯಶಸ್ವಿಯಾಗಿ ನಡೆಸಲ್ಪಡುವ ಉದ್ದಿಮೆಯಾಗಿದೆ.

- ಮಲ್ಲಿಗೆಯನ್ನು ಗಿಡಗಳಿಂದ ಸಂಗ್ರಹಿಸಿ ಮಾಲೆ ಮಾಡಿ ತಕ್ಷಣ ಮಾರಾಟ ಮಾಡಬೇಕಿರುವುದರಿಂದ ಬೇಡಿಕೆ ಕಡಿಮೆ ಇರುವ ಕಾಲದಲ್ಲಿ ಬೆಳೆಗಾರರು ನಷ್ಟ ಅನುಭವಿಸಬೇಕಾಗುತ್ತದೆ. ಮಲ್ಲಿಗೆಯು ಒಂದು ಅಲ್ಪಾಯುಷಿ ಸರಕು. ಅದನ್ನು ಸರಿಯಾದ ಬೇಡಿಕೆ ಬರುವವರೆಗೆ ಕೆಡದಂತೆ ಕಾಪಾಡುವುದು ಮಕ್ಕಳಾಟವಲ್ಲ. ಅದಕ್ಕೆ ಸೂಕ್ತವಾದ ಶೀತಲೀಕರಣ ಸೌಲಭ್ಯದ ನಿರ್ಮಾಣವಾಗಬೇಕಿದೆ. ಸ್ಥಳೀಯ ಆಡಳಿತವು ಕಡಿಮೆ ಖರ್ಚಿನಲ್ಲಿ ಶೀತಲೀಕರಣ ವ್ಯವಸ್ಥೆಯನ್ನು ನಿರ್ಮಿಸಿದರೆ ಮಲ್ಲಿಗೆ ಬೆಳೆಗಾರರ ಗಳಿಕೆ ಇನ್ನೂ ಅಧಿಕವಾಗಲಿದೆ.
- ಮಲ್ಲಿಗೆ ಬೆಳೆಗಾರರಲ್ಲಿ ಒಗ್ಗಟ್ಟು ಇಲ್ಲ. ಇದಕ್ಕೆ ಬೆಳೆಗಾರರು ಜಾತಿ ಪದ್ಧತಿಗೆ ಜೋತು ಬಿದ್ದಿರುವುದು ಕಾರಣವಾಗಿದೆ. ಜಾತಿ ವ್ಯವಸ್ಥೆಯು ಭಾರತವನ್ನು ಒಂದು ಹಿಂದುಳಿದ ಆರ್ಥಿಕ ವ್ಯವಸ್ಥೆಯನ್ನಾಗಿ ಮಾಡಿರುವುದನ್ನು ೧೯೬೦ ರ ದಶಕದಲ್ಲಿ ಗುನ್ನಾರ್ ಮಿರ್ಡಾಲ್ ಪ್ರಕಟಿಸಿದ ಏಶಿಯನ್ ಡ್ರಾಮಾ ಎಂಬ ಕೃತಿ ಸವಿವರವಾಗಿ ತಿಳಿಸುತ್ತದೆ. ಈಗಲೂ ಭಾರತದ ಆರ್ಥಿಕಾಭಿವೃದ್ಧಿಗೆ ಅಡ್ಡಿಗಾಲು ಎನಿಸಿರುವ ಪ್ರಬಲವಾದ ಸಾಮಾಜಿಕ ಸಂಸ್ಥೆ ಎಂದರೆ ಅದು ಜಾತಿಪದ್ಧತಿ. ಇದನ್ನು ಮೀರಿ ಮಲ್ಲಿಗೆ ಬೆಳೆಗಾರರು ಒಂದು ಒಕ್ಕೂಟವನ್ನು ರಚಿಸಲು ಸಾಧ್ಯವಾದರೆ ಅವರ ಚೌಕಾಶಿ ಸಾಮರ್ಥ್ಯ ಅಧಿಕವಾಗುತ್ತದೆ. ಮಾರಾಟಗಾರರು ಬೆಳೆಗಾರರನ್ನು ಶೋಷಿಸುವುದು ತಪ್ಪುತ್ತದೆ.
- ಮಲ್ಲಿಗೆ ಬೆಳೆಗಾರರಿಗೆ ವಾಣಿಜ್ಯ ಬ್ಯಾಂಕುಗಳು ಮತ್ತು ಸಹಕಾರಿ ಸಂಘಗಳು ಕಡಿಮೆ ಬಡ್ಡಿಯ ದರದಲ್ಲಿ ಸಾಲವನ್ನು ನೀಡಿದರೆ ಅವರು ಬೆಳೆ ಪ್ರದೇಶವನ್ನು ತಮ್ಮ ಮಿತಿಯೊಳಗೆ ವಿಸ್ತರಿಸಿ, ಈಗಿನದಕ್ಕಿಂತ ಹೆಚ್ಚು ಆದಾಯವನ್ನು ಪಡೆಯಲು ಸಾಧ್ಯವಿದೆ. ಸ್ವಸಹಾಯ ಗುಂಪುಗಳನ್ನು ಹೆಚ್ಚು ಬಲಪಡಿಸುವ ಮೂಲಕ ಮಲ್ಲಿಗೆ ಬೆಳೆಗಾರರ ಹಣಕಾಸು ಸಂಬಂಧೀ ಸಮಸ್ಯೆಗಳಿಗೆ ಪರಿಹಾರವನ್ನು ಕಂಡುಕೊಳ್ಳಬಹುದು.

ಮಲ್ಲಿಗೆ ಮಾರಾಟಗಾರರ ಸಮಸ್ಯೆಗಳನ್ನು ವಿಶ್ಲೇಷಿಸಿ ಪ್ರಸಕ್ತ ಅಧ್ಯಯನದಲ್ಲಿ ಪರಿಹಾರ ಕಂಡುಕೊಳ್ಳಲಾಗಿದೆ:

- ಮಲ್ಲಿಗೆ ಮಾರಾಟಗಾರರು ಬೇಡಿಕೆಯ ಅನಿಶ್ಚಿತತೆಯೊಡನೆ ಪೂರೈಕೆಯ ಅನಿಶ್ಚಿತತೆಯನ್ನು ಕೂಡ ಎದುರಿಸುತ್ತಿದ್ದಾರೆ. ಬೇಡಿಕೆಯ ಅನಿಶ್ಚಿತತೆಯನ್ನು ಕಡಿಮೆ ಮಾಡಿಕೊಳ್ಳುವ ಉದ್ದೇಶದಿಂದ ಮಾರಾಟಗಾರರು ಖಾಯಂ ಗ್ರಾಹಕರನ್ನು

ಕಂಡುಕೊಂಡಿದ್ದಾರೆ. ಪೂರೈಕೆಯ ಅನಿಶ್ಚಿತತೆಯನ್ನು ಹೋಗಲಾಡಿಸಲು ಮಾರಾಟಗಾರರ ಪುಷ್ಪ ಸಂರಂಕ್ಷಣಾ ಶೀತಲ ಗೃಹಗಳ ನಿರ್ಮಾಣವಾಗಬೇಕೆಂದು ಬಯಸುತ್ತಾರೆ. ಇದನ್ನು ಸ್ಥಳೀಯ ಆಡಳಿತ ನಿರ್ಮಾಣ ಮಾಡಿಕೊಟ್ಟು ಪುಷ್ಪ ಮಾರಾಟಗಾರರಿಗೆ ಕಡಿಮೆ ಬಾಡಿಗೆಯಲ್ಲಿ ನೀಡಬೇಕಾಗಿದೆ. ಈ ಬಗ್ಗೆ ಯಾವುದೇ ಮಾರಾಟ ಕೇಂದ್ರದ ಸ್ಥಳೀಯ ಆಡಳಿತ ಈವರೆಗೆ ಗಮನ ಹರಿಸಿಲ್ಲ.

- ಮಲ್ಲಿಗೆ ಮಾರಾಟಗಾರರಿಗೆ ಅನೇಕ ಕಡೆ ನಿರ್ದಿಷ್ಟ ಮಾರಾಟ ಕೇಂದ್ರಗಳಿಲ್ಲ. ಸೂರಿಲ್ಲದ ಬೀದಿಯ ಬದಿಯಲ್ಲಿ ಪುಷ್ಪ ಮಾರಾಟ ಮಾಡಿ ಜೀವನ ನಿರ್ವಹಣೆ ಮಾಡಬೇಕಿರುವ ಚಿಲ್ಲರೆ ಮಾರಾಟಗಾರರು ರೋಗ ರುಜಿನಗಳಿಗೆ ತುತ್ತಾಗುತ್ತಿದ್ದಾರೆ. ಹೊರ ಊರುಗಳಿಂದ ದಿಢೀರನೆ ಅವತರಿಸುವ ಹೂ ಮಾರಾಟಗಾರರು ಸ್ಥಳೀಯ ಮಾರಾಟಗಾರರಿಗೆ ತೀವ್ರ ಪೈಪೋಟಿ ನೀಡಿ ತೀರಾ ಅನಿಶ್ಚಿತತೆಯ ವಾತಾವರಣವನ್ನು ಉಂಟುಮಾಡುತ್ತಿದ್ದಾರೆ. ಇಂತಹ ರಗಳೆಗಳು ಮಾಯವಾಗಲು ಸ್ಥಳೀಯ ಆಡಳಿತವು ಸುವ್ಯವಸ್ಥಿತ ಮಾರಾಟ ಕೇಂದ್ರವನ್ನು ಮಲ್ಲಿಗೆ ಮಾರಾಟಗಾರರಿಗೆ ನಿರ್ಮಿಸಿ ಕೊಡಬೇಕಿದೆ. ಪ್ರತೀ ತಾಲೂಕು ಕೇಂದ್ರಗಳಲ್ಲಿ ಮತ್ತು ನಗರ, ಉಪನಗರಗಳಲ್ಲಿ ಸುಸಜ್ಜಿತ ಪುಷ್ಪ ಮಾರುಕಟ್ಟೆಯ ನಿರ್ಮಾಣದಿಂದ ಮಾರಾಟಗಾರರ ಸಮಸ್ಯೆಗಳನ್ನು ಪರಿಹರಿಸಲು ಸ್ಥಳೀಯ ಆಡಳಿತವು ಯತ್ನಿಸಬೇಕಿದೆ. ಇದು ಸ್ಥಳೀಯ ಆಡಳಿತದ ವರಮಾನವನ್ನು ಹೆಚ್ಚಿಸಲಿದೆ.

- ಮಲ್ಲಿಗೆ ಬೆಳೆಗಾರರಂತೆ ಮಲ್ಲಿಗೆ ಮಾರಾಟಗಾರರು ಕೂಡ ಹಣಕಾಸಿನ ಸಮಸ್ಯೆ ಎದುರಿಸುತ್ತಾರೆ. ವಿಲೇವಾರಿ ಕಾಲದಲ್ಲಿ ಅಥವಾ ಸೂಕ್ತ ಸಂರಕ್ಷಣಾ ವ್ಯವಸ್ಥೆ ಇಲ್ಲದೆ ಹೂವುಗಳು ಹಾಳಾಗುವುದುಂಟು. ಎರಡು ಜಿಲ್ಲೆಗಳಲ್ಲಿ ಕೆಲವೊಮ್ಮೆ ಸಂಭವಿಸುವ ಕೋಮು ಗಲಬೆಗಳ ಕಾಲದಲ್ಲಿ ವ್ಯಾಪಾರವಿಲ್ಲದೆ ಮಾರಾಟಗಾರರು ನಷ್ಟ ಅನುಭವಿಸುತ್ತಾರೆ. ಬೇಡಿಕೆ ಇಲ್ಲದಿರುವಾಗಲೂ ಪೂರೈಕೆ ಇದ್ದೇ ಇರುತ್ತದೆ. ಅಂತಹ ಸಂದರ್ಭಗಳಲ್ಲಿ ಪೂರೈಕೆದಾರರಿಗೆ ಮಾರಾಟಗಾರರು ಹಣ ನೀಡುವುದು ತಪ್ಪುವುದಿಲ್ಲ. ಇಂತಹ ಸಂದರ್ಭಗಳ ನಿಭಾವಣೆಗೆ ಕಡಿಮೆ ಬಡ್ಡಿಯ ದರದಲ್ಲಿ ಹಣಕಾಸು ನೆರವು ಲಭ್ಯವಾಗಬೇಕೆಂದು ಮಾರಾಟಗಾರರು ಬಯಸುತ್ತಾರೆ.

- ಮಾರಾಟಗಾರರ ನಡುವೆ ನಡೆಯುವ ಅನಗತ್ಯ ಪೈಪೋಟಿ ಮತ್ತು ಶೀತಲ ಸಮರವನ್ನು (Cold War) ತಪ್ಪಿಸಲು ಮಲ್ಲಿಗೆ ಮಾರಾಟಗಾರರ ಒಕ್ಕೂಟವೊಂದನ್ನು ನಿರ್ಮಿಸುವ ಅಗತ್ಯವಿದೆ. ಹಾಗೆಯೇ ರಾಜ್ಯ ಮಟ್ಟದಲ್ಲಿ ಮಲ್ಲಿಗೆ ಕೃಷಿಯ ಅಭಿವೃದ್ಧಿಗಾಗಿ ಮಲ್ಲಿಗೆ ಮಂಡಳಿಯೊಂದನ್ನು ನಿರ್ಮಿಸಿ ಬೆಳೆಗಾರರ ಮತ್ತು

ಮಾರಾಟಗಾರರ ಸಮಸ್ಯೆಗಳನ್ನು ಪರಿಹರಿಸಲು ರಾಜ್ಯ ಸರಕಾರವು ಯತ್ನಿಸಬೇಕಿದೆ.

## ೮.೨ ಭವಿಷ್ಯಕ್ಕೊಂದು ದಿಕ್ಸೂಚಿ

ಕರಾವಳಿ ಕರ್ನಾಟಕದ ಎರಡು ಜಿಲ್ಲೆಗಳು ಜಾಗತೀಕರಣದ ಕಬಂಧ ಬಾಹುವಿಗೆ ಸಿಲುಕಿ ತಮ್ಮ ಆರ್ಥಿಕತೆಯ ಮೂಲ ಸ್ವರೂಪವನ್ನು ಕಳಕೊಳ್ಳುತ್ತಿವೆ. ಕ್ರಿ.ಶ. ೧೮ನೆಯ ಶತಮಾನದವರೆಗೂ ಇವೆರಡು ಜಿಲ್ಲೆಗಳಲ್ಲಿ ಭತ್ತವು ಪ್ರಧಾನ ಬೆಳೆಯಾಗಿತ್ತು. ಗ್ರೀಕರು, ಅರಬ್ಬರು ಮತ್ತು ಯುರೋಪಿಯನ್ನರು ಅಕ್ಕಿ ಮತ್ತು ಸಾಂಬಾರ ಜೀನಸುಗಳಿಗಾಗಿ ಇವೆರಡು ಜಿಲ್ಲೆಗಳನ್ನು ಅವಲಂಬಿಸುತ್ತಿದ್ದರು. ಅಕ್ಕಿ ವ್ಯಾಪಾರದ ಲಾಭವನ್ನು ಅರಬ ವರ್ತಕರು ಕ್ರಿ.ಶ. ಒಂದನೆಯ ಸಹಸ್ರಮಾನದ ಆದಿ ಭಾಗದಲ್ಲೇ ಅರಿತಿದ್ದರು. ಕ್ರಿ.ಶ. ೧೮೯೯ ರಲ್ಲಿ ಕರಾವಳಿ ಕರ್ನಾಟಕವು ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪೆನಿಯ ಆಡಳಿತಕ್ಕೆ ಒಳಪಟ್ಟಿತು. ಇಂದಿನ ದ.ಕ, ಕಾಸರಗೋಡು, ಉಡುಪಿ ಮತ್ತು ಉತ್ತರಕನ್ನಡ ಜಿಲ್ಲೆಗಳನ್ನು ಒಟ್ಟಾಗಿ ಇಂಗ್ಲೀಷರು 'ಕೆನರಾ' ಎಂದು ಕರೆಯತೊಡಗಿದರು. ಕೆನರಾ ಜಿಲ್ಲೆಯ ಪ್ರಪ್ರಥಮ ಕಲೆಕ್ಟರ್ ಮನ್ರೋ ಈ ಪ್ರದೇಶದ ಭೌಗೋಳಿಕತೆ ಮತ್ತು ಹವಾಮಾನವನ್ನು ಅಧ್ಯಯನ ಮಾಡಿ ಕರಾವಳಿ ಕರ್ನಾಟಕವು ಕೈಗಾರಿಕೆಗಳಿಗೆ ಸೂಕ್ತ ಸ್ಥಳವಲ್ಲ ಎಂಬ ವೈಜ್ಞಾನಿಕ ಸತ್ಯವನ್ನು ಬಯಲು ಮಾಡಿದ್ದ. ಪರಿಸರ ತಜ್ಞರು ಈಗಲೂ ಅದನ್ನು ದೃಷ್ಟಾಂತ ಸಹಿತ ಸಮರ್ಥಿಸುತ್ತಿದ್ದಾರೆ.

ಇಪ್ಪತ್ತನೆಯ ಶತಮಾನದ ೧೯೮೦ರ ದಶಕದವರೆಗೆ ಅಡಿಕೆ ಬೆಳೆಗೆ ಎಲ್ಲಿಲ್ಲದ ಪ್ರಾಶಸ್ತ್ಯ ಕರಾವಳಿ ಕರ್ನಾಟಕದಲ್ಲಿ ಲಭ್ಯವಾಯಿತು. ಅಡಿಕೆಯ ಬೆಲೆಯ ನಾಗಾಲೋಟದ ಏರಿಕೆ ಇದಕ್ಕೆ ಬಹುಮುಖ್ಯ ಕಾರಣ. ಕರಾವಳಿ ಕರ್ನಾಟಕದಲ್ಲಿ ಅಲ್ಲಿಯವರೆಗೆ ನೀರಿನ ಲಭ್ಯತೆಯ ಆಧಾರದಲ್ಲಿ ವರ್ಷದಲ್ಲಿ ಮೂರು ಬಾರಿ ಭತ್ತ ಬೆಳೆಯಲು ಸಾಧ್ಯವಾಗುತ್ತಿತ್ತು. ಮಳೆಗಾಲದ ಭತ್ತದ ಬೆಳೆಯನ್ನು ಎಣೆಲು, ಚಳಿಗಾಲದ ಭತ್ತದ ಬೆಳೆಯನ್ನು ಸುಗ್ಗಿ ಮತ್ತು ಬೇಸಿಗೆಯ ಭತ್ತದ ಬೆಳೆಯನ್ನು ಕೊಳ್ಕೆ ಎಂದು ಕರೆಯಲಾಗುತ್ತಿತ್ತು. ಅಡಿಕೆ ಬೆಲೆ ಏರಿದಾಗ ಗದ್ದೆಗಳು ಅಡಿಕೆ ತೋಟಗಳಾಗತೊಡಗಿದವು. ಮಳೆ ನೀರನ್ನೇ ಅವಲಂಬಿಸಿ ಮಳೆಗಾಲದಲ್ಲಿ ಎಣೆಲು ಬೆಳೆಯುತ್ತಿದ್ದ ಕರಾವಳಿ ಜಿಲ್ಲೆಗಳ ಮಲೆನಾಡ ಪ್ರದೇಶಗಳಲ್ಲಿ ಕೃಷಿಕರು ಕಾಲಕ್ರಮೇಣ ರಬ್ಬರು ಬೆಳೆಯಲಾರಂಭಿಸಿದರು. ರಬ್ಬರಿಗೆ ಒಳ್ಳೆಯ ಬೆಲೆ ಬರತೊಡಗಿದಾಗ ಸುಗ್ಗಿ ಮತ್ತು ಕೊಳ್ಕೆ ಗದ್ದೆಗಳಲ್ಲಿ ರಬ್ಬರ್ ನೆಡತೊಡಗಿದರು. ಅಡಿಕೆ ಮತ್ತು ರಬ್ಬರ್ ಬೆಳೆಗಳಿಂದಾಗಿ ಕರಾವಳಿ ಕರ್ನಾಟಕದಲ್ಲಿ ಭತ್ತದ ಬೆಳೆ ಅವಸಾನದ ಅಂಚಿಗೆ ತಳ್ಳಲ್ಪಟ್ಟಿತು. ಇದರಿಂದಾಗಿ ಅಕ್ಕಿಯ ಬೆಲೆ ವಿಪರೀತ ಹೆಚ್ಚಾದದ್ದು ಒಂದು ಸಮಸ್ಯೆಯಾದರೆ ಅಂತರ್ಜಲ ಮಟ್ಟ ಕುಸಿತ ಇನ್ನೊಂದು ಅತಿ ಗಂಭೀರ ಸಮಸ್ಯೆಯಾಗಿ ಕರಾವಳಿ ಕರ್ನಾಟಕದಲ್ಲಿ ಜಲಕ್ಷಾಮ ಕಾಣಿಸಿಕೊಂಡಿತು. ಬೇಸಿಗೆಯ ಮೂರು ತಿಂಗಳುಗಳ ಕಾಲ ಕರಾವಳಿ ಕರ್ನಾಟಕದ

ಬಹುತೇಕ ಪ್ರದೇಶಗಳಲ್ಲಿ ಕುಡಿಯುವ ನೀರಿಗೂ ತತ್ವಾರವಿದೆ. ಆದರೆ ಈ ದುರಂತವನ್ನು ಸ್ಥಳೀಯ ಆಡಳಿತವಾಗಲೀ, ಸಮಸ್ಯೆಯಿಂದ ಬಳಲುವವರಾಗಲೀ ಗಂಭೀರವಾಗಿ ಪರಿಗಣಿಸಿಲ್ಲ.

ಕ್ರಿ.ಶ. ೧೯೯೧ರಲ್ಲಿ ವಿಶ್ವ ಆರ್ಥಿಕತೆಗೆ ಜಾಗತೀಕರಣವೆಂಬ ಪರಿಕಲ್ಪನೆ ಪರಿಚಯಿಸಲ್ಪಟ್ಟಿತು. ಜಾಗತೀಕರಣವನ್ನು ಸಸೂತ್ರಗೊಳಿಸಲೆಂದು ಕ್ರಿ.ಶ. ೧೯೯೫ ರಲ್ಲಿ ವಿಶ್ವ ವ್ಯಾಪಾರ ಸಂಸ್ಥೆಯನ್ನು (WTO) ಹುಟ್ಟು ಹಾಕಲಾಯಿತು. ಅದರ ಒಪ್ಪಂದಗಳಲ್ಲಿ ಕೃಷಿಗೆ ಯಾವ ಮಹತ್ವವೂ ಇಲ್ಲ. ಕೈಗಾರಿಕೆ ಮತ್ತು ಸೇವಾ ಕ್ಷೇತ್ರಗಳ ಅನಿರ್ಬಂಧಿತ ವಿಸ್ತರಣೆ ಮತ್ತು ಮುಕ್ತ ವ್ಯಾಪಾರದಿಂದ ಆರ್ಥಿಕಾಭಿವೃದ್ಧಿ ಸಾಧಿಸಬೇಕೆನ್ನುವುದು ವಿಶ್ವ ವ್ಯಾಪಾರ ಒಕ್ಕೂಟದ ಒಪ್ಪಂದಗಳ ತಿರುಳು. ಅದರ ಟ್ರಿಪ್ಸ್ (TRIPS) ವಿಧಿನಿಯಮಗಳು ಬಡರಾಷ್ಟ್ರಗಳ ಕೃಷಿರಂಗವನ್ನು ಸಂಪೂರ್ಣವಾಗಿ ನಾಶಪಡಿಸಲೆಂದೇ ರೂಪಿತಗೊಂಡಿದೆ.

ಕೃಷಿ ಪ್ರಧಾನ ಬಡ ರಾಷ್ಟ್ರಗಳ ಮೂಲ ಕ್ಷೇತ್ರವನ್ನು (Primary Sector) ಸಂಪೂರ್ಣವಾಗಿ ನಾಶಮಾಡಿ ಅವು ಆಹಾರಕ್ಕಾಗಿ ಅಮೇರಿಕಾವನ್ನು ಅವಲಂಬಿಸುವಂತಾಗಬೇಕು ಎನ್ನುವ ಗುಪ್ತ ಕಾರ್ಯಸೂಚಿಯನ್ನು (Hidden Agenda) ಹೊಂದಿರುವ ಟ್ರಿಪ್ಸ್ ವಿಧಿ ನಿಯಮಗಳಿಂದಾಗಿ ಮತ್ತು ಅದರ ಪರಿಣಾಮವಾದ ಬೀಜ ಒಪ್ಪಂದದಿಂದಾಗಿ ಕುಲಾಂತರಿ ತಳಿಗಳನ್ನು ಭಾರತವು ಸೇರದಂತೆ ವಿಶ್ವದ ಎಲ್ಲಾ ರಾಷ್ಟ್ರಗಳಲ್ಲಿ ಅಮೇರಿಕಾದ ಬಹು ರಾಷ್ಟ್ರೀಯ ಸಂಸ್ಥೆಗಳು ಪರಿಚಯಿಸಿದವು. ಆ ತಳಿಗಳಾಗಲೀ, ಮಾನ್ಸೆಂಟೋದಂತಹ ಬಹು ರಾಷ್ಟ್ರೀಯ ಕಂಪೆನಿಗಳು ಪೂರೈಕೆ ಮಾಡಿದ ಬಿತ್ತನೆ ಬೀಜಗಳು ಸ್ಥಳೀಯ ಮಣ್ಣಿಗೆ ಮತ್ತು ಹವಾಮಾನಕ್ಕೆ ಒಗ್ಗಲಿಲ್ಲ. ರೈತರು ಆತ್ಮಹತ್ಯೆ ಮಾಡಿಕೊಳ್ಳಬೇಕಾದ ಪರಿಸ್ಥಿತಿಯನ್ನು ವಿಶ್ವ ವ್ಯಾಪಾರ ಒಕ್ಕೂಟದ ಒಪ್ಪಂದಗಳು ನಿರ್ಮಿಸಿಬಿಟ್ಟವು.

ಉಷ್ಣ ವಿದ್ಯುತ್ ಸ್ಥಾವರ ರಚನೆಗಾಗಿ ನಂದಿಕೂರಲ್ಲಿ ಸ್ಥಳ ಪರಿಶೀಲನೆ ನಡೆದು ಜಾಗ ಬಿಟ್ಟು ಕೊಡಬೇಕೆಂದು ರೈತರಿಗೆ ನೋಟೀಸು ನೀಡಲಾಯಿತು. ಮಂಗಳೂರಿನ ಎಂಆರ್‌ಪಿಎಲ್ ಸಂಸ್ಥೆ ಉಂಟುಮಾಡುತ್ತಿರುವ ವಾಯುಮಾಲಿನ್ಯ ಮತ್ತು ಜಲಮಾಲಿನ್ಯ ಸಮಸ್ಯೆಗಳು ಅದರ ಕಾರ್ಯಗಳಿಂದ ಮತ್ಸ್ಯಕ್ಷಾಮ(Fish Famine) ಉಂಟಾಗಿ ಮೀನುಗಾರರು ಪಡುತ್ತಿರುವ ಸಂಕಟವೆಂಬ ಗಾಯದ ಮೇಲೆ ಉಷ್ಣ ವಿದ್ಯುತ್ ಸ್ಥಾವರ ರಚನೆ ಎಂಬ ಬರೆ ಎಳೆಯಲಾಯಿತು. ಉಷ್ಣ ವಿದ್ಯುತ್ ಸ್ಥಾವರವು ವಿದ್ಯುತ್ ಉತ್ಪಾದನೆಗೆ ಕಲ್ಲಿದ್ದಲನ್ನು ಬಳಸುತ್ತದೆ. ವಿದ್ಯುತ್ ಉತ್ಪಾದನೆಯ ಪ್ರಕ್ರಿಯೆಯಲ್ಲಿ ಹುಟ್ಟಿಕೊಳ್ಳುವ ಹಾರು ಬೂದಿಯು ಬೆಳೆಗಳ ಮತ್ತು ಸಸ್ಯ ಸಂಕುಲಗಳ ಬೆಳವಣಿಗೆಯನ್ನು ಮುರುಟಿಸಿ ಪಶ್ಚಿಮ ಘಟ್ಟದ ಅರಣ್ಯಗಳನ್ನು ನಿರ್ಮೂಲನ ಮಾಡುತ್ತದೆ. ಕರ್ನಾಟಕಕ್ಕೆ ನೀರು ಮತ್ತು ಬೆಳಕು

ನೀಡುವ ಕಾವೇರಿ, ತುಂಗೆ, ಭದ್ರೆ, ಹೇಮಾವತಿ, ಶರಾವತಿ, ಕಾಳಿ, ನೇತ್ರಾವತಿಯಂತಹ ನದಿಗಳ ತವರು ಮನೆ ಇದೇ ಪಶ್ಚಿಮ ಘಟ್ಟ. ಕರಾವಳಿ ಕರ್ನಾಟಕದಲ್ಲಿ ಎಲ್ಲೇ ಉಷ್ಣ ವಿದ್ಯುತ್ ಸ್ಥಾವರ ಸ್ಥಾಪನೆಯಾದರೂ ಇಡೀ ಕರ್ನಾಟಕ ಮರುಭೂಮಿಯಾಗಿ ಬಿಡುತ್ತದೆಂದು ಪರಿಸರ ತಜ್ಞರು ಹೇಳುತ್ತಿದ್ದರೂ ವಿಶ್ವ ವ್ಯಾಪಾರ ಒಕ್ಕೂಟದ ಒಪ್ಪಂದಗಳಿಗೆ ಸಹಿ ಹಾಕಿದ ಸರಕಾರ ರೈತರನ್ನು ಒಕ್ಕಲೆಬ್ಬಿಸುವ ದುಸ್ಸಾಹಸಕ್ಕೆ ಮುಂದಾಗಿದೆ.

ಈಗಿರುವ ಸಮಸ್ಯೆಗಳು ಸಾಲದೆಂಬಂತೆ ಕರಾವಳಿ ಕರ್ನಾಟಕದಲ್ಲಿ ವಿಶೇಷ ಆರ್ಥಿಕ ವಲಯವೊಂದನ್ನು (SEZ) ರೂಪಿಸಲು ಸರಕಾರ ಮುಂದಾಗಿದೆ. ವಿಶೇಷ ಆರ್ಥಿಕ ವಲಯ ನಿರ್ಮಿಸುವ ಕೈಗಾರಿಕೋದ್ಯಮಿಗಳ ವಸಾಹತುನಿಂದ (Industrial Colony) ಲಾಭ ಪಡೆಯುವುದು ವಿದೇಶೀ ಉದ್ದಿಮೆದಾರರು. ಅದಕ್ಕಾಗಿ ಮೂರು ಕಾಸಿನ ತಮ್ಮ ಜಮೀನನ್ನು ಮಾರಿ ಕಲೆ - ಸಂಸ್ಕೃತಿ ಮತ್ತು ಸುಖೀ ಜೀವನಕ್ಕೆ ಎರವಾಗಬೇಕಾದದ್ದು ಬಡ ರೈತರು. ಒಟ್ಟಿನಲ್ಲಿ ಜಾಗತೀಕರಣವು ಕರಾವಳಿ ಕರ್ನಾಟಕಕ್ಕೆ ವರವಾಗಿ ಒದಗಿ ಬಾರದೆ ಶಾಪವಾಗಿ ಪರಿಣಮಿಸಿರುವುದು ದೊಡ್ಡ ದುರಂತವೆನಿಸಿದೆ.

ಯಾವುದೇ ದೇಶದಲ್ಲಿ ಅಭಿವೃದ್ಧಿಗಾಗಿ ಬಹು ದೊಡ್ಡ ತ್ಯಾಗ ಮಾಡಬೇಕಾಗಿರುವುದು ಕೃಷಿ ವಲಯ. ಆರ್ಥಿಕತೆ ಅಭಿವೃದ್ಧಿ ಹೊಂದಿದಂತೆಲ್ಲಾ ಕೃಷಿ ವಲಯ ಪತನ ಮುಖಿಯಾಗುತ್ತದೆ. ನಗರೀಕರಣ ಮತ್ತು ಕೈಗಾರೀಕರಣಕ್ಕೆ ಬಲಿಯಾಗುವುದು ಕೃಷಿ ಭೂಮಿ. ನಗರೀಕರಣ ಮತ್ತು ಕೈಗಾರೀಕರಣ ಉಂಟು ಮಾಡುವ ವಾಯು, ಶಬ್ದ, ಮತ್ತು ಜಲ ಮಾಲಿನ್ಯಗಳಿಂದ ಅರಣ್ಯಗಳು ಮತ್ತು ಜೀವ ವೈವಿಧ್ಯ (Bio-diversity) ನಾಶವಾಗುತ್ತದೆ. ಸುಸ್ಥಿರ ಅಭಿವೃದ್ಧಿ (Sustainable development) ಎಂಬ ಪರಿಕಲ್ಪನೆ ಅರ್ಥಶಾಸ್ತ್ರಜ್ಞರ ಮನೋಭೂಮಿಕೆಯಲ್ಲಿದೆಯೇ ಹೊರತು ಅಸ್ತಿತ್ವದಲ್ಲಿಲ್ಲ. ಕೃಷಿ ಪ್ರಧಾನ ಹಿಂದುಳಿದ ರಾಷ್ಟ್ರಗಳಿಂದ ಪರಿಸರ ಸಹ್ಯ ಅಭಿವೃದ್ಧಿ ಸಾಧಿಸಲು ಸಾಧ್ಯವಾಗುತ್ತಿಲ್ಲ. ಆದರೆ ಕೃಷಿಯನ್ನು ನಾಶಗೊಳಿಸಿ ಸಾಧಿಸುವ ಪ್ರಗತಿಗೆ ದೀರ್ಘಾಯುಷ್ಯವಿಲ್ಲ. ಕೃಷಿಯನ್ನು ಬಲಿಷ್ಠಗೊಳಿಸಿ ಭಾರತವು ಜಾಗತೀಕರಣ ಒಡ್ಡಿರುವ ಸವಾಲುಗಳಿಗೆ ಎದೆಯೊಡ್ಡಿ ಪ್ರತ್ಯುತ್ತರ ನೀಡಬೇಕಿದೆ. ಅದಕ್ಕೆ ಲಾಭದಾಯಕವಾದ ಸಣ್ಣ ಪ್ರಮಾಣದ ಕೃಷಿಗೆ ಆದ್ಯತೆ ನೀಡಬೇಕಾಗಿದೆ. ಮಲ್ಲಿಗೆ ಕೃಷಿಯು ಮಹತ್ವ ಪಡಕೊಳ್ಳುವುದು ಈ ಸನ್ನಿವೇಶದಲ್ಲಿ.

ಮಲ್ಲಿಗೆ ಬೆಳೆಗಾರರು ಮತ್ತು ಮಾರಾಟಗಾರರು ಅನೇಕ ಸಮಸ್ಯೆಗಳನ್ನು ಎದುರಿಸುತ್ತಿದ್ದಾರೆ ಎನ್ನುವುದು ಅಧ್ಯಯನದಿಂದ ಕಂಡುಕೊಂಡ ಸತ್ಯ. ಮಲ್ಲಿಗೆ ಬೆಳೆಗಾರರೇ ಮಾರಾಟಗಾರರಾಗಿರುವಲ್ಲಿ ಲಾಭದ ಪ್ರಮಾಣ ಅಧಿಕವಾಗಿರುವುದು ಇನ್ನೊಂದು ವಾಸ್ತವ. ಹಾಗಾಗಿ ಮಲ್ಲಿಗೆ ಬೆಳೆಗಾರರೆಲ್ಲ ಮಾರಾಟಗಾರರಾಗುವಂತಹ ಪರಿಸ್ಥಿತಿ ನಿರ್ಮಾಣ ಮಾಡಬೇಕಾದ ಅಗತ್ಯವಿದೆ. ಮಲ್ಲಿಗೆ ಬೆಳೆಗಾರರ ಸಹಕಾರಿ ಸಂಘವೊಂದನ್ನು ಜಿಲ್ಲಾ

ಕೇಂದ್ರದಲ್ಲಿ ರಚಿಸಿ ಅವುಗಳ ಶಾಖೆಗಳನ್ನು ತಾಲೂಕು ಕೇಂದ್ರಗಳಲ್ಲಿ ಸ್ಥಾಪಿಸಿದರೆ ಮಧ್ಯವರ್ತಿಗಳು ಗಳಿಸುವ ಲಾಭದಲ್ಲಿ ಬಹುಪಾಲು ಬೆಳೆಗಾರರಿಗೆ ಸಿಗುವಂತೆ ಮಾಡಲು ಸಾಧ್ಯವಿದೆ.

ಅಧ್ಯಯನ ಕಾಲದಲ್ಲಿ ವಿಶೇಷವಾಗಿ ಗಮನ ಸೆಳೆದದ್ದು ಮಲ್ಲಿಗೆ ಕೃಷಿಯಲ್ಲಿ ಮುಡಿಪು ಚರ್ಚು ಸಾಧಿಸಿದ ಪ್ರಗತಿ. ಕ್ರೈಸ್ತ ಮಠಗಳ ವ್ಯವಸ್ಥೆಯಲ್ಲಿ ಪ್ರತಿಯೊಂದು ಆರಾಧನಾ ಕೇಂದ್ರವು ಭಕ್ತಾಧಿಗಳ ಕಾಣಿಕೆಗಾಗಿ ಕಾಯದೆ ತನ್ನ ಖರ್ಚಿಗೆ ಬೇಕಾಗುವ ಸಂಪನ್ಮೂಲವನ್ನು ಸ್ಥಳೀಯವಾಗಿ ಕ್ರೋಢೀಕರಿಸಬೇಕೆಂಬ ನಿಯಮವಿದೆ. ಮುಡಿಪು ಚರ್ಚು ಈ ನಿಯಮ ಪಾಲನೆ ಮಾಡಿರುವುದು ಮಾತ್ರವಲ್ಲ; ಮಲ್ಲಿಗೆ ಕೃಷಿಯನ್ನು ಹೇಗೆ ಲಾಭದಾಯಕವನ್ನಾಗಿ ಮಾಡಬಹುದು ಎಂಬುದನ್ನು ತೋರಿಸಿಕೊಟ್ಟಿದೆ. ಭೂಮಿ ಕಾಣಿಕೆ ಇಲ್ಲದ ಚರ್ಚು, ಮಸೀದಿ, ಮಂದಿರ, ಮಠಗಳು ಈ ಆದರ್ಶವನ್ನು ಪಾಲಿಸಲು ಸಾಧ್ಯವಿಲ್ಲ. ಆದರೆ ಬಹುತೇಕ ಚರ್ಚು, ಮಸೀದಿ, ಮಂದಿರ, ಮಠಗಳಿಗೆ ಸಾಕಷ್ಟು ಭೂಮಿ ಇದೆ. ಅಂತಹ ಆರಾಧನಾ ಕೇಂದ್ರಗಳು ಮುಡಿಪು ಚರ್ಚಿನ ಆದರ್ಶವನ್ನು ಪಾಲಿಸಲು ಮನಸ್ಸು ಮಾಡಬೇಕಿದೆ.

ಭವಿಷ್ಯದ ಇನ್ನೊಂದು ಸಾಧ್ಯತೆಯನ್ನು ಈ ಅಧ್ಯಯನವು ಗುರುತಿಸುತ್ತದೆ. ಕರಾವಳಿ ಮಲ್ಲಿಗೆಯ ರಾಜಧಾನಿ ಎನಿಸಿರುವ ಶಂಕರಪುರವು ಉಡುಪಿ ಜಿಲ್ಲೆಯಲ್ಲಿದೆ. ಉಡುಪಿ ಮತ್ತು ದ.ಕ. ಜಿಲ್ಲೆಗಳು ಉಷ್ಣ ಪ್ರದೇಶದಲ್ಲಿದ್ದು, ಜನರು ಕೆಲಸ ಮಾಡಲಿ, ಮಾಡದಿರಲಿ ಅವರ ದೇಹದಿಂದ ಬೇಸಿಗೆ ಕಾಲದಲ್ಲಿ ವಿಪರೀತ ಬೆವರು ಹರಿದು ಹೋಗುತ್ತದೆ. ಅದರ ದುರ್ಗಂಧ ನಿವಾರಣೆಗೆ ಇವೆರಡು ಜಿಲ್ಲೆಗಳ ಜನರು, ಅದರಲ್ಲೂ ಮುಖ್ಯವಾಗಿ ಮಹಿಳೆಯರು ನಾನಾ ಬಗೆಯ ಸುಗಂಧ ದ್ರವ್ಯಗಳನ್ನು ಬಳಸುತ್ತಾರೆ. ಇವು ಸ್ಥಳೀಯವಾಗಿ ಉತ್ಪಾದನೆಯಾದ ಸುಗಂಧ ದ್ರವ್ಯಗಳಲ್ಲದ ಕಾರಣ ಅವುಗಳ ಬೆಲೆ ತುಂಬಾ ಅಧಿಕವಾಗಿರುತ್ತದೆ. ಶಂಕರಪುರದಲ್ಲಿ ಸಾಕಷ್ಟು ಮಲ್ಲಿಗೆ ಬೆಳೆಯುವುದರಿಂದ ಉಡುಪಿಯಲ್ಲಿ ಒಂದು ಸುಗಂಧ ದ್ರವ್ಯ ಉತ್ಪಾದನಾ ಸ್ಥಾವರವನ್ನು (Perfume Production Unit) ಸ್ಥಾಪಿಸಬೇಕಿದೆ. ಇದರಿಂದಾಗಿ ಸ್ಥಳೀಯ ಅತ್ತರು ಕಡಿಮೆ ಬೆಲೆಗೆ ಕರಾವಳಿ ಜನರಿಗೆ ಸಿಗುವಂತಾಗುತ್ತದೆ. ಮಲ್ಲಿಗೆಯ ಬೇಡಿಕೆ ಹೆಚ್ಚಿ ಬೆಳೆಗಾರರ ಮತ್ತು ಮಾರಾಟಗಾರರ ಅದೃಷ್ಟ ಖುಲಾಯಿಸುತ್ತದೆ. ಮಲ್ಲಿಗೆಯ ಬೆಳೆ ವಿಸ್ತರಣಗೊಳ್ಳುತ್ತದೆ.

ದ.ಕ. ಮತ್ತು ಉಡುಪಿ ಜಿಲ್ಲೆಗಳಲ್ಲಿ ಕೃಷಿ ಯೋಗ್ಯವಾದ ಕೃಷಿ ಮಾಡದ ಭೂಮಿಯ ಪ್ರಮಾಣವು ದ.ಕ. ಜಿಲ್ಲೆಯಲ್ಲಿ ೩೧,೨೯೭ ಹೆಕ್ಟೇರುಗಳು ಮತ್ತು ಉಡುಪಿ ಜಿಲ್ಲೆಯಲ್ಲಿ ೩೬,೧೬೦ ಹೆಕ್ಟೇರುಗಳು ಎಂದು ಸರಕಾರದ ಅಂಕಿಅಂಶಗಳು ತಿಳಿಸುತ್ತವೆ. ಈ ಭೂಮಿ ಎಲ್ಲಿದೆ ಎಂದು ಪತ್ತೆ ಹಚ್ಚಿ ಅದು ಮಲ್ಲಿಗೆ ಕೃಷಿಗೆ ಯೋಗ್ಯವೇ ಎಂಬ ಪರೀಕ್ಷೆ ನಡೆಸಬೇಕಿದೆ. ಯೋಗ್ಯವೆಂದಾದರೆ ಅಂತಹ ಭೂಮಿಯ ಆಸುಪಾಸಿನ ರೈತರಿಗೆ ಆ ಭೂಮಿಯನ್ನು

ಭೋಗ್ಯಕ್ಕೆ ನೀಡಿ ಸರಕಾರವು ಮಲ್ಲಿಗೆ ಬೆಳೆಯನ್ನು ಉತ್ತೇಜಿಸಬೇಕಿದೆ. ಇದಕ್ಕೆ ಬೇಕಿರುವುದು ಮನಸ್ಸು ಮತ್ತು ಪ್ರಾಮಾಣಿಕತೆ ಮಾತ್ರ.

ಸ್ವಸಹಾಯ ಗುಂಪುಗಳು ಮಲ್ಲಿಗೆ ಬೆಳೆಯಲು ಮತ್ತು ಅವೇ ಮಾರಾಟಗಾರರಾಗಿ ಪಾತ್ರ ನಿರ್ವಹಿಸಲು ಸಾಧ್ಯವಿದೆ. ಧರ್ಮಸ್ಥಳದ ಪ್ರಗತಿ ಬಂಧು ಯೋಜನೆಯು ಮಲ್ಲಿಗೆ ಬೆಳೆಗೆ ಉತ್ತೇಜನ ನೀಡುವ ಕಾರ್ಯಸೂಚಿಯನ್ನು ಹೊಂದಿದೆ. ಮಲ್ಲಿಗೆ ಬೆಳೆಗಾರರು ಸ್ವಸಹಾಯ ಗುಂಪುಗಳನ್ನು ರಚಿಸಿಕೊಂಡರೆ ತಮ್ಮ ಸಮಸ್ಯೆಗಳನ್ನು ಪರಿಹರಿಸಲು ಸಾಧ್ಯವಿದೆ. ಸ್ವಸಹಾಯ ಗುಂಪುಗಳ ಹನಿ ಹಣಕಾಸು ಯೋಜನೆಯು ಗ್ರಾಮೀಣ ಭಾರತದ ಉಳಿತಾಯಗಳನ್ನು ಹೆಚ್ಚಿಸುವಲ್ಲಿ ಸಫಲವಾಗಿರುವುದನ್ನು ಸಮೀಕ್ಷೆಗಳು ತಿಳಿಸುತ್ತವೆ. ಈ ಹಿನ್ನಲೆಯಲ್ಲಿ ಮಲ್ಲಿಗೆ ಕೃಷಿಗೆ ಸ್ವಸಹಾಯ ಗುಂಪುಗಳ ಪ್ರವೇಶವನ್ನು ಸ್ವಾಗತಿಸಬೇಕಿದೆ.

---------------

## ಅನುಬಂಧ-೧

# ಪುಷ್ಪೋದ್ಯಮ

## ಮಲ್ಲಿಗೆ ಕೃಷಿ - ವರ್ತಮಾನ ಮತ್ತು ಭವಿಷ್ಯ
## ದಕ್ಷಿಣ ಕನ್ನಡ ಜಿಲ್ಲೆಯ ಒಂದು ಅಧ್ಯಯನ

## ಬೆಳೆಗಾರರ ಪ್ರಶ್ನಾವಳಿ

1. ಮಾಹಿತಿದಾರನ ಹೆಸರು ಮತ್ತು ವಿಳಾಸ :
2. ವಯಸ್ಸು :
3. ಧರ್ಮ :
4. ಶಿಕ್ಷಣ :
5. ಪ್ರಧಾನ ವೃತ್ತಿ :
6. ಕುಟುಂಬದ ಸದಸ್ಯರ ಸಂಖ್ಯೆ ಮತ್ತು ಪ್ರಾಯ :

| ಪ್ರಾಯ | 20ಕ್ಕಿಂತ ಕಡಿಮೆ | 21-30 | 31-40 | 41-50 | 51-60 | 61-70 | 70 ಅಧಿಕ | ಒಟ್ಟು |
|---|---|---|---|---|---|---|---|---|
| ಗಂಡು | | | | | | | | |
| ಹೆಣ್ಣು | | | | | | | | |
| ಒಟ್ಟು | | | | | | | | |

7. ಕುಟುಂಬದ ದುಡಿಯುವ ಜನರು : ಗಂಡಸರು: ಹೆಂಗಸರು : ಮಕ್ಕಳು :
8. ಕುಟುಂಬ ಸದಸ್ಯರ ಶೈಕ್ಷಣಿಕ ಮಟ್ಟ :-

| ಶಿಕ್ಷಣ | ಅನಕ್ಷರಸ್ಥರು | ೧ರಿಂದ 5 | ೬ರಿಂದ 8 | ೯ರಿಂದ 10 | ಪಿ.ಯು.ಸಿ | ಪದವಿ | ಉನ್ನತ | ಇತರ |
|---|---|---|---|---|---|---|---|---|
| ಸಂಖ್ಯೆ | | | | | | | | |

9. ಒಟ್ಟು ಭೂ ಹಿಡುವಳಿಯ ವಿಸ್ತೀರ್ಣ :

10. ಭೂಮಿಯ ಒಡೆತನದ ಸ್ವರೂಪ :

| ಪಿತ್ರಾರ್ಜಿತ | ಸ್ವಯಾರ್ಜಿತ | ಸರಕಾರಿ | ಗೇಣಿ ಭೂಮಿ | ಅಕ್ರಮ ಸಕ್ರಮ | ಇತರ |
|---|---|---|---|---|---|
| | | | | | |

11. ಮಲ್ಲಿಗೆ ಬೆಳೆ ಪ್ರದೇಶದ ವಿಸ್ತೀರ್ಣ : ಗಿಡಗಳ ಸಂಖ್ಯೆ :
ಗಿಡಗಳ ಪ್ರಾಯ :

12. ಮಲ್ಲಿಗೆ ಬೆಳೆಯಲ್ಲಿ ತೊಡಗಿಸಿಕೊಳ್ಳುವವರ ಸಂಖ್ಯೆ :
ಗಂಡಸರು : ಹೆಂಗಸರು : ಗಂಡು ಮಕ್ಕಳು :
ಹೆಣ್ಣು ಮಕ್ಕಳು :

13. ಮಲ್ಲಿಗೆ ಬೆಳೆಯಲ್ಲಿ ತೊಡಗಿಸಿಕೊಳ್ಳುವ ಕೂಲಿ ಕಾರ್ಮಿಕರ ಸಂಖ್ಯೆ :
ಗಂಡಸರು : ಹೆಂಗಸರು : ಮಕ್ಕಳು :

14. ಮಲ್ಲಿಗೆ ಬೆಳೆಯ ಸರಾಸರಿ ಪ್ರಮಾಣ ( ಚೆಂಡುಗಳಲ್ಲಿ) :

15. ಕುಟುಂಬದ ಒಟ್ಟು ಆದಾಯ (ವಾರ್ಷಿಕ) :

16. ಮಲ್ಲಿಗೆಯಿಂದ ಲಭಿಸುವ ಆದಾಯ :

17. ಮಲ್ಲಿಗೆ ಬೆಳೆಗೆ ತಗಲುವ ವಾರ್ಷಿಕ ಆದಾಯ :

18. ಮಲ್ಲಿಗೆಯೊಂದಿಗೆ ಬೆಳೆಸಲಾಗುವ ಇತರೆ ಪುಷ್ಪಗಳು

| ಪುಷ್ಪ | ಕನ ಕಾಂಬರ | ಸೇವಂತಿಗೆ | ಚೆಂಡು ಹೂವು | ಗುಲಾಬಿ | ಮುತ್ತು ಮಲ್ಲಿಗೆ | ಜಾಜಿ ಮಲ್ಲಿ ಗೆ | ಗುಂಡು ಮಲ್ಲಿಗೆ | ಇತರ |
|---|---|---|---|---|---|---|---|---|
| ಪ್ರಮಾಣ | | | | | | | | |

19. ಗಿಡಗಳ ಪ್ರಾಯ :

20. ಗಿಡಗಳ ಸಂಖ್ಯೆ :

21. ಗಿಡಗಳ ಮೂಲ :

| ತೋಟಗಾರಿಕಾ ಇಲಾಖೆ | ಸಮುದಾಯ ಸಂಘ ಸಂಸ್ಥೆಗಳು | ವಾರದ ಸಂತೆ | ತೋಟಗಾರಿಕಾ ಇಲಾಖೆ | ಶ್ರೀ ಕ್ಷೇತ್ರ ಧ.ಗ್ರಾ.ಯೋಜನೆ | ಇತರ |
|---|---|---|---|---|---|
| | | | | | |

22. ಮಲ್ಲಿಗೆ ಬೆಳೆಯಲು ಕಾರಣ :

| ಜೀವನೋಪಾಯ | ಉಪ ವೃತ್ತಿ | ಸಂಘಟನೆಗಳ ಪ್ರೇರಣೆ |
|---|---|---|
| | | |

23.ಮಲ್ಲಿಗೆ ಬೆಳೆಗೆ ಹಣಕಾಸಿನ ಮೂಲಗಳು :

| ವಾಣಿಜ್ಯ ಬ್ಯಾಂಕುಗಳು | ಸಹಕಾರಿ ಬ್ಯಾಂಕುಗಳು | ಸ್ವಂತ ಹಣ | ಖಾಸಗಿಮೂಲ | ಇತರ |
|---|---|---|---|---|
| | | | | |

24.ಮಲ್ಲಿಗೆ ಬೆಳೆಗೆ ನೀರಾವರಿ ಮೂಲಗಳು :

| ಬಾವಿ | ಕೊಳವೆ ಬಾವಿ | ಸಾರ್ವಜನಿಕ ನಲ್ಲಿ | ಕೆರೆ/ತೋಡು | ಇತರ |
|---|---|---|---|---|
| | | | | |

25.ಮಲ್ಲಿಗೆ ಗಿಡಗಳಿಗೆ ಬಳಸುವ ಗೊಬ್ಬರ :

| ಹಟ್ಟಿ ಗೊಬ್ಬರ | ಹಟ್ಟಿ ಗಂಜಲ | ಸುಡು ಮಣ್ಣು | ನೆಲಕಡಲೆ ಹಿಂಡಿ | ಕಹಿ ಬೇವಿನ ಹಿಂಡಿ | ರಾಸಾಯನಿಕ ಗೊಬ್ಬರ | ಇತರ |
|---|---|---|---|---|---|---|
| | | | | | | |

26.ಮಲ್ಲಿಗೆ ಗಿಡಗಳಿಗೆ ತಗಲುವ ರೋಗಗಳು :

| ಗೆದ್ದಲು ಹುಳದ ಬಾಧೆ | ಎಲೆ ಉದುರುವುದು | ಮೊಗ್ಗು ಮುದುಡುವುದು | ಬೆಂಕಿರೋಗ | ಇತರ |
|---|---|---|---|---|
| | | | | |

23. ಮಲ್ಲಿಗೆ ಕೃಷಿಯಿಂದಾಗಿ ನಿಮ್ಮ ಆದಾಯ ಹೆಚ್ಚಾಗಿರುತ್ತದೆ. : ಇದೆ / ಇಲ್ಲ

24. ಮಲ್ಲಿಗೆ ಬೆಳೆ ಪ್ರದೇಶದ ವಿಸ್ತೀರ್ಣ ಅಗಿದೆಯೇ : ಇದೆ/ ಇಲ್ಲ

25. ಮಲ್ಲಿಗೆ ಬೆಳೆಯಲ್ಲಿ ಹೆಚ್ಚಳ ಆಗಿದೆಯೇ : ಇದೆ/ ಇಲ್ಲ

26. ನಿಮ್ಮ ವೃತ್ತಿಯ ಪಲ್ಲಟವಾಗಿದೆಯೇ : ಇದೆ/ ಇಲ್ಲ

ಹಿಂದಿನ ವೃತ್ತಿ ಇಂದಿನ ವೃತ್ತಿ

27. ಮಲ್ಲಿಗೆ ಬೆಳೆಯಲ್ಲಿ ನಿಮಗೆ ಎದುರಾಗುವ ಸಮಸ್ಯೆಗಳಾವುವು ?

28. ಮಲ್ಲಿಗೆ ಕೃಷಿಯ ಅಭಿವೃದ್ಧಿಗೆ ನಿಮ್ಮ ಸಲಹೆಗಳು :

ಅನುಬಂಧ-೨

# ಪುಷ್ಪೋದ್ಯಮ

ಮಲ್ಲಿಗೆ ಕೃಷಿ - ವರ್ತಮಾನ ಮತ್ತು ಭವಿಷ್ಯ
ದಕ್ಷಿಣ ಕನ್ನಡ ಜಿಲ್ಲೆಯ ಒಂದು ಅಧ್ಯಯನ

## ಮಲ್ಲಿಗೆ ಮಾರಾಟಗಾರರ ಪ್ರಶ್ನಾವಳಿ

1. ಹೆಸರು ಮತ್ತು ವಿಳಾಸ : ಗ/ಹೆ

2. ಜಾತಿ/ ಧರ್ಮ :

3. ವಿದ್ಯಾಭ್ಯಾಸ

4. ಮಾರಾಟ ಮಾಡುವ ಕೇಂದ್ರದ ಹೆಸರು :
ಮತ್ತು ಸ್ಥಳ, ತಾಲೂಕು

5. ಮಾರಾಟದ ಅನುಭವ (ವರ್ಷಗಳಲ್ಲಿ) :

6. ಮಾರಾಟ ಕೇಂದ್ರದ ಒಡೆತನ :
ಸ್ವಂತ ಕಟ್ಟಡ /ಖಾಸಗಿ/ಸಾರ್ವಜನಿಕ ಸ್ಥಳ
ಸ್ಥಳೀಯ ಸರಕಾರಿ ಕಟ್ಟಡ/ ಇತರ

7. ತಿಂಗಳ ಬಾಡಿಗೆ :

8. ಮಾರಾಟ ಮಾಡುತ್ತಿರುವ ಪುಷ್ಪಗಳು :
ಮಂಗಳೂರು ಮಲ್ಲಿಗೆ, ಸೇವಂತಿ, ಗುಲಾಬಿ,
ಕಾಕಡ, ಕನಕಾಂಬರ/ ಪಿಂಗಾರ/ಕೇದಗೆ /ಇತರ

9. ಪುಷ್ಪ ಉತ್ಪನ್ನಗಳು :
ಪುಷ್ಪ ಗುಚ್ಛ/ ವಿಶೇಷ ಪುಷ್ಪಮಾಲೆ/ಇತರ

10. ಮಲ್ಲಿಗೆ ಲಭಿಸುವ ಪ್ರಧಾನ ರಖಂ ಕೇಂದ್ರ :

11. ಇತರ ಹೂವುಗಳ ಪ್ರಧಾನ ರಖಂ ಕೇಂದ್ರ :

12. ಮಲ್ಲಿಗೆ ಪೂರೈಕೆಯ ಸ್ಥಳೀಯರ ಸಂಖ್ಯೆ :

13. ಪೂರೈಕೆಯಾಗುತ್ತಿರುವ ಸ್ಥಳೀಯ ಮಲ್ಲಿಗೆ ಪುಷ್ಪದ
ಸರಾಸರಿ ಪ್ರಮಾಣ :

14. ಈ ಪಟ್ಟಣದಲ್ಲಿ ಅತೀ ಹೆಚ್ಚು ಮಾರಾಟವಾಗುವ ಪುಷ್ಪ :

15. ಮಲ್ಲಿಗೆಗೆ ಅತೀ ಹೆಚ್ಚು ಬೇಡಿಕೆಯಿರುವ ವಾರದ ದಿನಗಳು ?

16. ಮಲ್ಲಿಗೆಗೆ ಕಡಿಮೆ ಬೇಡಿಕೆಯಿರುವ ದಿನಗಳು :

17. ಮಲ್ಲಿಗೆಗೆ ಬೆಲೆ ನಿಗದಿಪಡಿಸುವವರು

18. ಮಲ್ಲಿಗೆಯ ಬೆಲೆ ವಾರದ ದಿನಗಳಲ್ಲಿ ಏರಿಳಿತಕ್ಕೆ ಒಳಗಾಗುವುದೇ ?

19. ಬೆಲೆ ನಿರ್ಣಯದ ನಿರ್ಧಾರಗಳು

20. ಮಲ್ಲಿಗೆ ಅಟ್ಟಿಯೊಂದಿಗೆ ನಿರ್ಧರಿಸಲ್ಪಟ್ಟ ಅತೀ ಹೆಚ್ಚಿನ ಬೆಲೆ ಎಷ್ಟು? :

21. ಮಲ್ಲಿಗೆಯ ಅಟ್ಟಿಯೊಂದಕ್ಕೆ ನಿರ್ಧರಿಸಲ್ಪಟ್ಟ ಅತೀ ಕಡಿಮೆ ಬೆಲೆ ಎಷ್ಟು :

22. ದಿನವೊಂದರ ಸರಾಸರಿ ಮಲ್ಲಿಗೆ ವ್ಯವಹಾರ(ಸರಾಸರಿ) ;

23. ಪುಷ್ಪ ಮಾರಾಟದಲ್ಲಿ ಅತ್ಯಂತ ಲಾಭದಾಯಕ ಪುಷ್ಪ ಯಾವುದು ? :

ಲಾಭದಾಯಕ ಪುಷ್ಪಗಳಿಗೆ ನಷ್ಟದ ಭೀತಿ ಜಾಸ್ತಿಯಿರುತ್ತದೆಯೇ? :

24. ದೀರ್ಘ ಬಾಳಿಕೆಯ ಪುಷ್ಪ ಯಾವುದು ?

ಅದರ ಬೆಲೆಯಲ್ಲಿ ಏರಿಳಿತ ಉಂಟಾಗುವುದೇ :

25. ಅತೀ ಹೆಚ್ಚು ಕಷ್ಟ-ನಷ್ಟ (Risk) ಅಪಾಯಗಳನ್ನು

ಎದುರಿಸಬೇಕಾದ ಪುಷ್ಪ :

26. ಸ್ಥಳೀಯ ಮಲ್ಲಿಗೆ ದರ ಪಾವತಿಯಲ್ಲಿ ಏರಿಳಿತವಿದೆಯೇ :

27. ಸ್ಥಳೀಯ ಮಲ್ಲಿಗೆ ಪೂರೈಕೆಗೆ ಪಾವತಿ ವಿಧಾನ-

ಮಾಸಿಕ/ಪಾಕ್ಷಿಕ/ಸಾಪ್ತಾಹಿಕ/ದೈನಿಕ/ಇತರ :

28. ಮಲ್ಲಿಗೆಯನ್ನು ಖರೀದಿಸುವ ಖಾಯಂ ಗ್ರಾಹಕರಿರುವರೇ ? :

ಯಾವ ಕಾರಣಕ್ಕಾಗಿ ಅವರು ನಿಮ್ಮ ಖಾಯಂ ಗ್ರಾಹಕರಾಗಿದಾರೆ ? :

29. ಯಾವ ವರ್ಗದವರು ಹೆಚ್ಚು ಮಲ್ಲಿಗೆಯನ್ನು ಖರೀದಿಸುವರು

ಪ್ರಾರ್ಥನಾಲಯ/ವಾಹನ/ ಚಾಲಕರು/ಮಹಿಳೆಯರು/ಪುರುಷರು/ಇತರ:

30. ಪುಷ್ಪ ಸಂರಕ್ಷಣೆಗಾಗಿ ಶೀತಲೀಕರಣ ವ್ಯವಸ್ಥೆಯಿದೆಯೇ : ಇದೆ / ಇಲ್ಲ

31. ಈ ವೃತ್ತಿಗಾಗಿ ಹಣಕಾಸು ಸಹಾಯವನ್ನು ಪಡೆದಿರುವಿರಾ ? : ಇದೆ / ಇಲ್ಲ

32. ಹಣಕಾಸು ಮೂಲ- ವಾಣಿಜ್ಯ ಬ್ಯಾಂಕು/ ಸಹಕಾರಿ ಸಂಘ/

ಗ್ರಾಮೀಣ ಬ್ಯಾಂಕು/ ಲೇವಾದೇವಿದಾರರು/ಇತರ :

33. ನೀಡುತ್ತಿರುವ ಬಡ್ಡಿ ದರ ಎಷ್ಟು? :

34. ಮಲ್ಲಿಗೆ ಮಾರಾಟದಲ್ಲಿ ಬೆಲೆ ಸ್ಪರ್ದೆಯಿರುತ್ತದೆಯೇ ? :

35. ಪುಷ್ಪ ಮಾರಾಟಗಾರರು ಸಂಘಟಿಸಿರುವರೇ ? :

36. ಏಕ ರೀತಿಯ ಬೆಲೆಯಿದ್ದಾಗ ಗ್ರಾಹಕರ ಆಕರ್ಷಣೆಗಾಗಿರುವ ತಂತ್ರಗಾರಿಕೆಯೇನಾದರೂ ಇದೆಯೇ ? :

37. ನಿಮ್ಮ ಸಂಸ್ಥೆಯಲ್ಲಿ ಎಷ್ಟು ಮಂದಿ ಉದ್ಯೋಗಿಗಳಿದ್ದಾರೆ ? :

38. ನೀವು ಈ ಉತ್ಪನ್ನದೊಂದಿಗೆ ಬೇರೆ ಯಾವ ಉತ್ಪನ್ನಗಳನ್ನು ಮಾರಾಟ ಮಾಡುವಿರಿ ? :

39. ನೀವು ಈ ವೃತ್ತಿಯೊಂದಿಗೆ ಬೇರೆ ಯಾವುದಾದರೂ ವಾಣಿಜ್ಯ ಸೇವೆ ನೀಡುವಿರಾ ? :

40. ಪುಷ್ಪ ವ್ಯವಹಾರದ ಹೊರತಾಗಿ ನಿಮಗೆ ದೊರೆಯುವ ಮಾಸಿಕ ಆದಾಯ ಎಷ್ಟು ? :

41. ದಿನವೊಂದರಲ್ಲಿ ಎಷ್ಟು ಗಂಟೆಗಳ ಕಾಲ ಈ ವೃತ್ತಿಯಲ್ಲಿ ತೊಡಗಿಸಿಕೊಳ್ಳವಿರಿ ? :

42. ನೀವು ವಾರದ ಯಾವ ದಿನವನ್ನು ರಜಾದಿನವಾಗಿ ಪರಿಗಣಿಸುವಿರಿ ? ಯಾಕೆ ? :

43. ಗ್ರಾಹಕರು ನಗದು ಪಾವತಿಸದ ಸನ್ನಿವೇಶಗಳಿವೆಯೇ ? :

44. ನೀವು ವ್ಯಾಪಾರದಲ್ಲಿ ಪಾಲುಗಾರಿಕೆಯ ಉದ್ಯಮವನ್ನು ಮಾಡಿಕೊಂಡಿರುವಿರಾ ? :

45. ನೀವು ರಖಂ ವ್ಯವಹಾರವನ್ನು ಮಾಡುವಿರಾ ? :

46. ಮಲ್ಲಿಗೆ ಮಾರಾಟದಲ್ಲಿ ನಿಮಗೆ ಎದುರಾಗುತ್ತಿರುವ ಸಮಸ್ಯೆಗಳಾವುವು ? 1.

2.

47. ಈ ಸಮಸ್ಯೆಗಳ ಪರಿಹಾರಕ್ಕೆ ಯಾವ ಸಲಹೆಯನ್ನು ನೀಡುವಿರಿ ? :

48. ಪುಷ್ಪ ವ್ಯವಹಾರದಲ್ಲಿ ಹೂವಿನ ಹೊರತಾಗಿ ನಿಮಗೆ ತಗಲುವ

ಖರ್ಚುಗಳಾವುವು ? 1

2

3

49. ನೀವು ದೈನಂದಿನ ಆಯವ್ಯಯಗಳನ್ನು ದಾಖಲಿಸಿಕೊಳ್ಳುವಿರಾ ? :

50. ಹಾಗಾದರೆ ಖರ್ಚು ಕಳೆದು ನಿಮ್ಮ ದೈನಂದಿನ ಸರಾಸರಿ ಆದಾಯ ? :

51. ಪುಷ್ಪ ವ್ಯವಹಾರವು ಭವಿಷ್ಯದಲ್ಲಿ ಅಧಿಕವಾಗಬಹುದೇ ? :

ಯಾವ ಆಧಾರದಲ್ಲಿ ಈ ಕಲ್ಪನೆಯನ್ನು ಮಾಡಿರುವಿರಿ ? :

ಅನುಬಂಧ-೩

## ಛಾಯಾ ಚಿತ್ರಗಳು



ಚಿತ್ರ-೧ ಕರಾವಳಿ ಮಲ್ಲಿಗೆ



ಚಿತ್ರ-೨ ಸೇವಂತಿಗೆ ಮತ್ತು ಆಸ್ಟರ್



ಚಿತ್ರ-೩ ಸೇವಂತಿಗೆ ಮತ್ತು ಚೆಂಡು ಹೂ



ಚಿತ್ರ-೪ ಕನಕಾಂಬರ



ಚಿತ್ರ-೫ ಗುಲಾಬಿ ಮತ್ತು ಆಸ್ಟರ್



ಚಿತ್ರ-೬ ಜರ್ಬೆರಾ,ಗ್ಲೇಡಿಯಾಲಸ್,ಬ್ಲೂ ಡೈಸಿ ಪುಷ್ಪಗುಚ್ಛ



ಚಿತ್ರ-೭ ಜಾತ್ಯಾತೀತ ಪುಷ್ಪ ಮಾರುಕಟ್ಟೆ



ಚಿತ್ರ-೮ ಸಾಂಪ್ರದಾಯಿಕ ಪುಷ್ಪಗಳು



ಚಿತ್ರ-೯ ಬಿಳಿಸೇವಂತಿಗೆ ಮತ್ತು ಡೈಸಿ



ಚಿತ್ರ-೧೦ ಮಲ್ಲಿಗೆ ಮೊಗ್ಗಿನ ಜಡೆ



ಚಿತ್ರ-೧೧ ಮಲ್ಲಿಗೆ



ಚಿತ್ರ-೧೨ ಚೆಂಡು ಮಲ್ಲಿಗೆ



ಚಿತ್ರ-೧೩ ಕನಕಾಂಬರ



ಚಿತ್ರ-೧೪ ಆಸ್ಟರ್



ಚಿತ್ರ-೧೫ ಆರ್ಕಿಡ್



ಚಿತ್ರ-೧೬ ಅಂಥೂರಿಯಂ



ಚಿತ್ರ-೧೭ ಬರ್ಡ್ ಆಫ್ ಪ್ಯಾರಡೈಸ್



ಚಿತ್ರ-೧೮ ಕ್ಯಾಲಾ ಲಿಲ್ಲೀ



ಚಿತ್ರ-೧೯ ಕಾರ್ನೇಶನ್



ಚಿತ್ರ-೨೦ ಜರ್ಬೇರಾ



ಚಿತ್ರ-೨೧ ಗುಲಾಬಿ



ಚಿತ್ರ-೨೨ ಸಂಪಿಗೆ



ಚಿತ್ರ-೨೩ ಗ್ಲಾಡಿಯಸ್



ಚಿತ್ರ-೨೪ ಸುಗಂಧರಾಜ



ಚಿತ್ರ-೨೫ ಸ್ಟಾಟೀಸ್



ಚಿತ್ರ-೨೫ ಸಾಲ್ಡಾಗೊ

# ಪರಾಮರ್ಶನ ಸೂಚಿ

## ಪುಸ್ತಕಗಳು


1. Bhat, Shyam N.; 1998, 'South Kanara :- 1799-1860, A study on Colonial Administration and Regional Response, Mittel publishers, New Delhi.

2. Bhat, Gururaj P.; 1975, Studies in Tuluva History and Culture', Tulu Samshodana Kendra, Udupi.

3. Chagaleru, Jiyaulla.; 1993, Economics of Production and Marketing of Chrysanthemum Flowers in Kolar dist, Karnataka, (Unpub.) M.Sc Thesis, UAS, Bangalore.

4. Chandra, V.; 1982, Cultivation and Utilisation of Aromatic Plants, CSIR, New Delhi.

5. Devi, Neeraja.; 1990, Economics of Production and Marketing of Kakade Flowers in Banglore District of Karnataka State,. M.Sc Thesis (Unpub.), Department of Agricultural Science, UAS, Bangalore.

6. Dattatreyalu, M.; 1997, Export Potentials of Fruits, Vegetables and Flowers from India, NABARD, Mumbai.

7. Gajanana, T.M.; and Subrahmanya K.V; 2001, Gladiolus Production and Marketing in Karnataka: An Economic analysis. Mohit Publication New Delhi.

8. Himakara, A.K.; 1987, The History of Agricultural Production in South Kanara during 18th century, M.Phil Dissertation, JNU, Delhi.

9. Janakiram, T and Rao T.M.; 2001, Chrysanthemum, Indian Institute of Horticultural Research, Bangalore.

10. Kaul and Dadlani.; 1995, Prosperity of Floriculture in India, Horticulture Division, Dept.of Agriculture and Co-operation, GOI, New Delhi.

11. Kombairaju, S.; 1970, Studies on the Economics of Production of Chrysanthemum and Jasmine Flowers in Periyanakkapalyam and Sarkarsamakulam Blocks of Coimbatore district Tamilnadu. M.Sc (Agri) Thesis (Unpub), Submited to Tamilnadu Agriculture University, Coimbatore.

12. Kumar, Ramesh S.C.; 1989, Economics of Production and Investment in Jasmine flowers in Madhurai District in Tamilnadu,(Unpub) M.Sc.Thesis, UAS, Bangalore.

13. Kolavalli, Shashi.; 1991, Floricultural Industry in India, Oxford and IBH Publishing Co., New Delhi.

14. Lekhi, R.K.; Joginder Singh; 2008, Agricultural Economics, Kalyani Publishers, Bombay.

15. Mahandule, D.K.; 1983, Economics of Production and Marketing of Chrysanthemum in Ahmadnagar District of Maharastra, Unpub Thesis submitted to Mahatma Phule Agricultural University, Rahuri.

16. Prasad, S.and Kumar U.; 2008, Commercial Floriculture, Agrobios (India) Updesh Purohit Publication, Jodhpur.

17. Prakash, T.N.; 2002, High Tech Floriculture, Sustainability and food Security Issue – The case of Rose Cultivation around Bangalore city, UAS, Bangalore.

18. Ramesh, G.P.; 1997, Economics of Production and Marketing of Crossandra Flower in Chitrdurga District, Karnataka, M.Sc. Thesis, UAS, Bangalore.

19. Shanmugan, V.; 2007, Commercial Flower Cultivation, Mohit Publications, New Delhi.

20. Subrahmanyam,K.V.; 1989, Economics of Production and Marketing of Jasmine in Kolar District, Karnataka, Division of Economics and stastics, Indian Institute of Horticultural Research, Bangalore.

21. Subrahmanyam K.V.; 1995, Production and marketing Research on Ornamental Plants, Malhotra Publishing House, New Delhi.

22. Shivaraman, N.; 1998, Sustainability Analysis of Commercial Floriculture- A Comparison of High Tech and Field Rose Cultivation around Bangalore, Unpub. M.Sc. Dissertation, UAS, Bangalore.

23. Shankaran, S.; 1989, Indian Economy, Problems Policies and Development.

24. Shishila, Prabhakara, B.; 1998, Principles of Managerial Economics, Spell Bound Publications, Haryana.

25. Thippaiah, P.; 2005, Floriculture in Karnataka: Performance, Problems and Prospects, Agricultural Development and Rural Transformation Unit, Institute for Social and Economic Change, Nagarbavi, Bangalore.

26. Tilekar,S.N.and Nimbadkar, C.A.; 2003, Self Generated Marketing system for Rose – Cut Flowers Produced under Hi- tech Agriculture, Agricultural Economics Research Association, New Delhi.

27. Varadarajan,S and Ravindran,N.; 1974, Economics of Flowers Marketing in Coimbatore city, Research Report, Tamilnadu Agricultural University Coimbatore.

28. Vikas, Singhal. 1995, Handbook of Indian Agriculture, Vikas Publishing House Pvt.Ltd. New Delhi.

29. Venugopal, Mulleria; 1989, A study of Jasmine Economy in Dakshina Kannada Distrct, Unpub. Dissertation submitted to Mangalore University.

30. ಅನಂತರಾಮು; ೧೯೯೭, ದಕ್ಷಿಣದ ಸಿರಿನಾಡು, ಅನಂತ ಪ್ರಕಾಶನ, ದೇವಾಂಬ, ಅಗ್ರಹಾರ ಮೈಸೂರು.

31. ಭಗವದ್ಗೀತೆ, ೯ನೇ ಅಧ್ಯಾಯ, ೨೭ನೇ ಶ್ಲೋಕ.

32. ದತ್ತಾತ್ರಿ ,ಎಸ್ .; ೨೦೦೭, ಕರ್ನಾಟಕದ ಕೃಷಿ ಮುಕುಟ, ಶ್ರೀನಿವಾಸ ಪುಸ್ತಕ ಪ್ರಕಾಶನ, ಬೆಂಗಳೂರು.

33. ಜೋಷಿ, ಜಿ.ವಿ ಮತ್ತು ನೋರ್ಬಟ್ ಲೋಬೊ ; ೨೦೦೯, ಕರಾವಳಿ ಕರ್ನಾಟಕದ ಅರ್ಥವ್ಯವಸ್ಥೆ , ಹಿಂದಿನಿಂದ ಇಂದಿನವರೆಗೆ, ಮಂಗಳ ಪ್ರಕಾಶನ ಮಂಗಳೂರು.

34. ಗಣಪತಿ ರಾವ್ ಐಗಳ್, ಎಂ.; ೧೯೨೩, ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ , ಶಾರದಾ ಪ್ರೆಸ್, ಮಂಗಳೂರು .

35. ಕಲ್ಲೂರ್ , ಎಂ . ಎಸ್ ., ಮತ್ತು ಪ್ರಭಾಕರ ಶಿಶಿಲ, ಕೃಷಿ ಅರ್ಥಶಾಸ್ತ್ರ, ಕಲಾ ಪ್ರಕಾಶನ, ಬೆಂಗಳೂರು.

36. ಕವಿತಾ ಕೃಷ್ಣ ; ಡಿ.ವಿ.ಜಿ ಯವರ 'ಮಂಕುತಿಮ್ಮನ ಕಗ್ಗ ' ತನುಮನ ಪ್ರಕಾಶನ, ಬೆಂಗಳೂರು .

37. ಕೇಶವ ಕೃಷ್ಣ ಕುಡ್ವ , ೧೯೪೮, ದಕ್ಷಿಣ ಕನ್ನಡದ ಇತಿಹಾಸ, ತುಳುವ ಚರಿತ್ರೆ , ಮಂಗಳೂರು .

38. ಕೃಷ್ಣಯ್ಯ ಗೌಡ, ಎಚ್ .ಆರ್., ಕರ್ನಾಟಕ ಆರ್ಥಿಕತೆ , ಸ್ಪಂದನ ಪ್ರಕಾಶನ ಬೆಂಗಳೂರು .

39. ನರಸಿಂಹ ಸ್ವಾಮಿ, ಕೆ .ಎಸ್.; ೧೯೮೬ , 'ಮಲ್ಲಿಗೆ ಮಾಲೆ ' ಬಾಕಿನ ಆಪಿ ಪ್ರಕಾಶನ ಬೆಂಗಳೂರು .

40. ರಾಮನ್ , ಬಿ. ಎಸ್. ; ೨೦೦೪, ಭಾರತದ ಅರ್ಥವ್ಯವಸ್ಥೆ , ಯುನೈಟೆಡ್ ಪಬ್ಲಿಕೇಶನ್ಸ್ ಮಂಗಳೂರು .

41. ರೈ ಮೋಹನ ಕೃಷ್ಣ . , ತುಳುನಾಡಿನ ಬೌಗೋಳಿಕ ಎಲ್ಲೆ ಕಟ್ಟುಗಳು , ವಿವೇಕ ರೈ ಮತ್ತು ಇತರರು.

42. ಸಂಪಾಜೆ , ದೇವಿಪ್ರಸಾದ್ .; ಅಮರ ಸುಳ್ಯದ ಸ್ವಾತಂತ್ರ್ಯ ಸಂಗ್ರಾಮ , ಕಾಂತಾವರ ಕನ್ನಡ ಸಂಘ , ಸುಳ್ಯ .

43. ಸುಭಾಷಿತ ರತ್ನ ಸಮುಚ್ಛಯ ; ೨೦೦೫, ಸುಭಾಷಿತ ಮಂಜರಿ , ಕನ್ನಡ ಸಾಹಿತ್ಯ ಪರಿಷತ್ .

44. ಶೆಟ್ಟಿ , ಎಸ್.ಡಿ , ತುಳುನಾಡಿನ ಸಾಂಸ್ಕೃತಿಕ ಇತಿಹಾಸ , ವಿವೇಕ ರೈ ಮತ್ತು ಇತರರು .

45. ಶಿಶಿಲ , ಪ್ರಭಾಕರ ; ೨೦೦೧ , ಅಭಿವೃದ್ಧಿ ಮತ್ತು ಯೋಜನಾ ಅರ್ಥಶಾಸ್ತ್ರ , ಕಲಾ ಪ್ರಕಾಶನ ಬೆಂಗಳೂರು .

46. ಶಿಶಿಲ , ಪ್ರಭಾಕರ .;೨೦೦೨ , ಆರ್ಥಿಕ ಚಿಂತನವಾಹಿನಿ , ಮಂಗಳ ಪ್ರಕಾಶನ , ಮಂಗಳೂರು.

47. ಶಿಶಿಲ, ಪ್ರಭಾಕರ.; ೨೦೦೩, ಆಧುನಿಕ ಭಾರತದ ಆರ್ಥಿಕ ಸಮಸ್ಯೆಗಳು , ಕಲಾ ಪ್ರಕಾಶನ ಬೆಂಗಳೂರು .

48. ಶಿಶಿಲ , ಪ್ರಭಾಕರ .; ೨೦೧೦ , ಕೊಡಗನ್ನುಳಿಸಿದ ಕಲಾವಿದ ದೇವಿ ಪ್ರಸಾದ್ , ಕಾಂತಾವರ ಕನ್ನಡ ಸಂಘ , ಸುಳ್ಯ .

49. ವಿವೇಕ ರೈ , ಮತ್ತು ಇತರರು , ಮಂಜೇಶ್ವರ ಗೋವಿಂದ ಪೈ , ತುಳುನಾಡು ಪೂರ್ವ ಸ್ಮೃತಿ , (ಸಂ) ತುಳು ಸಾಹಿತ್ಯ ಚರಿತ್ರೆ , ಪ್ರಸಾರಾಂಗ , ಕನ್ನಡ ವಿಶ್ವ ವಿದ್ಯಾಲಯ, ಹಂಪಿ.

ಲೇಖನಗಳು

1. Acharya, T.K.T. and Patil, S.D; Economics of Chrysanthemum Cultivation in Ahmed Nagar and Parner Tehsils of Ahmed Nagar District, Shetakari, March, 10, 1970.

2. Ajjan, N and N. Ravindran, Economics of Production and Marketing of Cut Flowers – Carnation in Nilgiri District, Tamil Nadu, 2002.

3. Agarwal, V.K., Problems of Agricultural Marketing in India, Indian Journal of Marketing, 11 (9), 1981.

4. Ashwath, C. Rao, T.M. and Janakiram, T., Flower Market Scenario in Bangalore, Kissan world, 25 (5) 1997.

5. Chengappa, P.G. and T.V. Reddy; Post Harvest Handling and Marketing of Traditional Flowers, Indian Society of Ornamental Horticulture, NHB.

6. Devi, Neeraja; Economics of Production and Marketing of Kakada Flowers in Bangalore District of Karnataka state. An M.Sc. Thesis, Dept of Agri Economics, UAS, Bangalore.

7. Gaikwad, M.R., Chrysanthemum –a Flower of Commercial Value in Maharastra, Indian Horticulture, 26(3) 1989.

8. Jayasheela, Southern Economist, Aug, 2008.

9. Kumar, Kiran P., Jayasheela and V.Basil Hans; Commercial Floriculture in India ; Opportunities for Cut Flowers Development, Sothern Economist, Oct 2007.

10. Laws, Nancy.; World Floriculture Trade over view, Floriculture International, June 2002.

11. Manjula, N. and Belli, R.B.; Profitable Cultivation of Crossandra in dryland Areas, Farmers and Parliament 13(3).1996.

12. Nagarajan, S.S.; Soundarya Kanakambaram, Kissan World, 19(12), 1992.

13. Nambisan, K.M.P., and Krishnan, B.M.; Gundumallige-the Romantic Jasmine, Indian Horticulture 24(4) 1980.

14. Padmaiah, M., Chinnatekur Watershed .Economics of Jasmine Cultivation, Indian Horticulture, 4(2) 1996.

15. Rao, Nageshwar., Higher Employment and Income Potential of Horticultural crops, Indian Journal of Agricultural Economics, 1997.

